ಆತ್ಮೀಯರು ಶ್ರೀ. ಗಣೇಶ ಭಟರಿಗೆ,

ವಿದ್ಯಾಪಕ್ಷ್ಯವರ್ಧಕವಾಗಿ

(ಎಂ. ಎ. ಹೆಗಡೆ)

2-4-02

# ಅಲಂಕಾರ ತತ್ತ್ವ

( ಅಲಂಕಾರಗಳ ಬಗೆಗೆ ವಿಸ್ತೃತವಾಗಿ ಚರ್ಚಿಸುವ ಪ್ರಪ್ರಥಮ ಪುಸ್ತಕ )

ಲೇಖಕರು:

ಪ್ರಾ. ಎಂ. ಎ. ಹೆಗಡೆ

ಸಂಸ್ಕೃತ ವಿಭಾಗ, ಎಂ. ಜಿ. ಸಿ. ಕಾಲೇಜು, ಸಿದ್ದಾಪುರ – ೫೮೧೩೫೫ (ಉ. ಕ.)

ಸಮಾಜ ಪುಸ್ತಕಾಲಯ, ಶಿವಾಜಿ ಬೀದಿ, ಧಾರವಾಡ.

ಪ್ರಕಾಶಕರು :
ಮನೋಹರ **ಘಾಣೇಕರ**, ಬಿ.ಎ, ಬಿ. ಕಾಂ.
ಸಮಾಜ ಪುಸ್ತಕಾಲಯ, ಧಾರವಾಡ. – ೫೮೦೦೦೧

ಪ್ರಥಮ ಮುದ್ರಣ : ೨೦೦೧

© ಲೇಖಕರ ವಶ

ಅಕ್ಷರ ಸಂಯೋಜನೆ,
**ಸರಸ್ವತಿ ಗ್ರಾಫಿಕ್ಸ್ , ಧಾರವಾಡ**

ಮುದ್ರಕರು :
**ಸರಸ್ವತಿ ಆಫ್‌ಸೆಟ್ ಪ್ರಿಂಟರ್ಸ್ ,**
ಶಿವಾಜಿ ಬೀದಿ.
ಧಾರವಾಡ – ೫೮೦೦೦೧.

ISBN - 81 - 7627 - 009 - 1

# ಲೇಖಕರ ಮಾತು

ನಾನು ಸಂಸ್ಕೃತ ಅಧ್ಯಾಪಕ; ಕನ್ನಡದ ಮೇಲೆ ಪ್ರೀತಿ. ಆದರೆ ಕನ್ನಡ ವಿದ್ಯಾರ್ಥಿಗಳಿಗೆ ಪಾಠ ಮಾಡಿದವನಲ್ಲ. ಇಂಥ ನನಗೆ ಒಮ್ಮೆ ೧೯೭೯ ರಲ್ಲಿ ಕನ್ನಡ ಜಾಣ ಪರೀಕ್ಷೆಗೆ ಕುಳಿತ ವಿದ್ಯಾರ್ಥಿಗಳ ಸಲುವಾಗಿ ಅಲಂಕಾರಗಳನ್ನು ಪಾಠ ಮಾಡುವ ಸಂದರ್ಭವೊದಗಿತು. ಕನ್ನಡದಲ್ಲಿ ನನಗೆ ತಿಳಿದಂತೆ ಅಲಂಕಾರಗಳ ಬಗೆಗೆ ಸ್ವಲ್ಪ ವಿವರವಾಗಿ ಹೇಳುವ ಗ್ರಂಥವೆಂದರೆ 'ಕನ್ನಡ ಕೈಪಿಡಿ' ಮಾತ್ರ. ಅದನ್ನು ಇಟ್ಟುಕೊಂಡು ನಾನು ಪಾಠ ಮಾಡಿದಾಗ ವಿದ್ಯಾರ್ಥಿಗಳು ಸಂತೋಷಪಟ್ಟರು. ಕನ್ನಡದಲ್ಲಿ ಅಲಂಕಾರಗಳ ಬಗೆಗೆ ವಿಸ್ತಾರವಾಗಿ ಚರ್ಚಿಸುವ ಗ್ರಂಥಗಳಿಲ್ಲವೆಂಬುದನ್ನು ನನ್ನ ಗಮನಕ್ಕೆ ತಂದರು. ಅದರಿಂದ ಪ್ರೇರಣೆ ಪಡೆದು ಈ ಕುರಿತು ಗ್ರಂಥವನ್ನು ರಚಿಸಬೇಕೆಂದು ಟಿಪ್ಪಣಿಗಳನ್ನು ಸಿದ್ಧಗೊಳಿಸಿದೆ. ಸಿದ್ಧವಾದ ನಂತರ ಅದು ಮನೆಯ ಕಪಾಟಿನಲ್ಲಿ ಭದ್ರವಾಗಿತ್ತು.

ಈಚೆಗೆ ನನ್ನ ಕಿರಿಯ ಮಿತ್ರ ವಿಠ್ಠಲ ಭಂಡಾರಿಯವರು ಸಿದ್ದಾಪುರ ಕಾಲೇಜಿನಲ್ಲಿ ತಾತ್ಕಾಲಿಕ ಉಪನ್ಯಾಸಕರಾಗಿ ಸೇರಿದರು. ಅಲಂಕಾರ, ಛಂದಸ್ಸುಗಳಿಗೆ ಸಂಬಂಧಿಸಿದಂತೆ ನನ್ನೊಡನೆ ಚರ್ಚಿಸುತ್ತಿರುವಾಗ ನನ್ನ ಟಿಪ್ಪಣಿಗಳ ನೆನಪಾಗಿ ಅವರ ಕೈಗೆ ಕೊಟ್ಟೆ. ಅವರು ಅದನ್ನೆಲ್ಲ ಓದಿ ಅದರ ಉಪಯುಕ್ತತೆಯ ಬಗ್ಗೆ ಶಿಫಾರಸು ಮಾಡಿದರು. ಅದನ್ನು ಗ್ರಂಥ ರೂಪದಲ್ಲಿ ತರುವುದರ ಬಗ್ಗೆ ಒತ್ತಾಸೆ ನೀಡಿದರು. ಅವರೊಂದಿಗೆ ಚರ್ಚಿಸಿದ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಹಸ್ತಪ್ರತಿಯ ಅಂತಿಮರೂಪವನ್ನು ಸಿದ್ಧಗೊಳಿಸಿದೆ. ಅಂತಿಮರೂಪವನ್ನು ಅವರಿಗೆ ತೋರಿಸಬೇಕೆಂದಿತ್ತು. ಆದರೆ ಅವರಾಗಲೇ ನಮ್ಮ ಕಾಲೇಜಿನಿಂದ ಬೇರೆ ಕಡೆ ಹೋದುದರಿಂದ ಅದು ಸಾಧ್ಯವಾಗಲಿಲ್ಲ. ಈ ಸಂಬಂಧದಲ್ಲಿ ಶ್ರೀ ಮನೋಹರ ಘಾಣೇಕರರನ್ನು ಸಂಪರ್ಕಿಸಿದಾಗ ಅವರು ಹಸ್ತಪ್ರತಿಯನ್ನು ಪರಿಶೀಲಿಸಿ ಪ್ರೋತ್ಸಾಹಿಸಿ ಪ್ರಕಟಣೆಯ ಹೊಣೆಯನ್ನು ಹೊತ್ತಿದ್ದಾರೆ. ಅವರೆಲ್ಲರಿಗೆ ಅನಂತ ಕೃತಜ್ಞತೆಗಳು.

ಇದು ಸಂಸ್ಕೃತದ ಹಿನ್ನೆಲೆಯನ್ನು ಹೊಂದಿರದ ಅಧ್ಯಾಪಕರು ಹಾಗೂ ವಿದ್ಯಾರ್ಥಿಗಳನ್ನು ಗಮನದಲ್ಲಿರಿಸಿಕೊಂಡು ಬರೆದ ಪುಸ್ತಕ. ಗ್ರಂಥದ ಗಾತ್ರ ಹೆಚ್ಚುವ ಭೀತಿಯಿಲ್ಲವಾಗಿದ್ದರೆ ಇನ್ನಷ್ಟು ವಿವರವಾಗಿ, ಇನ್ನಷ್ಟು ತಿಳಿಯಾಗಿ ಹೇಳಬಹುದಿತ್ತೆಂದು ಅನಿಸುತ್ತದೆ. ಅದು ಬೇಕೆನಿಸಿದರೆ ಮುಂದೆ ನೋಡೋಣವೆಂದಿದ್ದೇನೆ. ಆಸಕ್ತರ ಪ್ರತಿಕ್ರಿಯೆಗಳಿಗಾಗಿ ಕಾದಿದ್ದೇನೆ. ಇದರ ಉಪಯುಕ್ತತೆಯು ಸಿದ್ಧವಾದರೆ ಸುಧಾರಣೆಗೆ ಅವಕಾಶವೊದಗುತ್ತದೆಯಷ್ಟೇ? ಆಸಕ್ತರು ಈ ಗ್ರಂಥದ ಲೋಪ – ದೋಷಗಳನ್ನು ಎತ್ತಿತೋರಿಸಿದರೆ ತಿದ್ದಿಕೊಳ್ಳುವುದಕ್ಕೆ ಅನುಕೂಲ.

ಈ ಗ್ರಂಥವನ್ನು ರಚಿಸಲು ಪ್ರೇರಣೆ ನೀಡಿದ ವಿದ್ಯಾರ್ಥಿಗಳು, ವಿಶೇಷ ಆಸಕ್ತಿ ವಹಿಸಿದ ಗೆಳೆಯ ಶ್ರೀ ವಿಠ್ಠಲ ಭಂಡಾರಿ, ಪ್ರಕಾಶನದ ಹೊಣೆಹೊತ್ತ ಸಮಾಜ ಪುಸ್ತಕಾಲಯದ ಘಾಣೇಕರ ಸೋದರರು, ಅಕ್ಷರ ವಿನ್ಯಾಸ, ಮುದ್ರಣ – ಹೀಗೆ ವಿವಿಧ ಹಂತಗಳಲ್ಲಿ ದುಡಿದ ಯಾವತ್ತೂ ವ್ಯಕ್ತಿಗಳಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ಎಂ. ಎ. ಹೆಗಡೆ.

ಸಿದ್ದಾಪುರ
ದಿ: ೧-೧೧-೨೦೦೧.

ವಿಳಾಸ : –
ಪ್ರಾ. ಎಂ. ಎ. ಹೆಗಡೆ.
ಸಂಸ್ಕೃತ ವಿಭಾಗ,
ಎಂ. ಜಿ. ಸಿ. ಕಾಲೇಜು,
ಸಿದ್ದಾಪುರ. (ಉ.ಕ.)



# ವಿಷಯಸೂಚಿ

# ಸಂಕ್ಷಿಪ್ತ ನಾಮಸೂಚಿ

| | | |
|---|---|---|
| ಜೈ. ಭಾ | → | ಜೈಮಿನೀ ಭಾರತ. |
| ಪಂ. ಭಾ | → | ಪಂಪಭಾರತ. |
| ಗದಾ. | → | ಗದಾಯುದ್ಧ. |
| ರಾ. ವಿ. | → | ರಾಜಶೇಖರ ವಿಳಾಸಂ. |
| ಗಿರಿಜಾ. | → | ಗಿರಿಜಾ ಕಲ್ಯಾಣ. |
| ಮ. ಪು. ಸಂ. | → | ಮಲ್ಲಿನಾಥ ಪುರಾಣ ಸಂಗ್ರಹ. |
| ಕುಸುಮಾ. | → | ಕುಸುಮಾವಳೀ ಕಾವ್ಯಂ. |
| ಬ. ರಾ. ವಿ. | → | ಬಸವರಾಜ ವಿಜಯ. |
| ಕುಮಾರ. | → | ಕುಮಾರವ್ಯಾಸ ಭಾರತ. |
| ಪಂಪ. ರಾ. | → | ಪಂಪರಾಮಾಯಣ. |
| ಲೀಲಾ. | → | ಲೀಲಾವತಿ. |
| ಹರಿ. | → | ಹರಿಶ್ಚಂದ್ರ ಕಾವ್ಯ. |
| ಯಶೋ. | → | ಯಶೋಧರಚರಿತ. |
| ನೇಮಿ. | → | ನೇಮಿನಾಥ ಪುರಾಣಂ. |
| ಭರತೇಶ. | → | ಭರತೇಶ ವೈಭವ. |
| ಅನಂತ. | → | ಅನಂತನಾಥ ಪುರಾಣ. |
| ಕಾದಂ. | → | ಕಾದಂಬರೀ. |
| ಕ. ಕಾ. ಪ್ರ. | → | ಕನ್ನಡಕಾವ್ಯ ಪ್ರಕಾಶ. |
| ಜ. ವಿ. | → | ಜಗನ್ನಾಥ ವಿಜಯಂ. |
| ಸೂಕ್ತಿಸುಧಾ. | → | ಸೂಕ್ತಿಸುಧಾರ್ಣವಂ. |
| ಕಾವ್ಯಾ. | → | ಕಾವ್ಯಾವಲೋಕನಂ |
| ಕಾ. ಸಾ. | → | ಕಾವ್ಯಸಾರಂ. |

# ಪೀಠಿಕೆ

ಭಾರತೀಯ ಕಾವ್ಯಮೀಮಾಂಸೆಯು ಯಾವಾಗಿನಿಂದ ಪ್ರಾರಂಭವಾಯಿತೆನ್ನುವುದು ಕಷ್ಟ. ಅದು ಶಾಸ್ತ್ರವಾಗಿ ವ್ಯವಸ್ಥಿತವಾದ ರೂಪವನ್ನು ಪಡೆದುಕೊಳ್ಳುವುದಕ್ಕಿಂತ ಎಷ್ಟೋ ಮೊದಲೇ ಅನೇಕ ವಿಚಾರಗಳು ರೂಪುಗೊಂಡಿರಬಹುದಾಗಿದೆ. ಅತ್ಯಂತ ಪ್ರಾಚೀನ ಸಾಹಿತ್ಯವೆನಿಸಿದ ವೇದಗಳಲ್ಲಿಯೇ '' ಅರಂಕೃತಿ '' ಯೆಂಬ ಶಬ್ದದ ಪ್ರಯೋಗವಿದೆ . ಉಪನಿಷತ್ತಿನಲ್ಲಿ **''ರಸೋವೈಸಃ''** ಎನ್ನುವಲ್ಲಿ ರಸ ಎಂಬ ಶಬ್ದವಿದೆ. ಯಾಸ್ಕರ ನಿರುಕ್ತದಲ್ಲಿ ಉಪಮಾಲಂಕಾರದ ವಿಶದವಾದ ವಿವೇಚನೆಯಿದೆ. ಭರತನ ನಾಟ್ಯಶಾಸ್ತ್ರದಲ್ಲಿ ಅಲಂಕಾರಶಾಸ್ತ್ರದ ಮೂಲಭೂತತತ್ವಗಳಾದ ವೃತ್ತಿ, ಗುಣ, ಅಲಂಕಾರ, ಭಾವ , ರಸ– ಇತ್ಯಾದಿಗಳ ಸ್ಪಷ್ಟವಾದ ಉಲ್ಲೇಖವುಂಟು. ಮುಂದಿನ ಆಲಂಕಾರಿಕರೂ ಕೂಡ ಭರತನನ್ನು ಆಚಾರ್ಯನೆಂದು ಮನ್ನಿಸಿ ಅವನ ಮಾತುಗಳನ್ನು ಪ್ರಮಾಣವೆಂದು ಮನ್ನಿಸುತ್ತಾರೆ.

ಭರತನ ನಾಟ್ಯಶಾಸ್ತ್ರವು ಮುಖ್ಯವಾಗಿ ನಾಟ್ಯಲಕ್ಷಣ ಗ್ರಂಥವಾದುದರಿಂದ ಕಾವ್ಯವಿಚಾರಗಳ ಚರ್ಚೆಯು ಅಲ್ಲಿ ಪ್ರಧಾನವಲ್ಲ. ಅಂತೆಯೇ ಕಾವ್ಯವಿಚಾರಗಳ ಚರ್ಚೆಗೇ ಮೀಸಲಾದ ಕೃತಿಯನ್ನು ರಚಿಸಿದ ಕೀರ್ತಿಯು ಸಲ್ಲುವುದು ಭಾಮಹನಿಗೆ. (ಕ್ರಿ.ಶ. ೬–೭ ನೇ ಶತಮಾನ ) ಇವನ 'ಕಾವ್ಯಾಲಂಕಾರ 'ವು ಅಲಂಕಾರಶಾಸ್ತ್ರದ ಬೆಳವಣಿಗೆಗೆ ನಾಂದಿಯನ್ನು ಹಾಡಿತು. ಭಾಮಹನು ತನ್ನ ಗ್ರಂಥದಲ್ಲಿ ಮೇಧಾವಿ, ಕೋಹಿಲ, ದತ್ತಿಲ ಮುಂತಾದವರ ಹೆಸರುಗಳನ್ನು ಹೇಳುತ್ತಾನಾದರೂ ಅವರ ಕೃತಿಗಳು ದೊರೆತಿಲ್ಲ. ಅಂತೆಯೇ ಭಾಮಹನನ್ನು ಅಲಂಕಾರಶಾಸ್ತ್ರದ ಆದ್ಯ ಪ್ರವರ್ತಕನೆಂದು ಕರೆಯುವುದು ರೂಢಿಯಾಗಿದೆ. ಭಾಮಹನು ಕಾವ್ಯಲಕ್ಷಣ, ಸ್ವರೂಪ, ಗುಣ, ರೀತಿ ಇತ್ಯಾದಿ ವಿಷಯಗಳನ್ನು ಪ್ರಸ್ತಾಪಿಸಿದ್ದರೂ ಅವನ ಒಲವು ಅಲಂಕಾರಗಳ ಕಡೆಗೆ. **''ನ ಕಾಂತಮಪಿ ನಿರ್ಭೂಷಂ ವಿಭಾತಿ ವನಿತಾ ಮುಖಮ್ ''** – ತರುಣಿಯ ಮುಖವು ರಮಣೀಯವಾಗಿದ್ದರೂ ಅಲಂಕಾರಗಳಿಲ್ಲದೆ ಶೋಭಿಸುವುದಿಲ್ಲ ಎಂಬ ಮಾತು, ಅವನು ಕಾವ್ಯಕ್ಕೆ ಅಲಂಕಾರಗಳು ಅನಿವಾರ್ಯವೆಂದು ಭಾವಿಸಿದ್ದನೆಂಬುದನ್ನು ತಿಳಿಸುತ್ತದೆ. ಅಂತೆಯೇ ಅವನನ್ನು ಅಲಂಕಾರಪ್ರಸ್ಥಾನದ ಪ್ರವರ್ತಕನೆಂದು ಗುರುತಿಸಲಾಗುತ್ತದೆ.

ಭಾಮಹನು ಅಲಂಕಾರಗಳನ್ನು ಕಾವ್ಯಸೌಂದರ್ಯದ ಪ್ರಮುಖ ಅಂಶವೆಂದು ಗುರುತಿಸುವುದರ ಜೊತೆಗೆ ಸುಮಾರು ೩೫ ಅಲಂಕಾರಗಳನ್ನು ಗುರುತಿಸುತ್ತಾನೆ. ಅವುಗಳ ಹಿನ್ನೆಲೆಯ ತತ್ತ್ವವನ್ನು ವಕ್ರೋಕ್ತಿಯೆಂದು ಗುರುತಿಸುತ್ತಾನೆ . ಉದ್ಭಟ, ರುದ್ರಟ, ಪ್ರತಿಹಾರೇಂದುರಾಜ ಮುಂತಾದವರು ಭಾಮಹನ ಮಾರ್ಗದಲ್ಲಿಯೇ ಮುನ್ನಡೆದು ಅಲಂಕಾರಗಳ ಸಂಖ್ಯೆಯನ್ನು ಬೆಳೆಸಿದರು. ಉಧ್ಭಟ ಸುಮಾರು ೪೧ ಅಲಂಕಾರಗಳನ್ನು ಹೇಳಿದರೆ ರುದ್ರಟನಲ್ಲಿ ಅವುಗಳ ಸಂಖ್ಯೆ

ಒಳಕ್ಕೇರುತ್ತದೆ. ರುದ್ರಟ, ಅಲಂಕಾರಗಳನ್ನು ವಾಸ್ತವ, ಔಪಮ್ಯ , ಶ್ಲೇಷ ಮತ್ತು ವಿರೋಧಗಳೆಂಬ ನಾಲ್ಕು ಗುಂಪುಗಳಲ್ಲಿ ವರ್ಗೀಕರಿಸುವ ಮೂಲಕ ಅಲಂಕಾರ ತತ್ವಗಳ ವಿಕಾಸಕ್ಕೆ ಅಮೂಲ್ಯವಾದ ಕೊಡುಗೆಯನ್ನು ನೀಡಿದ್ದಾನೆ.

ಬಹುಶಃ ಭಾಮಹನ ಅನಂತರದ ಕೆಲವೇ ದಶಕಗಳಲ್ಲಿದ್ದಿರಬಹುದಾದ ದಂಡಿಯ 'ಕಾವ್ಯಾದರ್ಶ' ಮತ್ತೊಂದು ಪ್ರಮುಖವಾದ ಕೃತಿ. ಕಾವ್ಯಾದರ್ಶದಲ್ಲಿ ಅವನು ವೈದರ್ಭೀ ಮತ್ತು ಗೌಡೀ ಮಾರ್ಗಗಳನ್ನು ಕುರಿತು ವಿಸ್ತಾರವಾಗಿ ವಿವೇಚಿಸಿದ್ದಾನೆ. ಈ ಮಾರ್ಗಗಳಿಗೆ ಗುಣಗಳೇ ಆಧಾರತತ್ವಗಳೆಂದು ನಿರೂಪಿಸಿದ. ಅಲಂಕಾರಗಳನ್ನು ಕುರಿತು ಸಾಕಷ್ಟು ವಿಸ್ತಾರವಾಗಿ ವಿವೇಚಿಸಿದ್ದರೂ ಅಲಂಕಾರಕ್ಕೆ ಅವನು ಕೊಡುವ ವ್ಯಾಖ್ಯೆಯು ತುಂಬ ಮಹತ್ವದ್ದು. ''**ಕಾವ್ಯಶೋಭಾಕರಾನ್ ಧರ್ಮಾನ್ ಅಲಂಕಾರಾನ್ ಪ್ರಚಕ್ಷತೇ** '' ಎನ್ನುವುದರ ಮೂಲಕ ಕಾವ್ಯಕ್ಕೆ ಶೋಭೆಯನ್ನು ಉಂಟುಮಾಡುವ ಧರ್ಮಗಳೆಲ್ಲವೂ ಅಲಂಕಾರಗಳೇ ಎಂದು ಅದರ ಅರ್ಥವ್ಯಾಪ್ತಿಯನ್ನು ಹೆಚ್ಚಿಸಿದ.

ದಂಡಿಯು ಸೂಚಿಸಿದ ಮಾರ್ಗದಲ್ಲಿಯೆ ಮುನ್ನಡೆದು ಕಾವ್ಯದಲ್ಲಿ ರೀತಿಯೇ ಮಹತ್ವದ ತತ್ತ್ವವೆಂದು ನಿರೂಪಿಸಿದವನು ವಾಮನ(ಕ್ರಿ.ಶ.೮೦೦). ಅವನು **ರೀತಿರಾತ್ಮಾಕಾವ್ಯಸ್ಯ** ಎಂದು ಘೋಷಿಸುವುದರ ಜೊತೆಗೆ ತನ್ನ ಕೃತಿಯ ಹೆಚ್ಚಿನ ಭಾಗವನ್ನು ವಿಶಿಷ್ಟ ಪದರಚನಾ ಕ್ರಮವೆನಿಸಿದ ರೀತಿಯ ವಿವೇಚನೆಗೆ ಮೀಸಲಿಟ್ಟ. ಗುಣಗಳನ್ನು ಇನ್ನಷ್ಟು ಆಳವಾಗಿ ವಿಚಾರಿಸಿದ. ವೈದರ್ಭೀ–ಗೌಡೀಗಳ ಜೊತೆಗೆ ಪಾಂಚಾಲೀ ಎಂಬ ಮತ್ತೊಂದು ಮಾರ್ಗವನ್ನೂ ಅವನು ಹೇಳುತ್ತಾನೆ. ಅವನು ಅಲಂಕಾರದ ಅರ್ಥವ್ಯಾಪ್ತಿಯನ್ನು ಮತ್ತಷ್ಟು ಹಿಗ್ಗಿಸಿದ.' **ಕಾವ್ಯಂ ಗ್ರಾಹ್ಯಮಲಂಕಾರಾತ್**' ಮತ್ತು ' **ಸೌಂದರ್ಯಮಲಂಕಾರಃ**' ಎಂಬ ಮಾತು ಕಾವ್ಯಮೀಮಾಂಸೆಗೆ ಅಲಂಕಾರಶಾಸ್ತ್ರವೆಂದು ಕರೆಯುವುದೇಕೆಂಬುದನ್ನು ಚೆನ್ನಾಗಿ ವಿವರಿಸುತ್ತದೆ. ವಾಮನ ಅಲಂಕಾರಗಳನ್ನು ಉಪಮಾ ಮತ್ತು ಉಪಮಾಪ್ರಪಂಚವೆಂದು ವರ್ಗೀಕರಿಸಿ ಸಾದೃಶ್ಯಮೂಲವಾದ ಅಲಂಕಾರಗಳನ್ನು ಎತ್ತಿಹಿಡಿದಿದ್ದೂ ಉಲ್ಲೇಖನೀಯವಾದುದೇ.

ವಾಮನನು ಆರಂಭಿಸಿದ ಕಾವ್ಯದ ಆತ್ಮದ ಅನ್ವೇಷಣೆಯನ್ನು ಮುಂದುವರಿಸಿ ಧ್ವನಿಯೇ ಕಾವ್ಯದ ಆತ್ಮವೆಂದು ಘೋಷಿಸುವ ಮೂಲಕ ಆನಂದವರ್ಧನ ( ಕ್ರಿ. ಶ.೮೫೦) ಕಾವ್ಯತತ್ವಗಳ ಶೋಧನೆಯ ತಲವನ್ನು ತಲುಪಿದ. ಅವನ ಧ್ವನ್ಯಾಲೋಕವು ಭಾರತೀಯ ಕಾವ್ಯಮೀಮಾಂಸೆಯ ದಿಕ್ಕುದಿಸೆಗಳನ್ನು ಬದಲಿಸಿತು. ಕಾವ್ಯದ ಬಗೆಗೆ ತುಂಬ ಒಳನೋಟಗಳನ್ನು ಹೊಂದಿದ್ದ ಆನಂದವರ್ಧನನ ಒಂದೊಂದು ಮಾತೂ ಕಾವ್ಯರಹಸ್ಯಶೋಧನೆಗೆ ಕೈದೀವಿಗೆಯಾಗಿದೆ . ಅವನು ರಸವನ್ನು ಕೇಂದ್ರದಲ್ಲಿಟ್ಟು ಅದು ವ್ಯಕ್ತಗೊಳ್ಳುವ ಮಾರ್ಗವನ್ನು ಧ್ವನಿಯೆಂದು ಕರೆಯುತ್ತಾನೆ. ಅಷ್ಟೇ ಅಲ್ಲ, ಕಾವ್ಯದ ವಿವಿಧ ತತ್ವಗಳ ಸ್ಥಾನವನ್ನು ಸಮರ್ಪಕವಾಗಿ ವಿವೇಚಿಸುತ್ತಾನೆ. ಮುಂದಿನ ಆಲಂಕಾರಿಕರೆಲ್ಲ ಆನಂದವರ್ಧನನ ಪ್ರಭಾವಕ್ಕೊಳಗಾದವರೆಂದರೆ ತಪ್ಪಲ್ಲ.

ಆನಂದವರ್ಧನನ ಧ್ವನ್ಯಾಲೋಕವನ್ನು ಒಪ್ಪದಿರುವವರಲ್ಲಿ ಪ್ರಮುಖನಾದ ಮಹಿಮಭಟ್ಟನನ್ನೂ ಹೆಸರಿಸಬೇಕು. ಅವನ ವ್ಯಕ್ತಿವಿವೇಕವು ಧ್ವನಿತತ್ವವನ್ನು ಅನುಮಾನದಲ್ಲಿಯೇ

ಅಂತರ್ಗತಗೊಳಿಸಲು ಸಾಧ್ಯವೆಂಬುದನ್ನು ನಿರೂಪಿಸುವ ಸಲುವಾಗಿಯೇ ಹುಟ್ಟಿಕೊಂಡ ಕೃತಿ. ಹಾಗಿದ್ದರೂ ಮಹಿಮಭಟ್ಟ ಇತರ ಅನೇಕ ವಿಚಾರಗಳಲ್ಲಿ ಆನಂದವರ್ಧನನ ಅಭಿಪ್ರಾಯವನ್ನು ಅಂಗೀಕರಿಸುತ್ತಾನೆ. ಕಾವ್ಯದೋಷಗಳ ಕುರಿತು ವಿಸ್ತಾರವಾಗಿ ಚರ್ಚಿಸುತ್ತಾನೆ. ಮುಂದಿನವರು ದೋಷವಿವೇಚನೆಯಲ್ಲಿ ಮಹಿಮಭಟ್ಟನ ಮಾರ್ಗವನ್ನೇ ಅನುಸರಿಸುತ್ತಾರೆ.

ಇದೇ ರೀತಿಯಲ್ಲಿ '**ವಕ್ರೋಕ್ತಿಜೀವಿತ**' ವೆಂಬ ಕೃತಿಯನ್ನು ರಚಿಸಿದ ಕುಂತಕನೂ ಒಬ್ಬ ಪ್ರಮುಖನಾದ ಆಲಂಕಾರಿಕನೇ. ಅವನು ಧ್ವನಿತತ್ತ್ವದ ಕುರಿತು ಭಿನ್ನಾಭಿಪ್ರಾಯವನ್ನು ಹೊಂದಿದವ. ಅದು ಕಾವ್ಯ ಸೌಂದರ್ಯವೆಲ್ಲವನ್ನೂ ಒಳಗೊಳ್ಳುವ ತತ್ತ್ವವಲ್ಲವೆಂಬುದು ಅವನ ಭಾವನೆ. ವಿಶೇಷವಾಗಿ ಅಲಂಕಾರ ಚಮತ್ಕಾರವೇ ಮುಂತಾದವುಗಳನ್ನು ಅದು ಅಲಕ್ಷಿಸುತ್ತದೆಯೆಂಬುದು ಕುಂತಕನ ಆರೋಪ. ಅದಕ್ಕಾಗಿ ಅವನು ವಕ್ರೋಕ್ತಿಸಿದ್ಧಾಂತವನ್ನು ಪ್ರತಿಪಾದಿಸಿ ಕಾವ್ಯದ ಬಗೆಗೆ ಅನೇಕ ಒಳನೋಟಗಳನ್ನು ನೀಡಿದ್ದಾನೆ. ಮುಂದೆ ಅವನನ್ನು ಅನುಸರಿಸುವ ಆಲಂಕಾರಿಕರು ಇಲ್ಲವಾದರೂ ಕುಂತಕನಲ್ಲಿ ಆಧುನಿಕರು ಮೆಚ್ಚುವ ಅನೇಕ ಅಂಶಗಳಿವೆ. ಹೀಗಿದ್ದೂ ಅವನಿಗೆ ಸಲ್ಲಬೇಕಾದ ಗೌರವ ಸಂದಿಲ್ಲವೆನ್ನಬಹುದು.

ಸ್ವಲ್ಪ ಹೆಚ್ಚು ಕಡಿಮೆ ಇದೇ ಕಾಲದಲ್ಲಿ ಬದುಕಿದ್ದ ಅಭಿನವಗುಪ್ತನು (ಕ್ರಿ.ಶ.೧೦೧೫) ಧ್ವನಿ ಸಿದ್ಧಾಂತವನ್ನು ಪ್ರತಿಷ್ಠಾಪಿಸಿದವರಲ್ಲಿ ಅಗ್ರಗಣ್ಯ. ಅವನ ಧ್ವನ್ಯಾಲೋಕನವು ಆನಂದವರ್ಧನನ ಧ್ವನ್ಯಾಲೋಕದ ಮೇಲಿನ ವ್ಯಾಖ್ಯಾನವಾದರೂ ಅದೊಂದು ಸ್ವತಂತ್ರಕೃತಿಯೆಂಬ ಗೌರವಕ್ಕೆ ಪಾತ್ರವಾಗಿದೆ. ಆನಂದವರ್ಧನನು ಸ್ಪಷ್ಟಪಡಿಸದೇ ಇದ್ದ ಅಂಶಗಳನ್ನು ನಾವು ಅಭಿನವಗುಪ್ತನಿಂದ ಗ್ರಹಿಸಬಹುದು. ಧ್ವನಿಯ ಮೇಲಿದ್ದ ಆಕ್ಷೇಪಗಳಿಗೆಲ್ಲ ಅವನು ಉತ್ತರಿಸಿ ಆ ತತ್ವದ ನಿರ್ದುಷ್ಟತೆಯನ್ನು ಪ್ರತಿಪಾದಿಸುವ ಕೆಲಸವನ್ನು ಮಾಡಿದ. ಅವನ ಇನ್ನೊಂದು ಕೃತಿಯಾದ 'ಅಭಿನವಭಾರತಿ'ಯು ಭರತನ ನಾಟ್ಯಶಾಸ್ತ್ರದ ಮೇಲಿನ ವ್ಯಾಖ್ಯಾನ ಗ್ರಂಥವಾಗಿದ್ದು ಅಲ್ಲಿಯೂ ರಸಸೂತ್ರವಿವರಣೆಯೇ ಮುಂತಾದವುಗಳು ಅಲಂಕಾರತತ್ವವನ್ನು ತಿಳಿಯಲು ಸಹಕಾರಿಗಳಾಗಿವೆ.

ಇದೇ ಸುಮಾರಿಗೆ ಬದುಕಿದ್ದಿರಬಹುದಾದ ಕ್ಷೇಮೇಂದ್ರನ 'ಔಚಿತ್ಯವಿಚಾರಚರ್ಚಾ' ಪ್ರಸಿದ್ಧವಾದ ಕೃತಿ. ಇಲ್ಲಿ ಔಚಿತ್ಯದ ವಿವೇಚನೆಯೇ ಪ್ರಮುಖವಾದ ವಿಷಯ. ಕಾವ್ಯದಲ್ಲಿ ಅನುಸ್ಯೂತವಾಗಿರಬೇಕಾದ ತತ್ತ್ವವು ಔಚಿತ್ಯವೆಂಬುದನ್ನು ಅವನು ಸೋದಾಹರಣವಾಗಿ ನಿರೂಪಿಸುತ್ತಾನೆ. ಇದೊಂದು ಸ್ವತಂತ್ರವಾದ ಸಿದ್ಧಾಂತವಲ್ಲದಿದ್ದರೂ ಆನಂದವರ್ಧನನ ಮಾತುಗಳನ್ನೇ ಕ್ಷೇಮೇಂದ್ರನು ಎತ್ತಿಕೊಂಡಿದ್ದರೂ ಅದನ್ನು ಅನ್ವಯಿಸಿ ತೋರುವ ರೀತಿಯು ವಿಶಿಷ್ಟವಾಗಿದೆ.

ಕ್ರಿ.ಶ. ೧೧ ನೆಯ ಶತಮಾನದ ಉತ್ತರಾರ್ಧದಲ್ಲಿ ಬದುಕಿದ್ದ ಮಮ್ಮಟನು ಕಾವ್ಯಮೀಮಾಂಸೆಯ 'ಪರಿಷ್ಕರಣಯುಗ'ದ ಪ್ರವರ್ತಕನೆನ್ನಬಹುದು. ಇವನು ಹೊಸ ಸಿದ್ಧಾಂತವನ್ನು ಪ್ರತಿಪಾದಿಸಿದವನಲ್ಲ. ಆದರೆ ತನಗಿಂತ ಹಿಂದಿನವರು ನಿರೂಪಿಸಿದ ತತ್ವಗಳನ್ನೆಲ್ಲ ವಿವೇಚಿಸಿ ಅವುಗಳ ಇತಿ ಮಿತಿಗಳನ್ನು ನಿಸ್ಸಂದಿಗ್ಧವಾಗಿ ನಿರೂಪಿಸಿದ. ತನ್ನ 'ಕಾವ್ಯಪ್ರಕಾಶ' ದಲ್ಲಿ

೨ ಕ್ರಮದಲ್ಲಿ ಅಳವಡಿಸಿದ. ಅದನ್ನು ಓದಿ
ಆವರೆಗೆ ನಡೆದ ಕಾವ್ಯ ಚಿಂತನೆಗಳನ್ನೆಲ್ಲ ವ್ಯವಸ್ಥಿತವಾದ ಕಾವ್ಯಮಿಮಾಂಸೆಯ ತತ್ವಗಳೆಲ್ಲ ತಿಳಿದಂತೆಯೇ ಎಂದು
ಅರ್ಥಮಾಡಿಕೊಂಡರೆ ಭಾರತೀಯ ಕಾವ್ಯಮಿಮಾಂಸೆಯ ತತ್ವಗಳೆಲ್ಲ ಅನೇಕ ಕೃತಿಗಳು ರಚಿತವಾದವು. ವಿಶ್ವನಾಥನ
ಹೇಳಬಹುದು. ಮುಂದೆ ಇದೇ ಮಾರ್ಗದಲ್ಲಿ ಅನೇಕ ಕೃತಿಗಳು ರಚಿತವಾದವು. ವಿಶ್ವನಾಥನ 'ಸಾಹಿತ್ಯದರ್ಪಣ', ಹೇಮಚಂದ್ರನ 'ಕಾವ್ಯಾನುಶಾಸನ', ರುಯ್ಯಕನ 'ಅಲಂಕಾರಸರ್ವಸ್ವ', ಅಪ್ಪಯ್ಯ ದೀಕ್ಷಿತನ 'ಕುವಲಯಾನಂದ', ಜಗನ್ನಾಥನ 'ರಸಗಂಗಾಧರ' ಮುಂತಾದವು ಈ ವರ್ಗಕ್ಕೆ ಸೇರಿದ ಕೃತಿಗಳು. ಇವರಲ್ಲದೆ ಜಯದೇವ, ಶೋಭಾಕರಮಿತ್ರ, ವಿದ್ಯಾಧರ, ವಿದ್ಯಾನಾಥ ಮುಂತಾದವರು ಕೂಡ ಅಲಂಕಾರಶಾಸ್ತ್ರದ ಪರಿಷ್ಕರಣಕ್ಕೆ ತಮ್ಮದೇ ಆದ ರೀತಿಯಲ್ಲಿ ಕಾಣಿಕೆಗಳನ್ನು ಕೊಟ್ಟಿದ್ದಾರೆ.

ಭೋಜರಾಜನ 'ಶೃಂಗಾರಪ್ರಕಾಶ' ಮತ್ತು 'ಸರಸ್ವತೀಕಂಠಾಭರಣ' ಗಳು ತಮ್ಮ ವೈಶಿಷ್ಟ್ಯಪೂರ್ಣ ನಿರೂಪಣೆಯ ಕಾರಣದಿಂದ ಗಮನಸೆಳೆಯುತ್ತವೆ. 'ಶೃಂಗಾರಪ್ರಕಾಶ' ಶೃಂಗಾರವೇ ರಸವೆಂಬುದನ್ನು ವಿವೇಚಿಸಲು ಹೊರಟ ಗ್ರಂಥ. ಅಲ್ಲಿ ಶೃಂಗಾರವೆಂಬುದಕ್ಕೆ ಅತ್ಯಂತ ವ್ಯಾಪಕವಾದ ಅರ್ಥವನ್ನು ನೀಡಿ ಭೋಜನು ರಸವಿವೇಚನೆಗೆ ಹೊಸನೋಟವನ್ನೊದಗಿಸಿದ್ದಾನೆ. 'ಸರಸ್ವತೀ ಕಂಠಾಭರಣ' ದಲ್ಲಿ ಇತರ ಕಾವ್ಯತತ್ವಗಳ ವಿವೇಚನೆಯಿದೆ. ಅಂತೆಯೇ ಹೆಸರಿಸಬೇಕಾದ ಕೃತಿ ರಾಜಶೇಖರನ 'ಕಾವ್ಯಮೀಮಾಂಸಾ'. ಇದರಲ್ಲಿ ಸಾಮಾನ್ಯವಾಗಿ ಇತರರು ಪ್ರಸ್ತಾವಿಸದಿರುವ ಕಾವ್ಯಸಂಬಂಧಿಯಾದ ಅನೇಕ ಅಪೂರ್ವ ವಿಷಯಗಳು ಇವೆ. ಕವಿಸಮಯ ವಿವೇಚನೆಯಂಥ ವಿಷಯಗಳನ್ನು ನಾವು ತಿಳಿಯುವುದು ರಾಜಶೇಖರನ ಗ್ರಂಥದಿಂದಲೇ.

ಕನ್ನಡದಲ್ಲಿ ಸಾಹಿತ್ಯಚರಿತ್ರೆಯು ಮೊದಲಾಗುವುದೇ ಕಾವ್ಯಮೀಮಾಂಸೆಗೆ ಸಂಬಂಧಿಸಿದ ಕೃತಿಯಿಂದ. ಕವಿರಾಜಮಾರ್ಗವು (ಕ್ರಿ. ಶ. ೯ ನೆಯ ಶತಕ) ಅಂಥ ಕೃತಿ. ಇದು ನೃಪತುಂಗ ಚರಿತವೆಂಬ ಮಾತು ಪ್ರಸಿದ್ಧವಾಗಿದ್ದರೂ ಈಗ ಇದು ನೃಪತುಂಗನ ಆಸ್ಥಾನದಲ್ಲಿದ್ದ ಶ್ರೀ ವಿಜಯನೆಂಬ ಕವಿಯಿಂದ ರಚಿತವಾದುದೆಂಬ ಅಭಿಪ್ರಾಯವು ಬಲವಾಗಿದೆ. ಕವಿರಾಜಮಾರ್ಗಕಾರನಿಗೆ ಭಾಮಹ, ದಂಡಿಗಳ ಕೃತಿಗಳ ಪರಿಚಯವಿತ್ತು. ಅವನು ಬಹುಮಟ್ಟಿಗೆ ಅವರನ್ನೇ ಅನುಸರಿಸಿದ್ದಾನೆ. ಕನ್ನಡಕ್ಕೆ ಸಂಬಂಧಿಸಿದಂತೆ ಯತಿಭಂಗವು ಸಂಸ್ಕೃತದಲ್ಲಿ ದೋಷವೇ ಹೊರತೂ ಕನ್ನಡದಲ್ಲಿ ಅದು ಗುಣದಂತೆಯೇ ಆಗುವುದೆಂಬ ಅಭಿಮತವನ್ನು ವ್ಯಕ್ತಪಡಿಸಿದ್ದಾನೆ. ಅವನು ಅಲಂಕಾರ ಪ್ರಸ್ಥಾನಕ್ಕೆ ಸೇರಿದವನೆಂದು ಹೇಳಬಹುದು. ರಸ, ಧ್ವನಿ ಮುಂತಾದವುಗಳನ್ನು ಅವನು ಅಲಂಕಾರಗಳ ವರ್ಗಕ್ಕೇ ಸೇರಿಸುತ್ತಾನೆ.

೨ ನೆಯ ನಾಗವರ್ಮನ ಕಾವ್ಯಾವಲೋಕನ ಇನ್ನೊಂದು ಹೆಸರಿಸಬೇಕಾದ ಕೃತಿ. ಇದು ಬಹುಶಃ ೧೨ ನೆಯ ಶತಮಾನಕ್ಕೆ ಸೇರಿದ್ದು. ನಾಗವರ್ಮನು ವಾಮನ, ರುದ್ರಟ, ಭಾಮಹ, ದಂಡಿಗಳ ಹೆಸರನ್ನು ಹೇಳುತ್ತಾನೆ. ''ರಸ ಭಾವವೃತ್ತಿ ನಿರ್ಗತಿಯೇ ಜೀವಂ'' ಎಂದು ಹೇಳಿದರೂ ಆನಂದವರ್ಧನನ ಪ್ರಸ್ತಾವವಿಲ್ಲ. ಅವನೂ ಬಹುಮಟ್ಟಿಗೆ ಭಾಮಹ, ದಂಡಿ, ವಾಮನರ ಮಾರ್ಗದಲ್ಲಿಯೇ ನಡೆದರೂ ಅಲ್ಲಲ್ಲಿ ಮಾರ್ಪಾಡುಗಳನ್ನು ಮಾಡಿಕೊಂಡಿದ್ದಾನೆ. ರೀತಿಯು

ಕಾವ್ಯದಾತ್ಮವೆನ್ನುವ ಬದಲು ''ರೀತಿ ವಿನೂತ ವಸ್ತುಕೃತಿಗೊಪ್ಪುವ ಮೆಯ್'' ಎಂದು ರೀತಿಯನ್ನು ಕಾವ್ಯದ ಶರೀರವೆನ್ನುವುದು ಒಂದು ಉದಾಹರಣೆ. ಕವಿರಾಜಮಾರ್ಗಕ್ಕಿಂತ ಕಾವ್ಯಾವಲೋಕನವು ಹೆಚ್ಚು ವಿಷಯಗಳನ್ನೊಳಗೊಂಡಿದೆ. ಪ್ರಾಚೀನ ಕನ್ನಡ ಅಲಂಕಾರಗ್ರಂಥಗಳಲ್ಲಿ ಕಾವ್ಯಾವಲೋಕನವು ವಿಷಯಸಮಗ್ರತೆ, ವಿಷಯ ಪರಿಶುದ್ಧಿಗಳೆರಡೂ ದೃಷ್ಟಿಯಿಂದಲೂ ಸರ್ವೋತ್ತಮವಾದ ಗ್ರಂಥ.

ಇನ್ನಿತರ ಗ್ರಂಥಗಳಲ್ಲಿ ಉದಯಾದಿತ್ಯಾಲಂಕಾರ ( ಕ್ರಿ. ಶ. ೧೨ ನೆಯ ಶತಮಾನ)ವು ಬಹುಮಟ್ಟಿಗೆ ದಂಡಿಯ ಕಾವ್ಯದರ್ಶದ ಕನ್ನಡ ರೂಪವೇ ಆಗಿದೆ. ಕವಿಕಾಮನು 'ಶೃಂಗಾರ ರತ್ನಾಕರ' ಎಂಬ ಗ್ರಂಥವನ್ನು ಇದೇ ಕಾಲದಲ್ಲಿಯೇ ರಚಿಸಿರಬಹುದು. ಇದರಲ್ಲಿ ನವರಸಗಳ ವಿಸ್ತಾರವಾದ ವಿವೇಚನೆಯಿದೆ. ಸು ಕ್ರಿ. ಶ . ೧೬ ನೆಯ ಶತಮಾನದಲ್ಲಿದ್ದ ಕವಿ ಸಾಳ್ವನು ''ರಸರತ್ನಾಕರ'' ವೆಂಬ ಕೃತಿಯನ್ನು ರಚಿಸಿದ್ದಾನೆ. ಇದು ರಸಗಳ ವಿವೇಚನೆಗೆ ಮೀಸಲಾದ ಗ್ರಂಥ. ಇದಲ್ಲದೆ ಮಾಧವನು ದಂಡಿಯ ಕಾವ್ಯಾದರ್ಶವನ್ನು ಕನ್ನಡಕ್ಕೆ ಅನುವಾದಿಸಿದ್ದಾನೆ. ೧೮ ನೆಯ ಶತಕದಲ್ಲಿದ್ದ ತಿರುಮಲಾರ್ಯನ ಅಪ್ರತಿಮವೀರಚರಿತೆಯು ಪ್ರಸಿದ್ಧವಾದ ಕೃತಿ. ಅರ್ಥಾಲಂಕಾರಗಳನ್ನು ವಿಸ್ತಾರವಾಗಿ ಸ್ವತಂತ್ರ ರೀತಿಯಲ್ಲಿ ಪ್ರತಿಪಾದಿಸಿದ ಗ್ರಂಥ ಇದು. ಜಯಗೌಂಡನ 'ಕನ್ನಡ ಕುವಲಯಾನಂದ'ವು ಸಂಸ್ಕೃತದ ಅನುವಾದ. ಕ್ರಿ.ಶ. ೧೯ನೆಯ ಶತಕದಲ್ಲಿದ್ದ ಲಿಂಗರಾಜನು ''ನರಪತಿಚರಿತ'' ವೆಂಬ ಅಲಂಕಾರ ಗ್ರಂಥವನ್ನು ರಚಿಸಿದ್ದಾನೆ. ಇದರಲ್ಲಿ ಶಬ್ದಾಲಂಕಾರಗಳನ್ನು ಸುಂದರವಾಗಿ ನಿರೂಪಿಸಿದ್ದಾನೆ.

ಬಹುಮಟ್ಟಿಗೆ ಈ ಎಲ್ಲ ಕೃತಿಗಳು ಸಂಸ್ಕೃತ ಕೃತಿಗಳನ್ನೇ ಆಧರಿಸಿವೆ. ಅದು ಆ ಕಾಲದಲ್ಲಿ ಸಹಜವಾದುದೆ ಆಗಿತ್ತು. ಕನ್ನಡದಲ್ಲಿ ಬರೆಯುವವರು ಸಂಸ್ಕೃತವನ್ನು ಚೆನ್ನಾಗಿ ಬಲ್ಲವರಾದುದರಿಂದ ಅಲ್ಲಿನ ವಿಚಾರಗಳನ್ನೇ ಇಲ್ಲಿ ಪ್ರತಿಪಾದಿಸಿದ್ದಾರೆ. ಅದು ಈ ದೇಶದ ಭಾವನಾತ್ಮಕ ಏಕತೆಯನ್ನು ನಿರೂಪಿಸುತ್ತದೆಯೆಂದು ಹೇಳಬಹುದು.



# ಕಾವ್ಯದಲ್ಲಿ ಅಲಂಕಾರಗಳ ಸ್ಥಾನ

ಭಾರತೀಯ ಕಾವ್ಯಮೀಮಾಂಸೆಯಲ್ಲಿ ಅಲಂಕಾರ ಎಂಬ ಪದವು ಎರಡು ಅರ್ಥಗಳಲ್ಲಿ ಪ್ರಯುಕ್ತವಾಗಿದೆ. ವ್ಯಾಪಕವಾದ ಅರ್ಥದಲ್ಲಿ ಅದು ಕಾವ್ಯದ ಸೌಂದರ್ಯಕ್ಕೆ ಕಾರಣವಾಗಬಹುದಾದ ಎಲ್ಲ ಅಂಶಗಳನ್ನು ಒಳಗೊಳ್ಳುತ್ತದೆ. ಅಥವಾ ವಾಮನನು ಹೇಳುವಂತೆ ಅದು ಸೌಂದರ್ಯಕ್ಕೆ ಪರ್ಯಾಯಪದವಾಗಿದೆ. (ಸೌಂದರ್ಯಮಲಂಕಾರಃ). ಕಾವ್ಯಮೀಮಾಂಸೆಗೆ ಅಲಂಕಾರಶಾಸ್ತ್ರವೆಂಬ ಹೆಸರು ಬರುವುದಕ್ಕೆ ಕಾರಣವಾದುದು ಇದು. ಇದರಲ್ಲಿ ರಸ, ಧ್ವನಿ, ಗುಣ, ರೀತಿ , ವೃತ್ತಿ , ಅಲಂಕಾರಗಳೆಲ್ಲವೂ ಸೇರಿ ಹೋಗುತ್ತವೆ. ಕಾವ್ಯತತ್ವಗಳೆಲ್ಲ ಈ ಪದದಲ್ಲಿ ಅಡಕಗೊಂಡಿವೆ.

ಅಲಂಕಾರಕ್ಕೆ ಸೀಮಿತವಾದ ಇನ್ನೊಂದು ಅರ್ಥವೂ ಇದೆ. ಉಕ್ತಿ ವಿಶೇಷಗಳನ್ನು ಈ ಹೆಸರಿನಿಂದ ಗುರುತಿಸುವುದುಂಟು. ಉಪಮೆ, ರೂಪಕ, ದೀಪಕ, ಯಮಕ ಮುಂತಾದ ಶಬ್ದಾರ್ಥಾಲಂಕಾರಗಳನ್ನು ಅಲಂಕಾರಗಳೆಂದು ಕರೆಯುವುದುಂಟು. ಕಾವ್ಯವೊಂದು ನಮ್ಮ ಮನಸ್ಸನ್ನು ಸೆಳೆದಾಗ ಅದರ ಸೌಂದರ್ಯಕ್ಕೆ ಕಾರಣವೇನೆಂಬುದನ್ನು ವಿಚಾರಿಸಲು ತೊಡಗಿದಾಗ ಥಟ್ಟನೇ ನಮ್ಮ ಗಮನ ಸೆಳೆಯುವಂಥಹವು ಇವು. ಅಂದರೆ ಕವಿಯು ಇಟ್ಟ ವಿಚಾರಕ್ಕಿಂತ ಅದನ್ನಿಡುವ ರೀತಿಯು ನಮ್ಮ ಗಮನ ಸೆಳೆಯುತ್ತದೆ. ಸಾಮಾನ್ಯವಾದ ಸಂಗತಿಯೇ ಆದರೂ ಕವಿ ಪ್ರತಿಭೆಯ ಸಂಸ್ಪರ್ಶದಿಂದ ಲೋಕೋತ್ತರವಾದ ಚಮತ್ಕಾರವನ್ನು ಪಡೆಯುವುದು ಅಲಂಕಾರಗಳ ಸಾರ್ಥಕವಾದ ಬಳಕೆಯಿಂದ ಎಂದೂ ಹೇಳಬಹುದು. ಮಹಾಕವಿ ಲಕ್ಷ್ಮೀಶನ ಈ ಪದ್ಯವನ್ನು ನೋಡಿ –

**ಪಾತಕಿಗಳೊಡಲೊಳಿಹ ಪರಮಾತ್ಮನಂತೆ ಯಮ**
**ದೂತರೆಳೆತಂದಜಾಮಿಳನಂತೆ ಕಾಕ ಸಂ**
**ಘಾತದೊಳ್ ಸಿಕ್ಕಿರ್ದ ಕೋಗಿಲೆಯ ಮರಿಯಂತೆ ನಲುಗಿ ಕತ್ತಲೆಯೊಳಿರ್ದ।**
**ಶೀತಲಮರೀಚಿಲಾಂಛನದಂತೆ ಬಹಳ ಕೋ**
**ಪಾತಿಶಯದೊಳಗಿಹ ವಿವೇಕದಂತಾ ಪಶು**
**ಘಾತಕಿಗಳೆತ್ತಿಕೊಂಡೊಯ್ವ ಬಾಲಕನಿರ್ದನವರೆಡೆಯೊಳಂಜುತಳುತ ॥**

ಚಂದ್ರಹಾಸನನ್ನು ಕೊಲ್ಲುವುದಕ್ಕಾಗಿ ಕಟುಕರು ಕಾಡಿನೆಡೆಗೆ ಸಾಗುತ್ತಿರುವಾಗ ಬಾಲಕನು ಇದ್ದ ಪರಿಯನ್ನು ವರ್ಣಿಸುತ್ತಿದ್ದಾನೆ ಕವಿ. ಈ ಪದ್ಯವು ನಮ್ಮನ್ನು ಸೆಳೆಯುವುದಕ್ಕೆ ಕಾರಣವಾದುದು ಉಪಮೆಗಳ ಮಾಲೆ ಮಾಲೆ. ಒಬ್ಬನೇ ಬಾಲಕನನ್ನು ಬೇರೆ ಬೇರೆ ವಸ್ತುಗಳೊಡನಿಟ್ಟು ಕವಿಯು ಸಾದೃಶ್ಯ ಸಂಬಂಧವನ್ನು ಸ್ಥಾಪಿಸುವ ವಿಧಾನವು ಅದ್ಭುತವಾಗಿದೆ. ಒಂದರ ಬದಲು ಹಲವಾರು ಉಪಮಾನಗಳನ್ನು ಕೊಡುವಾಗ ಕವಿಯು ಸಂಗತಿಯೊಂದರ ಯಥಾವತ್ತಾದ ನಿರೂಪಣೆಯಿಂದ ತೃಪ್ತನಾಗುವುದಿಲ್ಲ. ಓದುಗನ ಎದುರಿಗೆ ಹೊಸದೊಂದು ಅರ್ಥ ಪ್ರಪಂಚವನ್ನೇ ಉದ್ಘಾಟಿಸಿದ್ದಾನೆ.

ಬಾಲಕನನ್ನು ಪರಮಾತ್ಮನಿಗೆ ಹೋಲಿಸಿ ಮರುಕ್ಷಣದಲ್ಲಿಯೇ ಅಜಾಮಿಳನಿಗೆ ಹೋಲಿಸುವುದನ್ನು ಗಮನಿಸಿ. ಮೊದಲನೆಯದು ಅಲಿಪ್ತತೆಯನ್ನು ಸೂಚಿಸಿದರೆ ಎರಡನೆಯದು ಆರ್ತತೆಯೇ ದೇವರೆಡೆಗೆ ಸಾರುವ ಮಾರ್ಗವೆಂಬುದನ್ನು ಹೇಳುತ್ತದೆ. ಕೋಗಿಲೆಯ ಮರಿಯು ಅನಾಥತೆಯನ್ನು ಸೂಚಿಸಿದರೆ ಶೀತಲ ಮರೀಚಿಲಾಂಛನವು ಆಶಾವಾದಿತ್ವವನ್ನು ಸೂಚಿಸುತ್ತದೆ; ವಿವೇಕವು ಪುಣ್ಯಾತಿಶಯವನ್ನು ಹೇಳುತ್ತದೆ. ಇದು ಒಂದು ದೃಷ್ಟಿಯಿಂದ ವಿಚಾರಿಸಿದಾಗ ಮಾತ್ರ. ಬೇರೆ ಮಗ್ಗುಲುಗಳಿಂದ ನೋಡಿದಾಗ ಅರ್ಥಾಂತರ ಸ್ಫುರಣೆಯೂ ಉಂಟು. ಒಂದೇ ಮಾತಿನಲ್ಲಿ ಹೇಳುವುದಾದರೆ ಇಲ್ಲಿ ಅಲಂಕಾರವು ಕೇವಲ ಅಲಂಕಾರಕ್ಕಾಗಿಯಲ್ಲ. ಅಲಂಕಾರವೇ ಭಾಷೆಯಾಗಿದೆ ; ಅಭಿವ್ಯಕ್ತಿವಿಧಾನವಾಗಿದೆ. ಅದನ್ನು ಬೇರ್ಪಡಿಸಿದರೆ ಪದ್ಯವು ನಿರ್ಜೀವವಾಗುತ್ತದೆ.

ಕಾವ್ಯದ ಭಾಷೆಯನ್ನು ದಿನನಿತ್ಯದ ಆಡುಭಾಷೆಯಿಂದ, ತರ್ಕಸಮ್ಮತವಾದ ಬೌದ್ಧಿಕ ವಿವೇಚನೆಯೇ ಪ್ರಧಾನವಾದ ಶಾಸ್ತ್ರದ ಭಾಷೆಯಿಂದ ಬೇರ್ಪಡಿಸುವ ಅಂಶವೆಂದರೆ ಅಲಂಕಾರಗಳು ಅಥವಾ ಉಕ್ತಿವಿಶೇಷಗಳು ಎಂಬುದು ಭಾಮಹಾದಿ ಪ್ರಾಚೀನರ ಅಭಿಪ್ರಾಯ. ಯಾಕೆಂದರೆ ದಿನನಿತ್ಯದ ಮಾತಾಗಲಿ, ಶಾಸ್ತ್ರವಾಗಲಿ ಸೌಂದರ್ಯಾನುಭವದಿಂದ ಹುಟ್ಟುವುದಿಲ್ಲ. ಅಥವಾ ಸೌಂದರ್ಯಾನುಭವವನ್ನು ಹುಟ್ಟಿಸುವುದಕ್ಕಾಗಿ ಇದ್ದವುಗಳೂ ಅಲ್ಲ. ಸಂಗತಿಗಳ ಯಥಾವತ್ತಾದ ನಿರೂಪಣೆಯಲ್ಲಿ ಸಾರ್ಥಕತೆಯನ್ನು ಪಡೆಯುವಂಥವು ಅವು . ಒಮ್ಮೊಮ್ಮೆ ಲೋಕದಲ್ಲಿಯೂ ಭಾವಗಳ ಪುನಃಸೃಷ್ಟಿಯೇ ಗುರಿಯಾಗಿದ್ದರೆ ಅಲಂಕಾರಗಳಿಗೆ ಶರಣಾಗಬೇಕಾಗುತ್ತದೆ. ಉದಾ:–'ಅವನ ಕಣ್ಣುಗಳಿಂದ ಕಿಡಿ ಸೂಸುತ್ತಿತ್ತು' 'ಮುಖದಿಂದ ಹೊಗೆಹಾಯುತ್ತಿತ್ತು.' ಇತ್ಯಾದಿ ಪ್ರಯೋಗಗಳನ್ನು ಗಮನಿಸಬಹುದು.

ಹೂವೊಂದು ಗಿಡದಲ್ಲಿ ಅರಳುವಾಗ ಬಣ್ಣ, ಪರಿಮಳಗಳನ್ನು ಹೊತ್ತೇ ತಂದಿರುತ್ತದೆ. ಹೂವು ಅರಳಿದ ಮೇಲೆ ಬಣ್ಣವನ್ನು ಬಳಿಯುವುದಾಗಲಿ, ಪರಿಮಳವನ್ನು ತುಂಬುವುದಾಗಲಿ ಇಲ್ಲ. ಅಂತೆಯೇ ಕಾವ್ಯವು ಮೈದಳೆಯುವಾಗಲೇ ಅಲಂಕಾರಗಳನ್ನು ತಳೆದೇ ಬರುತ್ತದೆ. ಕಾವ್ಯವು ಹುಟ್ಟಿದ ಮೇಲೆ ಅದಕ್ಕೆ ಅಲಂಕಾರವನ್ನು ತಂದು ಜೋಡಿಸುವುದಿಲ್ಲ. ಆದರೆ ವಿಶ್ಲೇಷಣೆಗೆ ತೊಡಗಿದಾಗ ನಮ್ಮ ಅನುಕೂಲತೆಗಾಗಿ ಬೇರ್ಪಡಿಸಿ ನೋಡಬೇಕಾಗುತ್ತದೆಯಷ್ಟೆ. ಅಂಥ ಸಮಯದಲ್ಲಿ ಆಕಾರ, ಬಣ್ಣ, ಪರಿಮಳ ಎಲ್ಲವೂ ಬೇರೆ ಬೇರೆ ಎನ್ನುವಂತೆ ವ್ಯವಹರಿಸುವುದು ಸಹಜ. ಈ ದೃಷ್ಟಿಯಿಂದ ವಿವೇಚಿಸಿದ ಆಲಂಕಾರಿಕರು ಕಾವ್ಯದಲ್ಲಿ ಅಲಂಕಾರಗಳ ಸ್ಥಾನದ ಬಗೆಗೂ ಚರ್ಚಿಸಿದ್ದಾರೆ. ಅವರ ಚರ್ಚೆಯ ಸಾರವನ್ನು ಗ್ರಹಿಸುವುದು ಉಪಯುಕ್ತ.

ಈ ಮೊದಲೇ ಗಮನಿಸಿದಂತೆ ಕಾವ್ಯಾಲಂಕಾರ ಕರ್ತೃವಾದ ಭಾಮಹನು ಅಲಂಕಾರಗಳ ಅಭಿಮಾನಿ. ಅಲಂಕಾರವಿಲ್ಲದ ಕಾವ್ಯವು ವಾರ್ತೆಯಂತೆ. ಕಾವ್ಯವೆಂದರೆ ರಮಣೀಯತೆಯ ಅಂಶವಿರಲೇಬೇಕು. ಸಾಮಾನ್ಯ ವಿಷಯವಾದರೂ ನಿರೂಪಣೆಯು ಸ್ವಾರಸ್ಯಕರವಾಗಿದ್ದರೆ ರಂಜಕವಾಗುತ್ತದೆ. ಅದನ್ನೇ ಅವನು ವಕ್ರೋಕ್ತಿಯೆಂದು ಕರೆದು ಅದೇ ಅಲಂಕಾರಗಳ ಮೂಲತತ್ತ್ವವೆನ್ನುತ್ತಾನೆ. ( **ಸೈಷಾವಕ್ರೋಕ್ತಿರನಯಾರ್ಥೋವಿಭಾವ್ಯತೇ.** ) ಕೇವಲ ವಸ್ತುಸ್ವಭಾವ

ವರ್ಣನೆಯುಳ್ಳ ಸ್ವಭಾವೋಕ್ತಿಯಂಥವುಗಳನ್ನು ಅಲಂಕಾರಗಳೆಂದು ಕರೆಯುವುದಕ್ಕೂ ಅವನು ಒಪ್ಪುವುದಿಲ್ಲ.

ಅದಕ್ಕೆ ಭಿನ್ನವಾದ ರೀತಿಯಲ್ಲಿ ಯೋಚಿಸುವ ದಂಡಿ-ವಾಮನರು ಅಲಂಕಾರಗಳಿಗಿಂತ ಗುಣಗಳಿಗೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಟ್ಟಿದ್ದಾರೆ. ದಂಡಿಯು ಜಾತಿ ಅಥವಾ ಸ್ವಭಾವೋಕ್ತಿಯನ್ನು ಅಲಂಕಾರವೆಂದು ಪ್ರತಿಪಾದಿಸಿದ್ದಾನೆ . ವಾಮನನಂತೂ ಅಲಂಕಾರಗಳನ್ನು ನಿತ್ಯ ಮತ್ತು ಗೌಣಗಳೆಂದು ವಿಭಾಗಿಸಿ -ಗುಣಗಳು ನಿತ್ಯವಾದವುಗಳೆಂದೂ, ರೂಪಕಾದಿ ಅಲಂಕಾರಗಳು ಗೌಣವೆಂದೂ ವಿಭಾಗಿಸಿ ಅಲಂಕಾರಗಳ ಪ್ರಾಶಸ್ತ್ಯವನ್ನು ತಗ್ಗಿಸಿದ್ದಾನೆ. ಅಲಂಕಾರಗಳು ಉಕ್ತಿ ಚಮತ್ಕಾರವನ್ನು ಆಶ್ರಯಿಸಿದವುಗಳಾಗಿದ್ದರಿಂದ ಅವು ಕಾವ್ಯಕ್ಕೆ ಸ್ವಲ್ಪ ಮಟ್ಟಿಗೆ ಬಾಹ್ಯವಾದವುಗಳು . ಅಂದರೆ ಅಲಂಕಾರವಿಲ್ಲದಿದ್ದರೂ ಕಾವ್ಯತ್ವಕ್ಕೆ ಹಾನಿಯಿಲ್ಲ. ಆದರೆ ಗುಣಗಳಿಲ್ಲದಿದ್ದರೆ ಕಾವ್ಯವೇ ಇಲ್ಲವೆಂಬುದು ಅವನ ಅಭಿಪ್ರಾಯ. ಅಲಂಕಾರಗಳಿರುವುದರಿಂದಲೇ ಕಾವ್ಯವಾಗುವುದಿಲ್ಲ. ಕಾವ್ಯವು ಅವುಗಳಿಂದ ಹೆಚ್ಚಿನ ಶೋಭೆಯನ್ನು ಪಡೆಯುತ್ತವೆ. (**ತದತಿಶಯಹೇತವಸ್ತ್ವಲಂಕಾರಾಃ**) ಎಂಬುದು ತಾತ್ಪರ್ಯ .

ಮುಂದಿನ ಆಲಂಕಾರಿಕರು ವಾಮನನ ಅಭಿಪ್ರಾಯವನ್ನು ಅಂಗೀಕರಿಸಿದರು. ಆನಂದವರ್ಧನ ಅಲಂಕಾರಗಳ ಬಗೆಗೆ ಆಳವಾಗಿ ಯೋಚಿಸಿ ಅವುಗಳ ಸ್ವರೂಪದ ಬಗೆಗೆ ಖಚಿತವಾಗಿ ಹೇಳಿದ. ಅನುಭವವು ಅಭಿವ್ಯಕ್ತಗೊಳ್ಳುವಾಗ ಅದು ಸಹಜವಾಗಿಯೇ ಅಲಂಕೃತವಾಗಿರುತ್ತದೆಂಬ ಮಾತು ಅವನಿಗೂ ಒಪ್ಪಿತವಾದುದೇ ಆದರೂ, ಅಲಂಕಾರಗಳು ತಮಗೆ ತಾವೇ ಮಹತ್ವವನ್ನು ಹೊಂದಿದವುಗಳೆಂಬ ಸಿದ್ಧಾಂತವು ಅವನಿಗೆ ಮಾನ್ಯವಲ್ಲ. ಕವಿಗೆ ಮುಖ್ಯವಾದುದು ರಸ ಪ್ರತಿಪಾದನೆ. ಅದು ಅವನ ಪರಮಗುರಿ. ಈ ಗುರಿಯನ್ನು ಸೇರುವಲ್ಲಿ ನೆರವನ್ನು ನೀಡಬಹುದಾದ ಅಲಂಕಾರಗಳಿಗೆ ಸ್ವಾಗತವುಂಟು. ಅಲಂಕಾರಗಳು ಸಾಧನೆಗಳೇ ಹೊರತು ಸಾಧ್ಯಗಳಲ್ಲ . ಅವನ ಮಾತುಗಳಿವು –

**ರಸಭಾವಾದಿ ತಾತ್ಪರ್ಯಮಾಶ್ರಿತ್ಯವಿನಿವೇಶನಮ್**
**ಅಲಂಕೃತೀನಾಂ ಸರ್ವಾಸಾಮಲಂಕಾರತ್ವಸಾಧನಮ್ ||**

೨ – ೫ರ ವೃತ್ತಿಯಲ್ಲಿ

"ರಸಭಾವಾದಿಗಳ ತಾತ್ಪರ್ಯವನ್ನು ಮನಸ್ಸಿನಲ್ಲಿಟ್ಟು ಕೊಂಡು ಮಾಡುವ ಅಲಂಕಾರಗಳ ಸಂಯೋಜನೆಯೇ ಎಲ್ಲ ಅಲಂಕಾರಗಳಿಗೂ ಅಲಂಕಾರತ್ವವನ್ನು ಸಾಧಿಸಿಕೊಡುತ್ತದೆ ". ಅಲಂಕಾರಗಳು ಹೇಗೆ ಜೊತೆಗೊಳ್ಳಬೇಕೆಂಬ ಬಗೆಗೂ ಅವನು ಹೇಳಿದ್ದಾನೆ –

**ರಸಾಕ್ಷಿಪ್ತತಯಾ ಯಸ್ಯ ಬಂಧಃ ಶಕ್ಯಕ್ರಿಯೋಭವೇತ್**
**ಅಪ್ರುಥಗ್ಯತ್ನನಿರ್ವರ್ತ್ಯಃ ಸೋऽಲಂಕಾರೋಧ್ವನೌ ಮತಃ ||**

(೨–೧೬)

ರಸಾಕ್ಷಿಪ್ತವಾದ ಮನಸ್ಸಿನಿಂದ, ಅಪ್ರಯತ್ನಪೂರ್ವಕವಾಗಿ ಯಾವುದರ ಬಂಧ ಅಥವಾ

ರಚನೆಯು ಸಾಧ್ಯವೋ ಅದನ್ನು ಮಾತ್ರ ಅಲಂಕಾರವೆಂದು ಭಾವಿಸುವುದು ಧ್ವನಿಸಿದ್ಧಾಂತಕ್ಕೆ ಒಪ್ಪಿತವಾದುದು.

ಅಲಂಕಾರಗಳು ಮೂಲತಃ ಸೌಂದರ್ಯವೃದ್ಧಿಯ ಸಾಧನಗಳು. ಕಾವ್ಯದಲ್ಲಿ ಅವುಗಳದು ಪೋಷಕ ಪಾತ್ರವೇ ಹೊರತು ನಾಯಕ ಪಾತ್ರವಲ್ಲ. ಅವುಗಳಿಂದ ಅಭಿವ್ಯಕ್ತಿಗೆ ತೀವ್ರತೆ, ಭಾವಗಳಿಗೆ ಪ್ರಭಾವಾತ್ಮಕತೆಯುಂಟಾಗುತ್ತದೆ. ಸುವರ್ಣಕ್ಕೆ ಸುಗಂಧವು ಸೇರಿದಂತೆ ಉತ್ತಮವಾದ ವಿಚಾರವು ಮೋಹಕವಾದ ಮಾತಿನಲ್ಲಿ ವ್ಯಕ್ತಗೊಂಡರೆ ಅದರ ಸೊಗಸೇ ಬೇರೆ. ಆದರೆ ಇಂಥ ಅಲಂಕಾರಗಳು "ತರು ತಳೆದ ಪುಷ್ಪ" ದಂತಿರಬೇಕು. ರಸಸಮಾಹಿತ ಚೇತನನಾದ ಪ್ರತಿಭಾಶಾಲಿಯಾದ ಕವಿಯಲ್ಲಿ ಅವು ನಾನು - ನಾನೆಂದು ಮುಂದೆ ಬರುತ್ತವೆ. ( **ಪ್ರತಿಭಾನವತಃ ಕವೇಃ ಅಹಂಪೂರ್ವಿಕಯಾ ಪರಾಪತಂತಿ - ಧ್ವನ್ಯಾಲೋಕ** )

ಅಲಂಕಾರಗಳಿಗೆ ಆಶ್ರಯವಾವುದು? ಶಬ್ದಮತ್ತುಅರ್ಥಗಳನ್ನು ಆಶ್ರಯಿಸಿದವುಗಳೆಂದು ಆನಂದವರ್ಧನನ ಅಭಿಪ್ರಾಯ. ಅವು ಕಟಕ, ಕುಂಡಲ ಮುಂತಾದ ಆಭರಣಗಳಂತೆ ಇರುತ್ತವೆ. (**ಅಂಗಾಶ್ರಿತಾಸ್ತ್ವಲಂಕಾರಾಃ ಮಂತವ್ಯಾಃ ಕಟಕಾದಿವತ್**). ಭಾಮಹನು ಅಲಂಕಾರಗಳನ್ನು ಆಭರಣಗಳಿಗೆ ಹೋಲಿಸಿದ್ದ, ಆನಂದವರ್ಧನನೂ ಅದನ್ನೇ ಹೇಳಿದ. ಕೆಲವರು ಈ ಉಪಮೆಯನ್ನೇ ಗಟ್ಟಿಯಾಗಿ ಹಿಡಿದು ಅಲಂಕಾರವೆಂದರೆ ಬೇಕಾದಾಗ ತೊಡುವ, ಬೇಡವಾದಾಗ ಕಳಚಿಡುವ ಆಭರಣಗಳೆಂದು ಧ್ವನಿವಾದಿಗಳು ಭಾವಿಸಿದ್ದರೆಂದು ಅಭಿಪ್ರಾಯಪಡುತ್ತಾರೆ. ಆದರೆ ಅದು ಪೂರ್ಣ ಸತ್ಯವಲ್ಲ. ಧ್ವನಿವಾದದ ಪ್ರಬಲ ಸಮರ್ಥಕನಾದ ಮಮ್ಮಟನು ಕ್ವಚಿತ್ತಾಗಿ ಅಲಂಕಾರವಿಲ್ಲದಿದ್ದರೂ ನಡೆಯುತ್ತದೆಂದು ಹೇಳುತ್ತಲೇ ಪ್ರಾಯಃ ಸಾಲಂಕಾರತ್ವವನ್ನು ಕಾವ್ಯದ ಲಕ್ಷಣವೆಂದು ಹೇಳುತ್ತಾನೆ. ( **ಅನಲಂಕೃತೀ ಪುನಃ ಕ್ವಾಪಿ** ). ಮುಂದಿನವರು ಅಲಂಕಾರಗಳ ಬಗ್ಗೆ ಸಾಕಷ್ಟು ವಿಸ್ತಾರವಾಗಿ ಚರ್ಚಿಸುತ್ತಾರಷ್ಟೇ ಅಲ್ಲ, ಅಲಂಕಾರಗಳ ಸಂಖ್ಯೆಯನ್ನು ಹೆಚ್ಚಿಸುತ್ತಲೇ ಬಂದರು, ಎಂಬುದನ್ನು ಗಮನಿಸಬಹುದು.

ಮಮ್ಮಟಾದಿ ಅಲಂಕಾರಿಕರಿಗೆ ಅಲಂಕಾರಗಳ ವಿವೇಚನೆಯಲ್ಲಿ ಕುಂತಕನ ದೃಷ್ಟಿಯು ಸಾಕಷ್ಟು ಪ್ರಭಾವ ಬೀರಿದೆ. ಕುಂತಕನು ಪ್ರತಿಯೊಂದು ಅಲಂಕಾರವೂ ಧ್ವನಿ ಸಮನ್ವಿತವಾಗಿರಬೇಕೆಂಬ ಅಭಿಪ್ರಾಯವನ್ನು ಒಪ್ಪುವುದಿಲ್ಲ. ಕೆಲವೊಮ್ಮೆ ಅಲಂಕಾರವೇ ಸೌಂದರ್ಯಾನುಭವಕ್ಕೆ ಕಾರಣವಾಗಬಲ್ಲುದೆಂಬುದನ್ನು ನಿರೂಪಿಸುತ್ತಾನೆ. ನಿಸರ್ಗವರ್ಣನೆಯನ್ನು ಮಾಡುವಂಥಲ್ಲಿ ಧ್ವನಿಯನ್ನು ಹುಡುಕಬೇಕಿಲ್ಲ. ಅನುಭವವೇ ಸಾಲಂಕೃತವಾಗಿ ಜನ್ಮ ತಳೆಯಬಲ್ಲುದು. ಆಗ ಅದರ ಸೊಬಗು ಬೇರೆಯದಾಗಬಲ್ಲುದೆಂದು ಹೇಳಿದ. ಅವನ ವಕ್ರೋಕ್ತಿ ಕಲ್ಪನೆಯು ಅದನ್ನು ವಿಶದಪಡಿಸುವುದಕ್ಕಾಗಿಯೇ ಇದೆ. ಅಲಂಕಾರಗಳು ಕವಿಯ ಅಭಿವ್ಯಕ್ತಿಯ ಅನಿವಾರ್ಯಗಳೇ ಆಗಿರುವ ಸಂದರ್ಭಗಳೂ ಉಂಟು; ಕೃತಕವಾಗಿರುವ ಸಂದರ್ಭಗಳೂ ಉಂಟು. ಅವು ಕೃತಕವಾದಾಗ ಬಾಹ್ಯವಾಗುತ್ತವೆ. ಅವುಗಳನ್ನು ಕಿತ್ತೆಸೆದರೂ ತೊಂದರೆಯಿಲ್ಲ. ಸಹಜವಾಗಿರುವಾಗ ಅವುಗಳನ್ನು ತೆಗೆದುಹಾಕಲಾಗುವುದಿಲ್ಲ.

ಅಲಂಕಾರಗಳಲ್ಲಿ ಔಚಿತ್ಯಕ್ಕೆ ಮನ್ನಣೆ. ಅಲಂಕಾರಗಳು ಕಾವ್ಯದ ಶೋಭೆಯನ್ನು

Fine

ಹೆಚ್ಚಿಸುತ್ತವೆಯಾದರೂ ಅವುಗಳ ಅತಿ ಬಳಕೆಯಿಂದ ಅಂದ ಕೆಡುತ್ತದೆ. ಗ್ರಹಣ–ತ್ಯಾಗಗಳನ್ನು ಕವಿಯು ಬಲ್ಲವನಾಗಿರಬೇಕು. ಧ್ವನ್ಯಾಲೋಕಲೋಚನದಲ್ಲಿ ಅಭಿನವಗುಪ್ತನು ಭಾಸನದೆಂದು ಹೇಳಲಾದ ಶ್ಲೋಕವೊಂದನ್ನು ಉದಾಹರಿಸುತ್ತಾನೆ –

ಸ್ವಂಚಿತ ಪಕ್ಷ್ಮಕವಾಟಂ ನಯನದ್ವಾರಂ ಸ್ವರೂಪತಾಡನೇನ ।
ಉದ್ಘಾಟ್ಯ ಸಾ ಪ್ರವಿಷ್ಟಾ ಹೃದಯ ಗೃಹಂ ಮೇ ನೃಪತನೂಜಾ ॥

ಬಾಗಿದ ರೆಪ್ಪೆಗಳೆಂಬ ಕದವುಳ್ಳ, ಕಣ್ಣುಗಳೆಂಬ ದ್ವಾರವನ್ನು ತನ್ನ ರೂಪವೆಂಬ ಕೀಲಿಯ ಕೈಯಿಂದ ತೆರೆದು ಆ ರಾಜಕುಮಾರಿಯು ನನ್ನ ಹೃದಯವೆಂಬ ಗೃಹವನ್ನು ಪ್ರವೇಶಿಸಿದಳು. ಇಲ್ಲಿ ಕವಿಯ ರೂಪಕ ವ್ಯಾಮೋಹವು ಶೃಂಗಾರ ರಸಕ್ಕೆ ಮಾರಕವಾಗಿದೆ. ಕವಿಯು ತಾನು ನಿರ್ಮಿಸಲು ಹೊರಟ ಅಲಂಕಾರದ ಚಮತ್ಕಾರಕ್ಕೆ ವಶನಾಗಿ ಮೂಲ ಗುರಿಯನ್ನೇ ಮರೆತಿದ್ದಾನೆ ಎನ್ನಲಾಗಿದೆ. ಕ್ಷೇಮೇಂದ್ರನ ಔಚಿತ್ಯ ವಿಚಾರ ಚರ್ಚೆಯಲ್ಲಿ ಅಲಂಕಾರಗಳ ಔಚಿತ್ಯದ ಬಗೆಗೆ ಸಾಕಷ್ಟು ಮಾತುಗಳಿವೆ. ಅವೆಲ್ಲವುಗಳನ್ನು ವಿಸ್ತರಿಸದೆ, ಆಲಂಕಾರಿಕರ ನಿಲುಮೆಯನ್ನು ಹೀಗೆ ಸಂಗ್ರಹಿಸಬಹುದು:

೧. ಅಲಂಕಾರಗಳ ಪ್ರಯೋಗದಲ್ಲಿ ಸ್ವಾಭಾವಿಕತೆ ಇದ್ದು ಅಲ್ಲಿ ಕವಿ ಪ್ರತಿಭೆಯ ಸಂಸ್ಪರ್ಶವಿರಬೇಕು.

೨. ಅಲಂಕಾರಗಳು ಆಯಾಸಪಟ್ಟು ಬಂದವುಗಳಾಗಿರದೆ ತಾವಾಗಿ ಹುಟ್ಟಿ ಬರಬೇಕು.

೩. ಅಲಂಕಾರಗಳನ್ನು ಭಾವಪುಷ್ಟಿಯ ಸಲುವಾಗಿ ಪ್ರಯೋಗಿಸಬೇಕು.

೪. ಅಲಂಕಾರಗಳ ಸ್ಥಾನವು ಗೌಣವಾಗಿರುತ್ತದೆಯೇ ಹೊರತೂ ಮುಖ್ಯವಲ್ಲ. ಆದ್ದರಿಂದ ಓದುಗನ ಧ್ಯಾನವು ಅಲಂಕಾರ ವೈಚಿತ್ರ್ಯದಲ್ಲಿ ನೆಲಸುವಂತೆ ಮಾಡಬಾರದು.

೫. ಯಮಕ, ಶ್ಲೇಷ ಮುಂತಾದ ಅಲಂಕಾರಗಳ ಪ್ರಯೋಗವು ಕೇವಲ ಚಮತ್ಕಾರ ಪ್ರದರ್ಶನಕ್ಕಾಗಿರದೇ, ಕಾವ್ಯ ಬಂಧದಲ್ಲಿ ಸಂಶ್ಲಿಷ್ಟವಾಗಿರಬೇಕು.

೬. ಔಚಿತ್ಯವನ್ನು ಗಮನಿಸಿ ಅವುಗಳನ್ನು ಎಷ್ಟು ಬೇಕೋ ಅಷ್ಟನ್ನು ಮಾತ್ರ ಇಟ್ಟುಕೊಳ್ಳಬೇಕು. ಇದನ್ನು ಅಲಂಕಾರಗಳ ಬಗೆಗೆ ಆಲಂಕಾರಿಕರ ಸಾಮಾನ್ಯ ನಿಲುಮೆಯೆಂದು ಹೇಳಬಹುದು.

# ಅಲಂಕಾರಗಳ ವಿಕಾಸ ; ವರ್ಗೀಕರಣ

ಅಲಂಕಾರಗಳ ಪ್ರಯೋಗವು ಅತ್ಯಂತ ಪ್ರಾಚೀನ ಕಾಲದಿಂದಲೇ ಇತ್ತೆಂಬುದಕ್ಕೆ ವೈದಿಕ ಸೂಕ್ತಗಳನ್ನು ನೋಡಬಹುದು. ವೇದಗಳಲ್ಲಿ ಉಪಮೆ, ರೂಪಕ, ಅತಿಶಯೋಕ್ತಿ ಮತ್ತು ಉತ್ಪ್ರೇಕ್ಷಾ ಅಲಂಕಾರಗಳನ್ನು ಪ್ರಯೋಗಿಸಲಾಗಿದೆ. ಉದಾ : '' ಉಷಾಹಸ್ನೇವ ನಿರ್ಣೀತೇ ಅಪ್ಸಃ'' ಹೀಗೆ ಉಷೆಯು ನಗುತ್ತಿರುವವಳಂತೆ ತನ್ನ ರೂಪವನ್ನು ಪ್ರಕಟಪಡಿಸುತ್ತಾಳೆ. ವೇದಯುಗದಲ್ಲಿ ಕಾವ್ಯಮೀಮಾಂಸೆಯು ಬೆಳೆದಿರಲಿಲ್ಲವಾದರೂ ಭಾವ ಪ್ರಕಟನೆಗೆ ಅನಿವಾರ್ಯವಾದ ಮತ್ತು ಸಹಜವಾದ ಅಲಂಕಾರಗಳನ್ನು ಬಳಸಿದ್ದಾರೆ.

ಭರತನು ನಾಟ್ಯಶಾಸ್ತ್ರದಲ್ಲಿ ಉಪಮಾ ,ರೂಪಕ, ದೀಪಕ, ಮತ್ತು ಯಮಕಗಳೆಂಬ ನಾಲ್ಕು ಅಲಂಕಾರಗಳನ್ನು ಹೆಸರಿಸಿದ್ದಾನೆ. ಉಪಮೆಯಲ್ಲಿ ಐದು ಭೇದಗಳನ್ನು ಹೇಳಿದ್ದಾನೆ. ಪ್ರಶಂಸಾ, ನಿಂದಾ, ಕಲ್ಪಿತಾ, ಸದಶೀ ಮತ್ತು ಕಿಂಚಿತ್‌ಸದಶೀ ಎಂಬುದಾಗಿ. ಅಂತೆಯೆ ಯಮಕದ ಹತ್ತು ಭೇದಗಳನ್ನು ಹೇಳುತ್ತಾನೆ. ರೂಪಕ ಮತ್ತುದೀಪಕಗಳ ಭೇದವನ್ನು ಹೇಳಿಲ್ಲ. ಆದರೆ ಅಲ್ಲಿಂದ ಮುಂದೆ ಭಾಮಹನಲ್ಲಿ ೩೬ ಅಲಂಕಾರಗಳನ್ನು ಕಾಣುತ್ತೇವೆ . ಎರಡು ಶಬ್ದಾಲಂಕಾರಗಳನ್ನು ಸೇರಿಸಿದರೆ ೩೮ ಅಲಂಕಾರಗಳಾಗುತ್ತವೆ . ಅಂದರೆ ಈ ಭರತನಿಂದ ಭಾಮಹನ ವರೆಗಿನ ಕಾಲಾವಧಿಯಲ್ಲಿ ಅನೇಕ ಅಲಂಕಾರಗಳು ಸೇರ್ಪಡೆಯಾಗಿರಬೇಕು. ಭಟ್ಟಿ ಕಾವ್ಯದಂಥ ಗ್ರಂಥಗಳು ಇದಕ್ಕೆ ತಕ್ಕ ಪ್ರಮಾಣಗಳನ್ನೊದಗಿಸುತ್ತವೆ.

ಭಾಮಹನ ಅನಂತರದ ಕಾಲದಲ್ಲಿ ಅಲಂಕಾರಗಳ ಪಟ್ಟಿಯು ಬೆಳೆಯುತ್ತಲೇ ಹೋಯಿತು. ಉದ್ಭಟ ೪೮ ಅಲಂಕಾರಗಳನ್ನು ಹೇಳಿದರೆ, ರುದ್ರಟ ೬೮ ಅಲಂಕಾರಗಳನ್ನು ಹೇಳುತ್ತಾನೆ. ಚಂದ್ರಾಲೋಕಕಾರನಾದ ಜಯದೇವನು ೧೦೦ ಅಲಂಕಾರಗಳನ್ನು ಹೇಳಿದರೆ, ಕುವಲಯಾನಂದದಲ್ಲಿ ಅವುಗಳ ಸಂಖ್ಯೆ ೧೨೦ ಕ್ಕೆ ಏರುತ್ತದೆ. ಕನ್ನಡದಲ್ಲಿ ಕವಿರಾಜ ಮಾರ್ಗಕಾರನು ೩೫ ಅಲಂಕಾರಗಳನ್ನು ಹೇಳಿದರೆ, ಕಾವ್ಯಾವಲೋಕನದಲ್ಲಿ ೬೦ ಅಲಂಕಾರಗಳಾಗುತ್ತವೆ. 'ಅಪ್ರತಿಮವೀರಚರಿತೆ' ಯಲ್ಲಿ ಅವುಗಳ ಸಂಖ್ಯೆ ೧೨೦ ಕ್ಕೆ ಏರುತ್ತದೆ.

ಅಲಂಕಾರಗಳ ಸಂಖ್ಯೆ ಹೆಚ್ಚುವುದಕ್ಕೆ ಒಂದೊಂದು ಉಕ್ತಿವಿಶೇಷವನ್ನೂ ಅಲಂಕಾರವೆಂದು ಗುರುತಿಸುವುದು ಕಾರಣವೆನ್ನಬಹುದು. ಅಂತೆಯೇ ಅಲಂಕಾರಗಳಲ್ಲಿ ಸ್ವಲ್ಪವೇ ವ್ಯತ್ಯಾಸ ತೋರಿದರೂ ಅದನ್ನು ಪ್ರತ್ಯೇಕ ಭೇದವೆಂದು ಗುರುತಿಸುವ ರೂಢಿಯು ಬೆಳೆಯಿತು. ಕವಿಗಳು ಬಳಸಿರುವ ಉಕ್ತಿ ವಿಶೇಷಗಳನ್ನೆಲ್ಲ ಒಂದಿಲ್ಲೊಂದು ಅಲಂಕಾರವೆಂದು ಹೇಳಲೇಬೇಕೆಂಬ ಆಗ್ರಹದಿಂದ ಹೊರಡಲಾಯಿತು. ಕವಿಯ ಪ್ರತಿಭೆಯಿಂದ ವಿನೂತನ ಚಮತ್ಕಾರಗಳು ಆವಿರ್ಭವಿಸಿದಂತೆಲ್ಲ ಅವನ್ನು ಗುರುತಿಸಿ ಕ್ರಮಬದ್ಧಗೊಳಿಸಿ ಲಕ್ಷಣವನ್ನು ಹೇಳಲು ಪ್ರಯತ್ನಿಸಿದರು. ಲಕ್ಷಣವು ಶಾಸ್ತ್ರ ಶುದ್ಧವಾಗಿರುವಂತೆ ಹವಣಿಸಿದಾಗ ಇದು ಅನಿವಾರ್ಯವಾಗುತ್ತದೆ.

ಇದರಲ್ಲಿ ಗಮನಿಸಬೇಕಾದ ಇನ್ನೊಂದು ಸಂಗತಿಯೆಂದರೆ, ಕವಿಪ್ರತಿಭೆಯು ನಿರ್ದಿಷ್ಟವಾದ ಅಲಂಕಾರವನ್ನು ಹೇಳುವುದಕ್ಕಾಗಿ ಹೊರಡುವುದಿಲ್ಲ. ಲಕ್ಷಣಕಾರನ ಲಕ್ಷ್ಯವಾಗಲೆಂದು ಮಹಾಕವಿಗಳು ಪದ್ಯಗಳನ್ನು ರಚಿಸುವುದಿಲ್ಲ. ಅಂತೆಯೇ ಕಾವ್ಯರಾಶಿಯಲ್ಲಿ ಅನೇಕ ಪದ್ಯಗಳಲ್ಲಿ ಒಂದಲ್ಲ, ಹಲವು ಅಲಂಕಾರಗಳು ಸೇರಿಕೊಂಡಿರುತ್ತವೆ. ಕೆಲವೊಮ್ಮೆ ಅಲಂಕಾರಗಳ ಛಾಯೆ ಮಾತ್ರವಿರುವುದುಂಟು. ಲಕ್ಷಣವನ್ನು ನಿಷ್ಕೃಷ್ಟವಾಗಿ ಅನ್ವಯಿಸಬೇಕೆಂದರೆ ಅದು ಕೈಗೆ ಸಿಗದೆ ನುಣುಚಿಕೊಳ್ಳುವುದುಂಟು. ಈ ಲಕ್ಷಣಗಳನ್ನು ಅನ್ವಯಿಸುವಾಗಲೂ ಒಂದು ದೃಷ್ಟಿಯಿಂದ ನೋಡಿದಾಗ ಕಾಣುವ ಅಲಂಕಾರವು ಮತ್ತೊಂದು ದೃಷ್ಟಿಯಿಂದ ನೋಡಿದಾಗ ಬೇರೆಯೇ ಆಗಿ ಕಾಣುತ್ತದೆ. ಇಲ್ಲಿ ಲಕ್ಷಣಕಾರ ಸೋಲುತ್ತಾನೆ. ಆದರೆ ಅವನ ಸೋಲು ಕಾವ್ಯದ ಹಿರಿಮೆಯನ್ನು ಹೇಳುತ್ತದೆ.

ಇದನ್ನು ಆಲಂಕಾರಿಕರು ಅರಿಯದವರಲ್ಲ. ಮಮ್ಮಟನಂಥವರು ಅದನ್ನು ವ್ಯಕ್ತಪಡಿಸಿಯೂ ಇದ್ದಾರೆ. ಆದೇ ವಿಚಾರದಿಂದಲೇ ಅವುಗಳನ್ನು ವರ್ಗೀಕರಿಸುವ ಪ್ರಯತ್ನವು ನಡೆಯಿತು. ಬೇರೆ ಬೇರೆ ಅಲಂಕಾರಗಳಲ್ಲಿ ಅಂತರ್ಗತವಾದ ತತ್ತ್ವಗಳನ್ನು ಸ್ಥೂಲವಾದ ವರ್ಗಗಳಲ್ಲಿ ವಿಂಗಡಿಸಿದರೆ ಅವುಗಳನ್ನು ತಿಳಿಯಲು ಅನುಕೂಲವೆಂಬ ಭಾವನೆಯೂ ಅದಕ್ಕೆ ಪ್ರೇರಕವಾಗಿದೆ. ಅಂಥ ಕೆಲವು ಗಮನಾರ್ಹ ಪ್ರಯತ್ನಗಳನ್ನೂ ಗಮನಿಸಬಹುದು.

ಅಲಂಕಾರಗಳನ್ನು ಶಬ್ದ ಮತ್ತು ಅರ್ಥಗಳಲ್ಲಿ ವಿಂಗಡಿಸುವುದು ತುಂಬ ಪ್ರಸಿದ್ಧವಾದದ್ದು. ಭಾಮಹ, ದಂಡಿಗಳು ಅಲಂಕಾರಗಳನ್ನು ಹೆಸರಿಸುವಾಗ ಅವೇ ತತ್ತ್ವಗಳನ್ನು ಮನಸ್ಸಿನಲ್ಲಿ ಇಟ್ಟುಕೊಂಡಂತಿದೆ. ವಾಮನನು ಸ್ಪಷ್ಟವಾಗಿ ಭೇದಗಳನ್ನು ಹೇಳುತ್ತಾನೆ. ಶಬ್ದ ಚಮತ್ಕಾರವು ಪ್ರಧಾನವಾದಾಗ ಶಬ್ದಾಲಂಕಾರ, ಉದಾ: ಅನುಪ್ರಾಸ, ಯಮಕ ಇತ್ಯಾದಿ. ಅರ್ಥಚಮತ್ಕಾರವು ಪ್ರಧಾನವಾದಾಗ ಅರ್ಥಾಲಂಕಾರ, ಉದಾ: ಉಪಮಾ, ರೂಪಕ, ಉತ್ಪ್ರೇಕ್ಷಾ: ಮುಂತಾದವು. ಇಲ್ಲಿಯೂ ಶ್ಲೇಷದಂಥ ಅಲಂಕಾರವು ಸಮಸ್ಯೆಯಾಗುತ್ತದೆ. ಹಾಗಾಗಿ ಭೋಜನು ಉಭಯಾಲಂಕಾರವೆಂಬ ಮತ್ತೊಂದು ಪ್ರಕಾರವನ್ನೂ ಹೇಳುತ್ತಾನೆ.

ಶಬ್ದಾಲಂಕಾರಗಳ ಸಂಖ್ಯೆ ಅರ್ಥಾಲಂಕಾರಗಳಿಗಿಂತ ಕಡಿಮೆ. ಅದರಲ್ಲಿಯೂ ರಸಧ್ವನಿಗಳನ್ನು ಪ್ರಧಾನವೆಂದು ಪರಿಗಣಿಸುವ ನವೀನ ಆಲಂಕಾರಿಕರು ಶಬ್ದಾಲಂಕಾರಗಳಿಗೆ ಹೆಚ್ಚು ಮಹತ್ವವನ್ನು ಕೊಡುವುದಿಲ್ಲ. ಶಬ್ದಾಲಂಕಾರಗಳಿಂದ ಒಂದು ಬಗೆಯ ವೈಚಿತ್ರ್ಯವುಂಟಾದರೂ ಅವು ನಮ್ಮ ಗಮನವನ್ನು ಪ್ರಧಾನವಾದ ರಸದಿಂದ ಬೇರೆಡೆಗೆ ಸೆಳೆಯುತ್ತವೆ. ಇದು ರಸಾಸ್ವಾದನೆಗೆ ಅಡ್ಡಿಯನ್ನುಂಟು ಮಾಡುತ್ತದೆ. ಹಾಗಾಗಿ ಅನುಪ್ರಾಸದಂಥ ಅಲಂಕಾರವನ್ನು ಬಳಸುವಾಗಲೂ ಅದು ಮಿತಿಯಲ್ಲಿಯೇ ಇರಬೇಕು. ಯಮಕದಂಥ ಅಲಂಕಾರವಂತೂ ರಸಾಸ್ವಾದನೆಗೆ ಅಡ್ಡಿಯಾಗುವುದಾದ್ದರಿಂದ ಶೃಂಗಾರದಂಥ ಕೋಮಲರಸ ಪ್ರತಿಪಾದನೆಯಲ್ಲಿ ಬರಲೇ ಕೂಡದೆನ್ನುತ್ತಾರೆ. ಅಂತೆಯೇ ಶಬ್ದಾಲಂಕಾರಗಳ ಬಗೆಗೆ ಚರ್ಚೆ ಕಡಿಮೆ. ''ಸರಸ್ವತೀ ಕಂಠಾಭರಣ''ದಲ್ಲಿ ಸುಮಾರು ೨೪ ಶಬ್ದಾಲಂಕಾರಗಳನ್ನು ಹೇಳಿದ್ದು ಬಹುಶಃ ಅಷ್ಟು ಹೆಚ್ಚು ಸಂಖ್ಯೆಯ ಅಲಂಕಾರಗಳನ್ನು ಮತ್ತಾರೂ ಹೇಳಿದಂತಿಲ್ಲ.

ಅರ್ಥಾಲಂಕಾರಗಳ ವಿಭಾಗಕ್ಕೆ ನಾಂದಿಯನ್ನು ಹಾಡಿದವ ವಾಮನ. ಅವನು ಅಲಂಕಾರಗಳನ್ನು ಉಪಮಾ ಮತ್ತು ಉಪಮಾಪ್ರಪಂಚವೆಂದು ಎರಡೇ ವರ್ಗಗಳಲ್ಲಿ ಸಮಾವೇಶಗೊಳಿಸುತ್ತಾನೆ. ಸಾದೃಶ್ಯಮೂಲವಾದ ಅಲಂಕಾರಗಳಲ್ಲಿ ಇರುವ ಸೌಂದರ್ಯ ಸಂಪತ್ತು ಇತರ ಅಲಂಕಾರಗಳಲ್ಲಿ ಇರುವುದಿಲ್ಲವೆಂಬುದು ಅವನ ಆಂತರ್ಯದಲ್ಲಿರಬಹುದು. ಆದರೆ ಅವನೇ ಸಾದೃಶ್ಯೇತರ ಮೂಲದ ಅಲಂಕಾರಗಳನ್ನು ಲಕ್ಷಿಸಿದ್ದಾನೆ. ಆದರೆ ಅವುಗಳ ಬಗೆಗೆ ಏನೂ ಹೇಳುವುದಿಲ್ಲ. ಅಂದರೆ ಅಲಂಕಾರಗಳನ್ನು ನಿಯತವಾದ ವರ್ಗಗಳಲ್ಲಿ ವಿಂಗಡಿಸುವುದಕ್ಕಿಂತ ಸಾದೃಶ್ಯ ಮೂಲವಾದ ಅಲಂಕಾರಗಳ ಹಿರಿಮೆಯನ್ನು ಹೇಳುವುದು ಅವನ ವಿವಕ್ಷೆಯಾಗಿರಬೇಕೆನಿಸುತ್ತದೆ. ಅದೇನೇ ಇದ್ದರೂ ಅವನು ಅಲಂಕಾರಗಳ ವರ್ಗೀಕರಣದತ್ತ ಆಲಂಕಾರಿಕರ ಗಮನವನ್ನು ಸೆಳೆದವನೆಂಬುದು ಸತ್ಯ.

ಅಲಂಕಾರಗಳ ವರ್ಗೀಕರಣಕ್ಕೆ ಗಂಭೀರವಾಗಿ ಪ್ರಯತ್ನಿಸಿದವನು ರುದ್ರಟ. ಅವನು ತನ್ನ ಕಾವ್ಯಾಲಂಕಾರದಲ್ಲಿ ವಾಸ್ತವ, ಔಪಮ್ಯ, ಅತಿಶಯ ಮತ್ತು ಶ್ಲೇಷ ಎಂಬ ನಾಲ್ಕು ವರ್ಗಗಳಲ್ಲಿ ಎಲ್ಲ ಅಲಂಕಾರಗಳನ್ನು ಸೇರಿಸುವ ಪ್ರಯತ್ನ ಮಾಡಿದ್ದಾನೆ. ಆದರೆ ಈ ವರ್ಗೀಕರಣವು ಸಮಾಧಾನಕರವಾಗಿಲ್ಲ. ಅನೇಕ ಅಲಂಕಾರಗಳನ್ನು ಹೊರಗೇ ಇಡಬೇಕಾಗುತ್ತದೆ. ಬಹುಶಃ ಅದಕ್ಕೇ ಇರಬೇಕು, ಕಾವ್ಯಪ್ರಕಾಶಕಾರನಾದ ಮಮ್ಮಟನು ಅಲಂಕಾರಗಳ ವಿಭಾಗದತ್ತ ಗಮನ ಹರಿಸದೇ ಕೇವಲ ಶಬ್ದ ಮತ್ತು ಅರ್ಥಾಲಂಕಾರಗಳೆಂಬ ವಿಭಾಗಗಳನ್ನು ಮಾತ್ರ ಗಮನಿಸುತ್ತಾನೆ.

ಅಲಂಕಾರಗಳ ವರ್ಗೀಕರಣವನ್ನು ಇನ್ನಷ್ಟು ಸಮರ್ಪಕವಾಗಿ ಮಾಡಲು ಯತ್ನಿಸಿದ ರುಯ್ಯಕನನ್ನು ಹೆಸರಿಸುವುದು ಅವಶ್ಯ. ಧ್ವನಿಮಾರ್ಗದ ಅನುಯಾಯಿಯಾದ ರುಯ್ಯಕ ಅಲಂಕಾರಗಳ ಲಕ್ಷಣ ಪರಿಷ್ಕರಣದಲ್ಲಿ ತುಂಬ ಎಚ್ಚರವಹಿಸಿದ್ದಾನೆ. ಅವನು 'ಅಲಂಕಾರಸರ್ವಸ್ವ' ದಲ್ಲಿ ಅಲಂಕಾರಗಳ ವರ್ಗೀಕರಣಕ್ಕೂ ಪ್ರಯತ್ನಿಸಿದ್ದಾನೆ. ತೀರ ಸೂಕ್ಷ್ಮವೂ ಅಲ್ಲದ ತೀರ ವಿಸ್ತಾರವೂ ಅಲ್ಲದ ವಿಭಾಗಕ್ರಮವನ್ನು ಅನುಸರಿಸಿದ್ದಾನೆ. ಅದನ್ನಷ್ಟು ಗಮನಿಸಬಹುದು. ಸಾದೃಶ್ಯ, ವಿರೋಧ, ಶೃಂಖಲಾ, ನ್ಯಾಯ ಮತ್ತು ಗೂಢಾರ್ಥ ಪ್ರತೀತಿಗಳೇ ಈ ತತ್ತ್ವಗಳು.

ಸಾದೃಶ್ಯ ಮೂಲವಾದ ಅಲಂಕಾರಗಳನ್ನು ಭೇದಾಭೇದತುಲ್ಯ, ಅಭೇದ ಪ್ರಧಾನ ಮತ್ತು ಭೇದ ಪ್ರಧಾನವೆಂದು ಮೂರು ಉಪವಿಭಾಗಗಳಲ್ಲಿ ವಿಂಗಡಿಸಲಾಗಿದೆ. ಉಪಮಾ, ಉಪಮೇಯೋಪಮಾ, ಅನನ್ವಯ, ಮತ್ತು ಸ್ಮರಣಗಳು ಭೇದಾಭೇದತುಲ್ಯತ್ವವುಳ್ಳವು. ಅಭೇದ ಪ್ರಧಾನವು ಆರೋಪ ಮೂಲಕ ಮತ್ತು ಅಧ್ಯವಸಾಯ ಮೂಲಕವೆಂದು ಎರಡು ಬಗೆಯಾಗಿದೆ. ರೂಪಕ, ಪರಿಣಾಮ, ಸಂದೇಹ, ಭ್ರಾಂತಿ, ಉಲ್ಲೇಖ ಮತ್ತು ಅಪಹ್ನುತಿಗಳು ಆರೋಪ ಮೂಲಕವಾದ ಅಲಂಕಾರಗಳು. ಅತಿಶಯೋಕ್ತಿ ಮತ್ತು ಉತ್ಪ್ರೇಕ್ಷೆಗಳು ಅಧ್ಯವಸಾಯ ಮೂಲಕವಾದವುಗಳು. ವ್ಯತಿರೇಕ, ಸಹೋಕ್ತಿ ಮತ್ತು ವಿನೋಕ್ತಿಗಳು ಭೇದ ಪ್ರಧಾನವೆಂಬ ವರ್ಗಕ್ಕೆ ಸೇರುತ್ತವೆ. ಗಮ್ಯವಾದ ಔಪಮ್ಯವುಳ್ಳ ೧೬ ಅಲಂಕಾರಗಳು ಇವೆ. ಭೇದ ಪ್ರಧಾನವಾದ ಮೂರು ಅಲಂಕಾರಗಳಲ್ಲದೆ, ತುಲ್ಯಯೋಗಿತಾ, ದೀಪಕ, ಪ್ರತಿವಸ್ತೂಪಮಾ, ದೃಷ್ಟಾಂತ, ನಿದರ್ಶನಾ, ಸಮಾಸೋಕ್ತಿ, ಪರಿಕರ, ಪರಿಕರಾಂಕುರ, ಶ್ಲೇಷ, ಅಪ್ರಸ್ತುತಪ್ರಶಂಸಾ,

ಅರ್ಥಾಂತರನ್ಯಾಸ, ಪರ್ಯಾಯೋಕ್ತ, ವ್ಯಾಜಸ್ತುತಿ ಮತ್ತು ಆಕ್ಷೇಪಗಳು ಈ ವರ್ಗಕ್ಕೆ ಸೇರುತ್ತವೆ.

ವಿರೋಧವು ಇನ್ನೊಂದು ತತ್ತ್ವ. ನಾನಾ ರೀತಿಯಲ್ಲಿ ವಿರೋಧದ ತೋರ್ಕೆಯಿರುವ ಅಲಂಕಾರಗಳು ಈ ವರ್ಗಕ್ಕೇ ಸೇರುತ್ತವೆ. ವಿರೋಧ, ವಿಭಾವನಾ, ವಿಶೇಷೋಕ್ತಿ, ಅಸಂಗತಿ, ವಿಷಮ, ಸಮ, ವಿಚಿತ್ರ, ಅಧಿಕ, ಅನ್ಯೋನ್ಯ, ವಿಶೇಷ ಮತ್ತು ವ್ಯಾಘಾತಗಳು ಈ ವರ್ಗಕ್ಕೆ ಸೇರಿವೆ. ಶೃಂಖಲಾಬಂಧವು ಇನ್ನೊಂದು ತತ್ತ್ವ. ಅಲಂಕಾರಗಳಲ್ಲಿ ಸರಪಳಿಯ ರಚನೆಯು ಕಾಣಬರುತ್ತಿದ್ದರೆ ಅವುಗಳನ್ನು ಈ ವರ್ಗಕ್ಕೆ ಸೇರಿಸಲಾಗುವುದು. ಕಾರಣಮಾಲಾ, ಏಕಾವಲೀ, ಸಾರ ಮತ್ತು ಮಾಲಾ ದೀಪಕಗಳು ಈ ವರ್ಗಕ್ಕೆ ಸೇರಿವೆ.

ನ್ಯಾಯ ಮೂಲಕವಾದ ಆಲಂಕಾರಗಳಲ್ಲಿ ತರ್ಕನ್ಯಾಯ, ವಾಕ್ಯನ್ಯಾಯ ಮತ್ತು ಲೋಕನ್ಯಾಯಗಳೆಂಬ ಒಳವಿಭಾಗಗಳಿವೆ . ಕಾವ್ಯಲಿಂಗ ಮತ್ತು ಅನುಮಾನಗಳು ತರ್ಕನ್ಯಾಯವನ್ನು ಆಧರಿಸಿವೆ. ಯಥಾಸಂಖ್ಯ , ಪರ್ಯಾಯ, ಪರಿವೃತ್ತಿ ಪರಿಸಂಖ್ಯಾ, ಅರ್ಥಾಪತ್ತಿ ವಿಕಲ್ಪ, ಸಮುಚ್ಚಯ ಮತ್ತು ಸಮಾಧಿಗಳಲ್ಲಿರುವುದು ವಾಕ್ಯನ್ಯಾಯ. ಪ್ರತ್ಯನೀಕ, ಪ್ರತೀಪ, ಮೀಲಿತ, ಸಾಮಾನ್ಯ, ತದ್ಗುಣ, ಅತದ್ಗುಣ ಮತ್ತು ಉತ್ತರಗಳನ್ನು ಲೋಕನ್ಯಾಯ ಮೂಲಕವಾದ ಅಲಂಕಾರಗಳೆಂದು ಹೇಳಲಾಗಿದೆ. ಗೂಢಾರ್ಥಪ್ರತೀತಿ ಮೂಲಕವಾದ ಅಲಂಕಾರಗಳೆಂದರೆ ಸೂಕ್ಷ್ಮ ,ವ್ಯಾಜೋಕ್ತಿ ಮತ್ತು ವಕ್ರೋಕ್ತಿಗಳು. ಸ್ವಭಾವೋಕ್ತಿ , ಭಾವಿಕ, ಉದಾತ್ತಮುಂತಾದ ಅಲಂಕಾರಗಳು ಯಾವ ವರ್ಗಕ್ಕೆ ಸೇರುತ್ತವೆಂದು ಅವನು ಹೇಳುವುದಿಲ್ಲ. ವಿದ್ಯಾಧರನು 'ಏಕಾವಲೀ' ಎಂಬ ಗ್ರಂಥದಲ್ಲಿ ಇವುಗಳನ್ನು ಗೂಢಾರ್ಥ ಪ್ರತೀತಿಯ ವರ್ಗಕ್ಕೇ ಸೇರಿಸುತ್ತಾನೆ. ಸ್ವಭಾವೋಕ್ತಿಯಲ್ಲಿ ಗೂಢಾರ್ಥ ಪ್ರತೀತಿಯು ಹೇಗೆ ಬಂತೋ ತಿಳಿಯದು . ವಿದ್ಯಾನಾಥನ ಪ್ರತಾಪರುದ್ರ ಯಶೋಭೂಷಣದಲ್ಲಿ ಅಧ್ಯವಸಾಯ ಮೂಲಕ ಮತ್ತು ವಿಶೇಷ ವೈಚಿತ್ರ್ಯ ಮೂಲಕ ಎಂಬ ಮತ್ತೆರಡು ವಿಭಾಗಗಳಿವೆ. ಅಷ್ಟಾದರೂ ಎಲ್ಲ ಅಲಂಕಾರಗಳನ್ನು ಇಲ್ಲಿ ಸೇರಿಸುವಂತಿಲ್ಲ . ಸಂಕೀರ್ಣವಿಭಾಗವೊಂದು ಅವಶ್ಯವಾಗುತ್ತದೆ .

ವಿಷಯವು ಸುಲಭವಾಗಿ ಗ್ರಹಿಕೆಯಾಗಬೇಕೆಂಬುದು ವಿಭಾಗ ಮಾಡುವುದರ ಉದ್ದೇಶ. ಆ ವಿಭಾಗ ಕ್ರಮವು ವಿಸ್ತಾರವೂ ಗಹನವೂ ಆಗಿ ಬಿಟ್ಟರೆ ಉದ್ದೇಶಭಂಗವಾಗುತ್ತದೆ . ( ಕನ್ನಡ- ಕೈಪಿಡಿ . ಪು. ೨೬೭ ) ಎಂಬ ಮಾತು ಮನನೀಯವಾದುದು. ಹಾಗಾಗಿ ಕನ್ನಡ ಕೈಪಿಡಿಯಲ್ಲಿ ಅನುಸರಿಸಿದ ರುಯ್ಯಕನ ವಿಭಾಗಕ್ರಮವನ್ನೇ ಇಲ್ಲಿಯೂ ಸ್ಥೂಲವಾಗಿ ಅನುಸರಿಸಿದೆ. ಅಲಂಕಾರಗಳ ವಿವೇಚನೆಯ ಸಂದರ್ಭದಲ್ಲಿ ಅವುಗಳಿಗೆ ಹಿನ್ನಲೆಯಾಗಿರುವ ತತ್ತ್ವದ ಬಗೆಗೂ ಚರ್ಚಿಸಲಾಗುತ್ತದೆಯಾದುದರಿಂದ ವರ್ಗೀಕರಣಕ್ಕೆ ಅತಿಯಾದ ಮಹತ್ವವನ್ನು ಕೊಟ್ಟಿಲ್ಲ ಅದು ಅಷ್ಟೊಂದು ಉಪಯುಕ್ತವಲ್ಲವೆಂದೇ ಅನಿಸುತ್ತದೆ .

# ಅಲಂಕಾರ ಮತ್ತು ಆಧುನಿಕ ಕಾವ್ಯ

ಅಲಂಕಾರಗಳ ಅಧ್ಯಯನದಿಂದ ಪ್ರಾಚೀನ ಕಾವ್ಯಗಳನ್ನು ಅರಿಯಲಿಕ್ಕೂ ಆಸ್ವಾದಿಸಲಿಕ್ಕೂ ನೆರವು ಸಿಗುತ್ತದೆಂಬುದನ್ನು ಹೇಳಬಹುದು. ಆದರೆ ಆಧುನಿಕ ಕಾವ್ಯಗಳಿಗೆ ಸಂಬಂಧಿಸಿದಂತೆ ಅವುಗಳ ಸ್ಥಾನವೇನು? ಆಧುನಿಕ ಕವಿಗಳು ಅಲಂಕಾರಗಳನ್ನು ಬಳಸಿದ್ದಾರೆಯೇ ? ಬಳಸಿದ್ದರೆ ಯಾವ ರೀತಿಯಲ್ಲಿ ಬಳಸಿದ್ದಾರೆ ? ಆಧುನಿಕ ಕಾವ್ಯಮೀಮಾಂಸೆಗೆ ಈ ತಿಳಿವಳಿಕೆಯಿಂದ ಪ್ರಯೋಜನವಿದೆಯೇ ? ಆಧುನಿಕ ಕವಿಗಳಿಗೆ ಈ ತತ್ತ್ವಗಳನ್ನು ತಿಳಿದುಕೊಂಡರೆ ಪ್ರಯೋಜನವಿದೆಯೇ? ಇತ್ಯಾದಿ ಹಲವಾರು ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಅವುಗಳಿಗೆ ದೊರೆಯುವ ಉತ್ತರಗಳು ಅಲಂಕಾರಗಳ ಅಧ್ಯಯನದ ಪ್ರಸ್ತುತತೆಯ ಬಗ್ಗೆ ಹೇಳಿಯಾವು.

ಆಧುನಿಕ ಕನ್ನಡ ಕಾವ್ಯವೆಂದರೆ ನವೋದಯ, ನವ್ಯ ಹಾಗೂ ನವ್ಯೋತ್ತರವೆಂದು ಹೇಳಬಹುದಾದುದು. ಈ ಎಲ್ಲ ಪ್ರಭೇದಗಳಲ್ಲಿಯೂ ಸಮಾನವಾದ ಒಂದು ಅಂಶವೆಂದರೆ ಭಾಷೆಯು ಅನಲಂಕೃತವಾಗಿರಬೇಕೆಂಬುದು. ಅಲಂಕಾರಗಳ ಪ್ರಯೋಗಗಳಿಂದ ಭಾಷೆಯಲ್ಲಿ ಕೃತಕತೆ ತುಂಬುತ್ತದೆಯಾದ್ದರಿಂದ ಅವು ಬೇಡವೆಂಬುದು ಸಾಮಾನ್ಯವಾದ ಧೋರಣೆಯೆಂದರೆ ತಪ್ಪಿಲ್ಲ. ಕವಿಯು ಬಳಸುವ ಭಾಷೆಯು ಆದಷ್ಟು ಜನರ ಮಾತಿಗೆ ಸಮೀಪದಲ್ಲಿಯೇ ಇರಬೇಕು. ಅದರಿಂದ ಜನರನ್ನು ತಲುಪುವುದು ಸುಲಭವಾಗುತ್ತದೆಯೆಂಬುದು ನವೋದಯ ಕಾಲದ ಸಾಮಾನ್ಯ ಧೋರಣೆಯೇ ಆಗಿತ್ತು. ಅಂತೆಯೇ ನವೋದಯ ಕಾವ್ಯವು ಜನಪ್ರಿಯತೆಯನ್ನು ಸಂಪಾದಿಸಿತೆಂಬುದನ್ನೂ ನೆನೆಯಬಹುದು.

ನವ್ಯಕಾವ್ಯವು ಭಾಷೆಯ ವಿಷಯದಲ್ಲಿ ಇನ್ನಷ್ಟು ಉದಾರತೆಯನ್ನು ತೋರಿತು. ಆಡುಭಾಷೆಗೆ ಮತ್ತಷ್ಟು ಹತ್ತಿರವಾಯಿತು. ಆದರೆ ಅದೇ ಸಮಯದಲ್ಲಿ ಸಂಕೇತ, ಪ್ರತೀಕ, ಪ್ರತಿಮೆಗಳನ್ನು ಬಳಸುತ್ತ ಅರ್ಥಗ್ರಹಣವನ್ನು ಕ್ಲಿಷ್ಟವಾಗಿಸಿತು. ಗೇಯತೆಯನ್ನು ಬಿಟ್ಟುಕೊಟ್ಟದ್ದು ಛಂದಸ್ಸನ್ನು ಸ್ವಚ್ಛಂದಗೊಳಿಸಿದ್ದು ಅದನ್ನು ಜನರಿಂದ ಮತ್ತಷ್ಟು ದೂರವಾಗಿಸಿತು. ಕಾವ್ಯವನ್ನು ಅರ್ಥಮಾಡಿಕೊಳ್ಳುವುದಕ್ಕೆ ವ್ಯಾಖ್ಯಾನಕಾರರ ಅಗತ್ಯಬಂತು. ನವ್ಯಕಾವ್ಯವು ವಿಮರ್ಶಕರನ್ನು ಬೆಳೆಸಿತು ಎಂದರೆ ತಪ್ಪಿಲ್ಲ. ಬಹಳಷ್ಟು ಸಲ ಕಾವ್ಯವನ್ನು ಅರ್ಥಮಾಡಿಕೊಳ್ಳುವುದಕ್ಕೂ ಅದರ ಸಾಫಲ್ಯ ವೈಫಲ್ಯಗಳನ್ನು ತಿಳಿಯಲಿಕ್ಕೂ ವಿಮರ್ಶಕರ ಅಭಿಪ್ರಾಯವೇ ಇತರರ ಅಭಿಪ್ರಾಯವಾಯಿತು.

ಈಗ ನವ್ಯಕಾವ್ಯದಯುಗ ಸಮಾಪ್ತವಾಗಿದೆ. ಈ ಕಾಲದ ಕಾವ್ಯದ ಒಟ್ಟಾರೆ ಸ್ವರೂಪವನ್ನು ತಿಳಿಯುವುದಕ್ಕೆ ಕಾಲ ಪಕ್ವವಾಗಿಲ್ಲ. ಒಂದೆಡೆಗೆ ದಲಿತ, ಬಂಡಾಯ ಕಾವ್ಯಗಳಿದ್ದರೆ ಇನ್ನಿತರ ಕಾವ್ಯಮಾರ್ಗಗಳೂ ಇವೆ. ನವೋದಯ, ನವ್ಯಕಾವ್ಯಗಳ ಗುಣಾಂಶಗಳನ್ನು ಒಳಗೊಂಡು ಕಾವ್ಯಮಾರ್ಗ ವಿಸ್ತರಿಸುತ್ತಿದೆ. ಆಧುನಿಕ ಕಾವ್ಯವೆಂದಾಗ ಈ ಕಾಲದ ಕಾವ್ಯವನ್ನೂ ಪರಿಗಣಿಸುವುದು ಅಗತ್ಯವಾಗುತ್ತದೆ. ಈ ಎಲ್ಲ ಪಂಥಗಳಲ್ಲಿಯೂ ಕಾವ್ಯವಿಮರ್ಶೆಯಲ್ಲಿ ಅಲಂಕಾರಗಳ

ಅಪ್ರಸ್ತುತವೆಂದೇ ಗಣಿಸುತ್ತಾರೆ. ಅಲಂಕಾರಗಳನ್ನು ಗುರುತಿಸುವುದಾಗಲಿ, ಅವುಗಳ ಚರ್ಚೆಯನ್ನು ಪ್ರಕಾರಗಳನ್ನು ಹೇಳುವುದಾಗಲಿ ಜಡವಾದ ಪಾಂಡಿತ್ಯದ ಲಕ್ಷಣವೆಂದೇ ತಿಳಿಯಲಾಗುತ್ತದೆ. ಹಾಗಾಗಿ ಅಲಂಕಾರಗಳೆಂದರೆ ಕೇವಲ ಪ್ರಾಚೀನ ಕಾವ್ಯಗಳಿಗೆ ಸಂಬಂಧಿಸಿದವುಗಳೆಂದು ತಿಳಿಯಲಾಗುತ್ತದೆ.

ಕಾಲಪ್ರವಾಹದಲ್ಲಿ ಒಂದು ಸಿದ್ಧಾಂತವು ಮತ್ತೊಂದಕ್ಕೆ ದಾರಿ ಮಾಡಿಕೊಡುವ ಪ್ರಕ್ರಿಯೆ ಸಹಜವಾದುದು. ಆಧುನಿಕ ಕಾವ್ಯ, ಕಾವ್ಯವಿಮರ್ಶೆಗಳು ಪಾಶ್ಚಾತ್ಯ ವಿಚಾರಧಾರೆಯ ಪ್ರಭಾವಕ್ಕೆ ಸಿಲುಕಿದವುಗಳಾದ್ದರಿಂದ ಪ್ರಾಚೀನವಾದ ಮಾನದಂಡದಿಂದ ಅಳೆಯುವುದು ಸಮಂಜಸವಲ್ಲವೆಂಬ ಭಾವನೆಯೂ ಇದೆ. ಕಾವ್ಯಸಿದ್ಧಾಂತಗಳು ಬದಲಾದಾಗ ಅದಕ್ಕೆ ಅನ್ವಯಿಸುವ ಹೊಸಮಾನದಂಡಗಳ ಅಗತ್ಯವಿದೆಯನ್ನುವುದನ್ನು ಅಲ್ಲಗಳೆಯುವಂತಿಲ್ಲ. ಬದಲಾದ ಕಾವ್ಯಸ್ವರೂಪದ ಮೌಲ್ಯಮಾಪನಕ್ಕೆ ಬೇರೊಂದು ವಿಧದ ಮಾನದಂಡವು ಅವಶ್ಯವಾಗುತ್ತದೆ. ಬಟ್ಟೆಯನ್ನಳೆಯುವ ಟೇಪು ಅಕ್ಕಿಯನ್ನಳೆಯಲು ಉಪಯುಕ್ತವಲ್ಲ.

ಅಲಂಕಾರ ಸಿದ್ಧಾಂತಕ್ಕೆ ತನ್ನದೇ ಆದ ಮಿತಿಯೂ ಇದೆ. ನಿರ್ದಿಷ್ಟವಾದ ಪದ್ಯದ ತುಣುಕಿನಲ್ಲಿ ಕಾಣುವ ಅಲಂಕಾರವನ್ನು ಗುರುತಿಸಿದ್ದರಿಂದ ಪ್ರಯೋಜನವೇನು ?

ಉದಾ :

ಮಿದುಳು – ಬಚ್ಚಲ ಹಂಡೆಯಲ್ಲಿ ಬೇಯುವ ಆಮೆ
ಎದ್ದದ್ದು ಬಿದ್ದು ಒದ್ದಾಡುತಿತ್ತು

— ಅಡಿಗ ( ಹಿಮಗಿರಿಯ ಕಂದರ , ಚಂಡೆಮದ್ದಳೆ)

ಈ ಸಾಲುಗಳಲ್ಲಿರುವ ಅಲಂಕಾರವು ಉಪಮೆಯೋ? ರೂಪಕವೋ? ಎಂಬಂಥ ಪ್ರಶ್ನೆಯನ್ನೆತ್ತಿಕೊಂಡು ಸುದೀರ್ಘವಾದ ಚರ್ಚೆಯನ್ನು ನಡೆಸಿದರೆ ಯಾರಿಗೆ ಪ್ರಯೋಜನ? ಪದ್ಯದ ಅರ್ಥಸ್ವಾರಸ್ಯವನ್ನು ಸವಿಯುವುದಕ್ಕೆ ಅದರಿಂದ ಯಾವ ನೆರವೂ ಇಲ್ಲ, ಅದು ಶುಷ್ಕವಾದ ಚರ್ಚೆಯೆ ಆದೀತು. ಅಷ್ಟೇ ಅಲ್ಲ, ಅದು ನಮ್ಮ ಗಮನವನ್ನು ಬೇರೆಡೆಗೆ ಸೆಳೆಯುತ್ತದೆ. ಈ ವಿಧವಾದ ಚರ್ಚೆಗಿಂತಲೂ ಅಲಂಕಾರದಿಂದ ಉಂಟಾಗುವ ಪರಿಣಾಮದ ವ್ಯತ್ಯಾಸದ ಬಗೆಗೆ ಚರ್ಚಿಸಿದರೆ ಉಪಯುಕ್ತವಾಗುತ್ತದೆ. ಪ್ರಾಚೀನ ಆಲಂಕಾರಿಕರು ತಮ್ಮ ಚರ್ಚೆಯನ್ನು ಅಲಂಕಾರವನ್ನು ಗುರುತಿಸುವಲ್ಲಿಗೇ ವಿರಮಿಸಿ , ಉಳಿದುದನ್ನು ನಮ್ಮ ಪಾಲಿಗೇ ಬಿಡುತ್ತಾರೆ. ಹಾಗಿರುವಾಗ ಸೂಕ್ಷ್ಮ ಚರ್ಚೆಯ ಪ್ರಯೋಜನವೇನು? ಯಾರಿಗೆ?

' ಅಲಂಕಾರಗಳ ಮಹತ್ವದ ಉಪಯೋಗವೆಂದರೆ ಕಾವ್ಯ ತನ್ನ ತಂತ್ರವನ್ನು ಹುಟ್ಟಿಸಿಕೊಳ್ಳಲು ನೆರವಾಗುವುದು ' ಎನ್ನುತ್ತಾರೆ ಕೀರ್ತಿನಾಥ ಕುರ್ತಕೋಟಿಯವರು (ಸಾಹಿತ್ಯ ಮತ್ತು ಸಾಹಿತ್ಯ ಪ್ರಜ್ಞೆ ಪು. ೬೮ ). ಅದು ಮಹತ್ವದ ಮಾತು. ಅಲಂಕಾರತತ್ವಗಳ ಅರಿವಿದ್ದ ಕವಿಗೆ ಅವು ಸಕಾಲದಲ್ಲಿ ನೆರವನ್ನು ನೀಡುತ್ತವೆ. ಅವನು ಅವುಗಳನ್ನು ಸಮರ್ಥವಾಗಿ ದುಡಿಸಿಕೊಳ್ಳಬಲ್ಲ. ಬರೆಯುವಾಗ ಗಮನಿಸದಿದ್ದರೂ ಬರೆದುದನ್ನು ತಿದ್ದುವಾಗ ಅವನು ಪ್ರಜ್ಞಾಪೂರ್ವಕವಾಗಿಯೇ

**ಅವುಗಳ** ನೆರವನ್ನು ಪಡೆಯಬಲ್ಲ. ಇಚ್ಛಿತವಾದ ಪರಿಣಾಮವನ್ನು **ಹೆಚ್ಚಿಸುವಲ್ಲಿ** - ಉಕ್ತಿಸೌಂದರ್ಯವನ್ನು ಹೆಚ್ಚಿಸುವಲ್ಲಿ ಅವುಗಳಿಂದ ದೊರೆಯುವ ನೆರವು ಅಪಾರ. ಈಚೆಗಿನ ಸಾಹಿತ್ಯ ವಿಮರ್ಶೆಯಲ್ಲಿ ಬಳಕೆಯಲ್ಲಿರುವ ಕಾವ್ಯಪ್ರತಿಮೆಗಳು ಅಲಂಕಾರಗಳ ಮುಂದುವರಿದ ರೂಪಗಳೇ ಆಗಿವೆಯೆಂಬುದನ್ನು ಗಮನಿಸಬಹುದು.

ಉದಾ: –

> ವೇದ, **ಶಾಸ್ತ್ರ, ಪುರಾಣ, ಭಜನೆ, ಹರಿಕಥೆ – ಪೂಜೆ**
> ಎಣ್ಣೆ **ತೀರುತ್ತಲಿರೆ ಒಡಕು ಹಣತೆಯ ಮುರಿದೆ ಬತ್ತಿ ಹೊಸೆತ**
>
> —— ಅಡಿಗ ( ಭೂಮಿಗೀತ)

ವೇದ – ಶಾಸ್ತ್ರಾದಿಗಳ ವ್ಯರ್ಥತೆಯನ್ನು ಪ್ರತಿಪಾದಿಸುವ ಈ ಪ್ರತಿಮೆ ತನ್ಮೂಲಕವಾಗಿ ಬದುಕಿನ ನಿರರ್ಥಕತೆಯನ್ನು ಧ್ವನಿಸುತ್ತದೆ. ಅಲಂಕಾರ ದೃಷ್ಟಿಯಿಂದ ಇದನ್ನು ನಿದರ್ಶನವೆಂದು ಹೇಳಬಹುದು. ಪರಸ್ಪರ ಸಂಬಂಧವಿಲ್ಲದ ವಸ್ತುಗಳನ್ನು ಸೇರಿಸಿ ಉಪಮೆಯಲ್ಲಿ ಪರ್ಯವಸಾನಗೊಳ್ಳುವಂತೆಸಗುವುದು ಇದರ ಸ್ವರೂಪ. ( **ಅಭವನ್ ವಸ್ತುಸಂಬಂಧ ಉಪಮಾ ಪರಿಕಲ್ಪಕಃ – ಕಾವ್ಯಪ್ರಕಾಶ** ) ಅಲ್ಲಿನ ಎರಡು ವಸ್ತುಗಳಲ್ಲಿರುವುದು ಬಾಹ್ಯ ಸಂಬಂಧವಲ್ಲ; ಆಂತರಿಕ ಸಂಬಂಧ. ಅಂದರೆ ಅದನ್ನೇ ಕುರಿತು ಆಲೋಚಿಸಿದಾಗ ಅವುಗಳ ನಡುವಣ ಔಪಮಿಕ ಸಂಬಂಧವು ವ್ಯಕ್ತವಾಗುತ್ತದೆ . ಕಾವ್ಯಪ್ರಕಾಶಕಾರನೇ ಕೊಡುವ ಉದಾಹರಣೆಯನ್ನು ನೋಡಿ –

> **ಕ್ವಸೂರ್ಯಪ್ರಭವೋವಂಶಃ ಕ್ವಚಾಲ್ಪ ವಿಷಯಾಮತಿ :।**
> **ತಿತೀರ್ಷುರ್ದುಸ್ತರಂ ಮೋಹಾದುಡುಪೇನಾಸ್ಮಿ ಸಾಗರಮ್** ॥

( ಸೂರ್ಯನಿಂದ ಸಂಜನಿಸಿದ ಆ ವಂಶವೆಲ್ಲಿ? ಅಲ್ಪ ಗ್ರಾಹಿಯಾದ ನನ್ನ ಮತಿಯೆಲ್ಲಿ? ದಾಟಲಾಗದ ಕಡಲನ್ನು ಮೋಹವಶನಾಗಿ ತೆಪ್ಪದಿಂದ ದಾಟ ಹೊರಟಿದ್ದೇನೆ. ) ಇಲ್ಲಿ ಔಪಮಿಕ ಸಂಬಂಧವಿದೆ. ಆದರೆ ಅಲ್ಲಿಗೆ ನಿಲ್ಲುವುದಿಲ್ಲ . ಅದು ಅರ್ಥಾಂತರಗಳನ್ನು ಹುಟ್ಟಿಸುತ್ತಾ ಹೋಗಬಲ್ಲದು. ಅಂತೆಯೇ ಅಡಿಗರ ಮೇಲ್ಕಾಣಿಸಿದ ಪದ್ಯದ ತುಣುಕಿನಲ್ಲಿಯೂ ಔಪಮಿಕ ಸಂಬಂಧವನ್ನು ಹೇಳಬಹುದು.

ಉಪಮೆ, ರೂಪಕ, ನಿದರ್ಶನಾ, ಅಪ್ರಸ್ತುತಪ್ರಶಂಸೆ ಮುಂತಾದ ಅಲಂಕಾರಗಳು ಪ್ರತಿಮೆಯಾಗುವ ಸಾಧ್ಯತೆಗಳು ಇದ್ದೇ ಇದೆ . ನುಡಿಚಿತ್ರಗಳಾದ ಅಲಂಕಾರಗಳಿಗೂ ಪ್ರತಿಮೆಗಳಿಗೂ ಭೇದವನ್ನು ಗುರುತಿಸುವುದು ಸುಲಭವಲ್ಲ. ಅಂದರೆ ಮೇಲ್ನೋಟಕ್ಕೆ ಅವುಗಳಲ್ಲಿ ವ್ಯತ್ಯಾಸವಿಲ್ಲ. ವ್ಯತ್ಯಾಸವಿರುವುದು ಆಂತರಂಗಿಕವಾಗಿ. ಅಲಂಕಾರವೊಂದು ಧ್ವನಿಶಕ್ತಿಯಿಂದ ದೀಪ್ತವಾಗಿದ್ದರೆ, ಅರ್ಥಪರಂಪರೆಗಳನ್ನು ಹುಟ್ಟಿಸಲು ಶಕ್ತವಾಗಿದ್ದರೆ ಅದು ಪ್ರತಿಮೆ –ಯೆನಿಸಿಕೊಳ್ಳುತ್ತದೆ. ಕೇವಲ ಚಮತ್ಕಾರವನ್ನು ಹುಟ್ಟಿಸುವುದರಲ್ಲಿಯೇ ನಿರತವಾಗಿ ಮನಸ್ಸಿನ ಮೇಲ್ಪದರವನ್ನಷ್ಟೇ ಮುಟ್ಟಿದರೆ ಅಲಂಕಾರವಾಗುತ್ತದೆ . ಆದರೆ ಅವುಗಳ ಮೂಲತತ್ತ್ವವು

ಒಂದೇ ಆಗಿದೆ. ಪ್ರಾಚೀನ ದೃಷ್ಟಿಯಿಂದ ಹೇಳುವುದಾದರೆ ಪ್ರತಿಮೆಗಳು ಅಲಂಕಾರಗಳೇ ಆಗಿವೆ. ವ್ಯತ್ಯಾಸವಿರುವುದು ಪದದಲ್ಲಿ ಮಾತ್ರ.

ಆಧುನಿಕ ಸಂದರ್ಭದಲ್ಲಿ ಅಲಂಕಾರಗಳ ಬಗೆಗೆ ಹಿಂದಿನ ಆಲಂಕಾರಿಕರು ನೀಡ್ದು ಬಾಹ್ಯವಾದ ವಿವರಗಳಿಗಿಂತಲೂ ಅಲಂಕಾರವೊಂದರ ಹಿನ್ನೆಲೆಯಲ್ಲಿರುವ ತತ್ತ್ವವು ಮುಖ್ಯವಾದುದು. ಅತಿಶಯೋಕ್ತಿಯನ್ನೇ ನೋಡಿ. ಇಲ್ಲಿ ಪ್ರಧಾನವಾದುದು ಅಧ್ಯವಸಾಯ. ಅಂದರೆ ಉಪಮೇಯ ಉಪಮಾನಗಳಲ್ಲಿರುವ ಅಭೇದಾರೋಪವು ನಿಶ್ಚಯರೂಪದ್ದಾಗಿ ಉಪಮಾನವು ಉಪಮೇಯವನ್ನು ತನ್ನೊಳಗೇ ಅಡಗಿಸಿಕೊಂಡು ಬಿಡುತ್ತದೆ "ಆಹಾ! ಕಮಲದಲ್ಲಿ ಕಮಲಗಳು ಹುಟ್ಟಿವೆ!" ಎನ್ನುವಂಥಲ್ಲಿ ಕೇವಲ ಮಾತಿನ ಚಮತ್ಕಾರಕ್ಕಾಗಿ ಬಂದರೆ 'ಕಲ್ಲಾಗು! ಕಲ್ಲಾಗು! ಬಾಳ ಬಿರುಗಾಳಿಯಲಿ ಅಲ್ಲಾಡದೆಯೇ ನಿಲ್ಲು ಜೀವ !" ಎಂಬಲ್ಲಿ ಅದು ಸಂಕೇತವಾಗುತ್ತದೆ. ಕಲ್ಲು ಕಾಠಿಣ್ಯದ ಸಂಕೇತವಾಗಿದೆಯೆಂಬುದನ್ನು ಗಮನಿಸಬೇಕು "ಕ ಕಲ್ಲಿನಂತೆ ಕಾಠಿಣ್ಯವುಳ್ಳವನಾಗು " ಎಂಬುದು ಅಭೀಪ್ಸಿತವಾದ ಅರ್ಥ. ಅಲ್ಲಿರುವುದು ಅಧ್ಯವಸಾಯ. ಸಂಕೇತ ಪ್ರತೀಕಗಳ ಹಿನ್ನೆಲೆಯಲ್ಲಿರುವುದು ಅಧ್ಯವಸಾಯವೆಂಬುದನ್ನು ಗಮನಿಸಬೇಕು. ಇಂಥಲ್ಲೆಲ್ಲಾ ಇರುವುದು ಅತಿಶಯೋಕ್ತಿ.

ಅನೇಕ ಅಲಂಕಾರಗಳ ಹಿನ್ನೆಲೆಯಲ್ಲಿರುವ ಈ ತತ್ತ್ವಗಳು ಮಹತ್ವದವುಗಳಾಗಿವೆ. ಅವುಗಳನ್ನು ಯಥೋಚಿತವಾಗಿ ಬಳಸಿಕೊಂಡು ತಂತ್ರವೈವಿಧ್ಯವನ್ನು ಕಂಡುಕೊಳ್ಳುವದು ಕವಿಪ್ರತಿಭೆಗೆ ಸೇರಿದ್ದು. ಕವಿಪ್ರತಿಭೆಯ ದರ್ಜೆಗೆತಕ್ಕಂತೆ ಅಲಂಕಾರಗಳು ನಿರ್ಮಾಣಗೊಳ್ಳುತ್ತವೆ. ಅವು ಕೃತಕಗಳೆನಿಸುವುದು ಮೂಲಕ್ಕೆ ಅವುಗಳನ್ನು ಹೊರುವ ಶಕ್ತಿಯಿಲ್ಲದಾದಾಗ ; ಅಲಂಕಾರಗಳ ಭಾರ ಹೆಚ್ಚಿದಾಗ ಆಧುನಿಕ ಕಾವ್ಯದಲ್ಲಿಯೂ ಈ ಅಲಂಕಾರ ತತ್ತ್ವಗಳು ಅಲ್ಲಲ್ಲಿ ಆವಿರ್ಭವಿಸಿವೆ. ಈ ಪುಸ್ತಕದಲ್ಲಿ ಅಂಥ ಉದಾಹರಣೆಗಳನ್ನು ಕಾಣಬಹುದು. ಅವು ಅವತರಿಸಿದ ರೀತಿಯನ್ನು ಕುರಿತು ಕೆಲವು ಸಂಗತಿಗಳನ್ನು ಇಲ್ಲಿ ಗಮನಿಸಬಹುದು.

ಉದಾ:–

ಅಂಥಿಂಥ ಹೆಣ್ಣು ನೀನಲ್ಲ.
ನಿನ್ನಂಥ ಹೆಣ್ಣು ಇನ್ನಿಲ್ಲ.

— ಕೆ.ಎಸ್.ನರಸಿಂಹಸ್ವಾಮಿ

ಈ ಸರಳವಾದ ನುಡಿಗಳಲ್ಲಿ ಹುದುಗಿರುವ ಅಲಂಕಾರವು ಅನನ್ವಯ. ಇದರ ಮುಖ್ಯವಾದ ತತ್ತ್ವವೆಂದರೆ 'ದ್ವಿತೀಯ ಸದೃಶ ವ್ಯವಚ್ಛೇದ' ಅಂದರೆ ಸಮಾನವಾದ ಮತ್ತೊಂದು ವಸ್ತು ಇಲ್ಲವೆಂಬುದನ್ನು ನಿರೂಪಿಸುವುದು. ಅದು ವ್ಯೈತಾಳುವ ರೂಪವೆಂದರೆ ಉಪಮಾನ–ಉಪಮೇಯಗಳೆರಡೂ ಒಂದೇ ಆಗಿರುವುದು. ಮೇಲ್ಕಾಣಿಸಿದ ಸಾಲುಗಳಲ್ಲಿ "ನಿನ್ನಂಥ ಹೆಣ್ಣು ನೀನೇ " ಎಂದಿದ್ದರೆ ಪ್ರಾಚೀನರು ವರ್ಣಿಸುವ ಎಲ್ಲ ಲಕ್ಷಣಗಳೂ ಇರುವ ಅನನ್ವಯವಾಗುತ್ತಿತ್ತು. ಆದರೆ ಅದೇ ಸಮಯದಲ್ಲಿ ಒಂದು ತೆರನಾದ ಕೃತಕತೆಯು ಹಣಿಕಿಕ್ಕಬಹುದಿತ್ತು ಹಾಗಾಗಿ ಇಲ್ಲಿ ಸ್ವಲ್ಪ ಮಾರ್ಪಾಟಿದೆ. ಹಾಗಿದ್ದರೂ ಇದು ಅನನ್ವಯವೇ

ಆಗುತ್ತದೆ. ಇನ್ನೊಂದು ಉದಾ :–

**ತುಟಿ ದಡಕ್ಕಂಟಿ ಮೊಲೆಬಳಿ ಲಂಗರಿಟ್ಟಾಡಿ ಹೊಕ್ಕುಳಿನ ಸುಳಿಯಲ್ಲಿ ಹೊಕ್ಕು ಜಾರಿ**
**ಸೊಂಟ ಸುಂಟರಗಾಳಿಯಲ್ಲಿ ಗಿರಗಿರ ಬುಗುರಿ : ತೊಡೆ ಬಂಡೆಗಪ್ಪಳಿಸಿ ಭಗ್ನ ನೌಕೆ.**

— ಅಡಿಗ.

ಈ ಸಾಲುಗಳಲ್ಲಿ ಪ್ರಸಿದ್ಧವಾದ ರೂಪಕಾಲಂಕಾರವಿದೆ. ಇನ್ನಿತರ ಅಲಂಕಾರಗಳೂ ಇವೆ. ಅವುಗಳಲ್ಲಿ ಗಮನ ಸೆಳೆಯುವಂಥದು ಪರ್ಯಾಯವೆಂಬ ಅಷ್ಟೇನೂ ಪ್ರಸಿದ್ಧವಲ್ಲದ ಅಲಂಕಾರ. ಒಂದೇ ವಸ್ತುವು ಪರ್ಯಾಯವಾಗಿ ಬೇರೆ ಬೇರೆ ಆಶ್ರಯಗಳಲ್ಲಿದೆ ಎಂಬುದನ್ನು ವರ್ಣಿಸುವುದು ಪರ್ಯಾಯದ ಒಂದು ಭೇದ. ಇದನ್ನು ಕವಿ ಅತ್ಯಂತ ಸಮರ್ಥವಾಗಿ ಬಳಸಿಕೊಂಡಿದ್ದಾನೆ. ಭಗ್ನವಾಗುವ ಮುನ್ನ ನೌಕೆಯು ಆಶ್ರಯಿಸುವ ಬೇರೆ ಬೇರೆ ಸ್ಥಳಗಳ ರಮ್ಯವಾದ ನಿರೂಪಣೆಯಿದೆ. " ನೌಕೆ " ಎಂಬಲ್ಲಿ ಅಧ್ಯವಸಾಯವಿದೆ. ಅದು ವ್ಯಕ್ತಿಯ ಪ್ರತೀಕವಾಗುತ್ತದೆ. ಅಲ್ಲಿಗೆ ಅತಿಶಯೋಕ್ತಿಯಾಯಿತು. ಇಡೀ ಸಂದರ್ಭವನ್ನು ಪರಿಗಣಿಸಿದರೆ ನೌಕೆಯ ವೃತ್ತಾಂತವು ಅಪ್ರಸ್ತುತವಾಗಿದೆ. ಅದರ ಮೂಲಕ ಪ್ರಸ್ತುತವಾದ ವ್ಯಕ್ತಿಯ ಬದುಕನ್ನು ಸೂಚಿಸುತ್ತಾನಾದ್ದರಿಂದ ಅಪ್ರಸ್ತುತ ಪ್ರಶಂಸೆಯೂ ಹೌದು. ಇವೆಲ್ಲಾ ಸೇರಿ ನಿರ್ಮಿಸುವ ನೌಕೆಯ ಪ್ರತಿಮೆ ಕಣ್ಣಿಗೆ ಕಟ್ಟುವಂತಾಗುತ್ತದೆ.

ಇವೆಲ್ಲ ಅಲಂಕಾರಗಳನ್ನು ಇಲ್ಲಿ ಸೇರಿಸಬೇಕೆಂಬ ಪೂರ್ವ ಸಂಕಲ್ಪದಿಂದ ಇದು ಹುಟ್ಟಿದ್ದಲ್ಲ. ಕಾವ್ಯದ ಓಘದಲ್ಲಿ ತಾನಾಗಿ ಅವತರಿಸಿದ್ದು ಎಂಬುದು ನಿಜ. ಆದರೆ ಈ ತೆರನ ಸೇರ್ಪಡೆಗೆ ಪ್ರಾಚೀನ ಕಾವ್ಯ ಪರಂಪರೆಯ ಸಾರಸತ್ವವನ್ನು ಮೈಗೂಡಿಸಿಕೊಂಡವರೇ ಬೇಕಾಗುತ್ತದೆ. ಅಡಿಗರು ಈ ಸಾಲುಗಳನ್ನು ಬರೆಯಲು ಶಕ್ತರಾದದ್ದು ಅವರಿಗಿರುವ ವ್ಯಾಪಕವಾದ ಹಿನ್ನೆಲೆಯ ಕಾರಣದಿಂದ ಎಂಬುದನ್ನೂ ಗಮನಿಸಬಹುದು. ಇನ್ನೊಂದು ಉದಾಹರಣೆ :–

**ಕೊಡುವುದೇನು? ಕೊಂಬುದೇನು**
**ಒಲವು , ಸ್ನೇಹ, ಪ್ರೇಮ.**

— ದ. ರಾ. ಬೇಂದ್ರೆ.

ಈ ಸಾಲುಗಳಲ್ಲಿ ಪ್ರಸ್ತಾಪಿಸಿರುವುದು ವಿನಿಮಯದ ವ್ಯವಹಾರವನ್ನು . ಒಂದು ವಸ್ತುವನ್ನು ಕೊಟ್ಟು ಇನ್ನೊಂದು ವಸ್ತುವನ್ನು ಪಡೆವ ವ್ಯವಹಾರ ಅದು. ಇಲ್ಲಿ ನಿಜವಾಗಿ ಕೊಡುವ ವಸ್ತುವಿನಲ್ಲಾಗಲೀ ಕೊಳ್ಳುವ ವಸ್ತುವಿನಲ್ಲಾಗಲೀ ಭೇದವಿಲ್ಲ . ಆದರೆ ಪದಭೇದದಿಂದ ವಸ್ತುಭೇದದ ಕಲ್ಪನೆಯಿದೆ. ಒಲವನ್ನು ಕೊಟ್ಟು ಸ್ನೇಹವನ್ನು ಪಡೆಯುವುದು, ಒಲವು ಸ್ನೇಹಗಳನ್ನು ಕೊಟ್ಟು ಪ್ರೇಮವನ್ನು ಪಡೆಯುವುದು. ಇಂಥಲ್ಲಿರುವುದು ವಿನಿಮಯ ತತ್ವವನ್ನಾಧರಿಸಿದ ಪರಿವೃತ್ತಿಯೆಂಬ ಅಲಂಕಾರ .

ಕವನವೊಂದರ ಬಿಡಿಬಿಡಿಯಾದ ಸಾಲುಗಳಲ್ಲಿ ಮಾತ್ರ ಅಲಂಕಾರವಿರುತ್ತದೆಯೆಂದು ತಿಳಿಯಬಾರದು. ಇಡೀ ಕವನವೇ ಒಂದು ಅಲಂಕಾರವಾಗುವದನ್ನೂ ಕಾಣಬಹುದು.

 "ಮರಳಿ ಬಂದ ಕವಿತೆ " ಯಲ್ಲಿ ಅನೇಕ ಕವನಗಳು ಉದಾಹರಣೆಗೆ ವಿ. ಜಿ. ಭಟ್ಟರ "ನನ್ನ ಅವತಾರ " ವೆಂಬ ಕವನವು ವಿಶೇಷೋಕ್ತಿಯಾಗಿವೆ. ದೃಷ್ಟಾಂತವಾಗಿವೆ. ಅಡಿಗರ "ಒಂದು ಸಂಜೆ " ಎಂಬ ಇಡೀ ಕವನವು ಸಮಾಸೋಕ್ತಿಯಾಗಿರುವುದನ್ನು ಅವರದೇ ಕಾಣಬಹುದು. ಆಧುನಿಕ ಕವಿತೆಗಳಲ್ಲಿ ಈ ತೆರನಾಗಿರುವ ಅನೇಕ ಉದಾಹರಣೆಗಳಿವೆ.

ಈಚೆಗೆ ಜನಪ್ರಿಯವಾಗುತ್ತಿರುವ ಹನಿಗವನಗಳು ಉಕ್ತಿಚಮತ್ಕಾರವನ್ನು ವಿಶೇಷವಾಗಿ ಆಶ್ರಯಿಸಿವೆ. ಅವು ಕಚಗುಳಿಯನ್ನಿಟ್ಟು ತೃಪ್ತವಾಗುತ್ತವೆ. ಅಲಂಕಾರ ತತ್ತ್ವಗಳನ್ನು ಅರಗಿಸಿಕೊಂಡರೆ ಹನಿಗವನಗಳು ಇನ್ನಷ್ಟು ವೈವಿಧ್ಯಪೂರ್ಣವಾಗಿರಲು ಸಾಧ್ಯವೆನಿಸುತ್ತದೆ.

ಉದಾ:-

ಹೂವೇ ನಿನ್ನ ಸುತ್ತಲು
ದುಂಬಿಗಳು ಹಾತೊರೆಯುತಿವೆ ಮುತ್ತಲು
ಯಾರಿಗೆ ಸೇರುವುದೋ ಏನೋ
ಮಕರಂದ ಬತ್ತಲು .

— ಅಲ್ಲಮಪ್ರಭು ಬೆಟದೂರ.

ಇಲ್ಲಿ ಅಪ್ರಸ್ತುತ ಪ್ರಶಂಸೆಯಿದೆ. ಇಂಥ ಕವನಗಳಲ್ಲಿ ಥಟ್ಟನೇ ಸೆಳೆಯುವ ಗುಣವಿದೆ. ಶಕ್ತಿಶಾಲಿಯಾದ ಕವಿಯು ಕೆಲವೇ ಸಾಲುಗಳಲ್ಲಿ ಹೇಳಬೇಕಾದುದನ್ನು ಹೇಳಬಲ್ಲ. ಇಂಥಲ್ಲಿ ಅಲಂಕಾರಗಳ ಬಳಕೆಯು ಮತ್ತಿಷ್ಟು ಸೊಗಸನ್ನು ತರುತ್ತದೆ.

ಅಲಂಕಾರ ತತ್ತ್ವಗಳು ಪ್ರಾಚೀನ ಕಾಲದವುಗಳಾದ್ದರಿಂದ ಈ ಕಾಲದಲ್ಲಿ ಅವುಗಳು ನಿರುಪಯುಕ್ತವೆಂಬ ವಾದವು ಹುರುಳಿಲ್ಲದ್ದು. ಕೇವಲ ಅಲಂಕಾರಗಳಾಗಲಿ ಕಾವ್ಯಪ್ರತಿಮೆಗಳಾಗಲಿ ಕಾವ್ಯದ ಸರ್ವಸ್ವವೆಂದು ಹೇಳುವುದೂ ಸರಿಯಲ್ಲ. ಆದರೆ ಕಾವ್ಯದಲ್ಲಿ ಅವುಗಳಿಗೂ ಒಂದು ಸ್ಥಾನ ಇದ್ದೇ ಇದೆ. ಅಲಂಕಾರ ತತ್ತ್ವವನ್ನು ಗಂಭೀರವಾದ ಉದ್ದೇಶಕ್ಕೂ, ಕೇವಲ ಚಮತ್ಕಾರವನ್ನುಂಟು ಮಾಡುವ ಲಘುವಾದ ಉದ್ದೇಶಕ್ಕೂ ಬಳಸಬಹುದಾಗಿದೆ. ಆಧುನಿಕ ಕವಿಗಳೂ ಅವುಗಳನ್ನು ಬಳಸುತ್ತಿದ್ದಾರೆ. ಕಾವ್ಯದ ಸಂಕೀರ್ಣವಾದ ಪ್ರಕ್ರಿಯೆಯನ್ನು ಅರ್ಥಮಾಡಿಕೊಳ್ಳಲು ಅಲಂಕಾರಗಳ ಅಧ್ಯಯನವೂ ಅವಶ್ಯವೆಂದು ಹೇಳಬಹುದು.

ಇನ್ನು ಈ ಗ್ರಂಥದಲ್ಲಿ ಅಲಂಕಾರಗಳಿಗೆ ಉದಾಹರಣೆಗಳನ್ನು ಕೊಡುವಾಗ ಪ್ರಾಚೀನ ಪಂಡಿತರು ನಿರೀಕ್ಷಿಸುವ ನಿಖರತೆಯ ನಿಯಮವನ್ನು ಪಾಲಿಸಿಲ್ಲ. ಮೊದಲು ವಿವರಿಸಿದ ಅಲಂಕಾರ ತತ್ತ್ವವನ್ನು ನಿರ್ದೇಶಿಸಲು ಸಾಕಾಗುವಂಥ ಉದಾಹರಣೆಗಳನ್ನು ಕೊಟ್ಟಿದೆ. ಅಂತೆಯೇ ಒಂದೇ ಪದ್ಯದಲ್ಲಿ ಅನೇಕ ಅಲಂಕಾರಗಳಿರುವ ಪ್ರಸಂಗಗಳೂ ಉಂಟು. ಕಾವ್ಯಗಳಿಂದ ಉದಾಹರಣೆಗಳನ್ನು ಆಯ್ದುಕೊಡುವಾಗ ಅದು ಸಹಜ . ಪ್ರಸಿದ್ಧ ಲಾಕ್ಷಣಿಕರು ಕೊಡುವ ಉದಾಹರಣೆಗಳಲ್ಲಿಯೂ ಈ ತೆರನಾದ ಲೋಪಗಳಾಗುವುದುಂಟು. ಅಂಥ ಸಂದರ್ಭದಲ್ಲಿ ನಿರ್ದೇಶಿತ ತತ್ತ್ವದ ಅಸ್ತಿತ್ವವನ್ನು ಗುರುತಿಸುವುದು ಮಾತ್ರ ಮುಖ್ಯವಾಗುತ್ತದೆ. ಪ್ರಾಚೀನ

ಲಾಕ್ಷಣಿಕರು ಹೇಳುವ ಸ್ವರೂಪದಲ್ಲಿರದ, ಆದರೆ ಅಲಂಕಾರದ ಪ್ರಮುಖವಾದ ತತ್ವವು ಮಾತ್ರ ವ್ಯಕ್ತವಾಗುವ ಉದಾಹರಣೆಗಳೂ ಉಂಟು. ಇಲ್ಲಿ ತತ್ವಗಳ ನಿರ್ದೇಶನವೇ ಪ್ರಮುಖವೆಂದು ಪರಿಗಣಿಸಿದ್ದರಿಂದ ಹಾಗೆ ಮಾಡಲಾಗಿದೆಯಷ್ಟೇ!.

# ಶಬ್ದಾಲಂಕಾರಗಳು

## ೧. ಅನುಪ್ರಾಸ

**ಲಕ್ಷಣ :–** ವರ್ಣ ಸಾಮ್ಯವು ಅನುಪ್ರಾಸ. ( ವರ್ಣ ಸಾಮ್ಯಮನುಪ್ರಾಸಃ –ಮಮ್ಮಟ )

ವರ್ಣಗಳ ಪುನರಾವೃತ್ತಿಯನ್ನು ಅನುಪ್ರಾಸವೆಂದು ಕರೆಯುತ್ತಾರೆ. ಈ ವರ್ಣಗಳ ಪುನರಾವೃತ್ತಿಯು ಕಿವಿಗೆ ಹಿತವಾದ ಅನುಭವವನ್ನುಂಟು ಮಾಡುತ್ತದೆ. ಅಷ್ಟೇ ಆದರೆ ಸಾಲದು. ಅವು ರಸಾನುಗುಣವಾಗಿಯೂ ಇರಬೇಕೆಂದು ಆಲಂಕಾರಿಕರು ವಿಧಿಸುತ್ತಾರೆ. ಶೃಂಗಾರವೋ, ವೀರವೋ, ಕರುಣವೋ ವರ್ಣಗಳ ಹವಣರಿತ ಪುನರಾವರ್ತನೆಯಿಂದ ಪುಷ್ಟಿಯನ್ನು ಪಡೆಯುವುದೆಂದು ಅವರ ಭಾವನೆ. ಕಾವ್ಯವು ಒಳಗೂ ಹೊರಗೂ ಚೆಲುವಾಗಿರಬೇಕೆಂಬ ನಿಲುಮೆಗನುಗುಣವಾಗಿದೆ ಈ ಅಭಿಪ್ರಾಯ. ಅನುಪ್ರಾಸವೇ ಮೊದಲಾದ ಶಬ್ದಾಲಂಕಾರಗಳು ಕಾವ್ಯದ ಶರೀರವೆನಿಸಿದ ಶಬ್ದಗಳಿಗೆ ಸೇರಿದವು. ಹಾಗಾಗಿ ಅವುಗಳಿಗೂ ಸ್ಥಾನವಿದೆ.

ಅನುಪ್ರಾಸವನ್ನು, ವರ್ಣಾನುಪ್ರಾಸ ಮತ್ತು ಶಬ್ದಾನುಪ್ರಾಸವೆಂದು ಎರಡು ವಿಧವಾಗಿ ವಿಂಗಡಿಸುವುದುಂಟು. ವರ್ಣಾನುಪ್ರಾಸದಲ್ಲಿ ಕೇವಲ ವರ್ಣಗಳ ಪುನರಾವೃತ್ತಿಯಿರುತ್ತದೆಯಾದರೆ ಶಬ್ದಾನುಪ್ರಾಸದಲ್ಲಿ ಪದಗಳ ಪುನರಾವೃತ್ತಿಯಿರುತ್ತದೆ. ಶಬ್ದಾನುಪ್ರಾಸವನ್ನೇ ಕೆಲವರು ಲಾಟಾನುಪ್ರಾಸವೆಂದು ಕರೆಯುತ್ತಾರೆ. ವರ್ಣಾನುಪ್ರಾಸದಲ್ಲಿ ಶ್ರುತ್ಯನುಪ್ರಾಸ, ವೃತ್ತ್ಯನುಪ್ರಾಸ, ಛೇಕಾನುಪ್ರಾಸ, ಹೀಗೆ ಹಲವಾರು ಭೇದಗಳನ್ನು ಹೇಳುವುದುಂಟು. ಅವುಗಳಲ್ಲಿ ಶ್ರುತ್ಯನುಪ್ರಾಸವು ಥಟ್ಟನೇ ಗಮನ ಸೆಳೆಯುವಂಥದಲ್ಲ. ವರ್ಣೋತ್ಪತ್ತಿ ಸ್ಥಾನಗಳನ್ನು ಗಮನಿಸಿ ಕಂಠ್ಯ, ತಾಲವ್ಯ, ಓಷ್ಠ್ಯ , ಮುಂತಾದ ವರ್ಣಗಳ ಪುನರಾವರ್ತನೆ ಮಾಡಿದರೆ ಅದು ಶ್ರುತ್ಯನುಪ್ರಾಸವೆನಿಸುತ್ತದೆ. ಕ, ಹ, ಜ, ಯ, ಮುಂತಾದ ಸವರ್ಣಗಳ ಪ್ರಯೋಗದಿಂದ ಇದನ್ನು ಸಾಧಿಸಲಾಗುತ್ತದೆ. ಶ್ರುತ್ಯನುಪ್ರಾಸವು ಹಿನ್ನೆಲೆಯಲ್ಲಿರುವುದೇ ಹೆಚ್ಚು. ಆ ಕುರಿತು ಚಿಂತಿಸಿದಾಗ ಮಾತ್ರ ಗೋಚರಿಸುವಂಥದು. ರಸಪೋಷಣೆಗೆ ಅತ್ಯಂತ ಹೆಚ್ಚಿನ ಸಹಕಾರವೊದಗುವುದು ಅದರಿಂದ.

### ವೃತ್ತ್ಯನುಪ್ರಾಸ :–

ವೃತ್ತಿಯನ್ನು ಆಧರಿಸಿದ ಒಂದು ಅಥವಾ ಹಲವು ವರ್ಣಗಳ ಪುನರುಕ್ತಿಯು ವೃತ್ತ್ಯನುಪ್ರಾಸವೆನಿಸಿಕೊಳ್ಳುತ್ತದೆ. ವೃತ್ತಿಯೆಂಬ ಹೆಸರು ಅಲಂಕಾರ ಶಾಸ್ತ್ರದ ಪಾರಿಭಾಷಿಕ ಪದ.

ರಸಾನುಕೂಲವಾದ ವರ್ಣವಿನ್ಯಾಸವನ್ನು ವೃತ್ತಿಯೆಂದು ಕರೆಯುತ್ತಾರೆ. ಅಂಥ ವೃತ್ತಿಗಳು ಮೂರು. ಉಪನಾಗರಿಕಾ, ಪರುಷಾ, ಹಾಗೂ ಕೋಮಲಾ. ಈ ವೃತ್ತಿಗಳು ಮೂರು ಪ್ರಧಾನವಾದ ರಸಗಳಿಗೆ ಸಂಬಂಧಿಸಿವೆ. ಶೃಂಗಾರದಲ್ಲಿ ಉಪನಾಗರಿಕಾ, ವೀರದಲ್ಲಿ ಪರುಷಾ, ಹಾಗೂ ಶಾಂತರಸಕ್ಕೆ ಕೋಮಲಾವೃತ್ತಿಗಳು ಅನುಕೂಲಕರವಾದವುಗಳು. ಈ ವೃತ್ತಿಗಳು ವರ್ಣಗಳನ್ನು ಆಶ್ರಯಿಸಿವೆ. ಮೃದುವರ್ಣ, ಕರ್ಕಶವರ್ಣ, ಕೋಮಲವರ್ಣ, ಇತ್ಯಾದಿಯಾಗಿ ವರ್ಣಗಳಲ್ಲಿ ವಿಭಾಗವಿದೆ. ಅವುಗಳನ್ನು ಆಧರಿಸಿ ಹೊರಟವು ವೃತ್ತಿಗಳು. ಇವುಗಳ ವಿಭಾಗವು ತುಂಬಾ ಸೂಕ್ಷ್ಮ. ಮಾಧುರ್ಯವ್ಯಂಜಕವಾದ ವರ್ಣಗಳು ಉಪನಾಗರಿಕಾ ವೃತ್ತಿಗೆ ಕಾರಣ. ಮೃದುವರ್ಣಗಳು, ಅನುನಾಸಿಕಗಳಿಂದ ಕೂಡಿದ ವರ್ಣಗಳು ಇದ್ದರೆ ಉಪನಾಗರಿಕತೆಯೆನಿಸುತ್ತದೆ. ಶೃಂಗಾರ, ಹಾಸ್ಯ, ಕರುಣ, ರಸಗಳಿಗೆ ಈ ವೃತ್ತಿ ಅನುಕೂಲಕರ. ಕರ್ಕಶವರ್ಣ, ರೇಫ, ಒತ್ತಕ್ಷರಗಳು ಇತ್ಯಾದಿಗಳಿದ್ದರೆ ಪರುಷವೃತ್ತಿ. ಇದು ವೀರ, ರೌದ್ರ, ಭಯಾನಕಾದಿಗಳಿಗೆ, ಅನುಕೂಲ. ಪ್ರಸಾದಗುಣ ವ್ಯಂಜಕವಾದ ವರ್ಣಗಳ ಪ್ರಯೋಗವಿದ್ದರೆ ಕೋಮಲಾವೃತ್ತಿ. ಇದು ಶಾಂತ, ಅದ್ಭುತ, ಬೀಭತ್ಸರಸಗಳಿಗೆ ಅನುಕೂಲಕರ. ಹೀಗೆ ವೃತ್ತಿ ವಿಭಾಗವಿದ್ದರೂ ಶುದ್ಧವಾಗಿ ಯಾವುದಾದರೂ ಒಂದೇ ವೃತ್ತಿಯಲ್ಲಿ ರಚನೆಯು ಕಷ್ಟ. ಹಾಗಾಗಿ ವೃತ್ತಿಗಳ ಪ್ರಯೋಗವೆಂದರೆ ಆಯಾ ಧರ್ಮವುಳ್ಳ ವರ್ಣಗಳ ಬಾಹುಳ್ಯವೆಂದು ತಿಳಿಯಬೇಕು.

ವೃತ್ತ್ಯನುಪ್ರಾಸದಲ್ಲಿ ಒಂದು, ಎರಡು, ಮೂರು, ಅಕ್ಷರಗಳ ಪುನರಾವೃತ್ತಿ ಕಂಡುಬರುತ್ತದೆ. ಈ ರೀತಿಯ ಪುನರಾವರ್ತನೆಯು ವ್ಯವಧಾನ ನಿಯಮಕ್ಕೊಳಪಟ್ಟಿದೆ. ಅಂದರೆ ವರ್ಣಗಳು ಹತ್ತಿರದಲ್ಲಿರಬೇಕು. ಅಥವಾ ನಿಯತವಾಗಿರಬೇಕು. ಪುನರಾವರ್ತನೆಯು ಎರಡು ಅಥವಾ ಅದಕ್ಕಿಂತ ಹೆಚ್ಚು ಬಾರಿ ಇರಬೇಕು.

ಉದಾ:–

**ಕರಮೆಸೆದತ್ತು ಕೌಮುದಿಯ ಬಿತ್ತು ಚಕೋರಿಯ ತುತ್ತು ನೀರಜೋ**
**ತ್ಕರದ ವಿಪತ್ತು ತಾರೆಗಳ ತುತ್ತು ಸುಧಾಂಬುಧಿಯೊತ್ತು ಮತ್ತಮಂ**
**ಬರದ ಪುಳಿಂದಿ ತಾಳ್ದಿಸೆವ ಮೂಗಿನ ಮುತ್ತು ಮಗುಳ್ದು ನೋಡಲ**
**ಚ್ಚರಿಯೆನಿಸಿತ್ತು ಮೂಡದೆಸೆಯಿಂದೊಗೆತರ್ಪ ಹಿಮಾಂಶುಮಂಡಲಂ ||**

ಇದು ಚಂದ್ರೋದಯದ ವರ್ಣನೆ. ಇಲ್ಲಿ ಕವಿಯು ಚಂದ್ರನನ್ನು ಕೌಮುದಿಯ ಬಿತ್ತು, ಚಕೋರಿಯ ತುತ್ತು, ನೀರಜೋತ್ಕರದ ವಿಪತ್ತು – ಇತ್ಯಾದಿಯಾಗಿ ವರ್ಣಿಸುವಲ್ಲಿ ನಿಯತವಾಗಿ ಅದೇ ವರ್ಣವನ್ನು ಬಳಸಿದ್ದು ಗಮನ ಸೆಳೆಯುತ್ತದೆ. ಇಲ್ಲಿ ಸ್ವರ ಸಮೇತವಾದ ವ್ಯಂಜನದ ಪುನರಾವೃತ್ತಿಯಿದೆಯಾದರೂ ಅದು ನಿಯಮವಲ್ಲ. ಅನುಪ್ರಾಸದಲ್ಲಿ ಅನಿವಾರ್ಯವಾದುದು ವ್ಯಂಜನಪುನರಾವೃತ್ತಿ " ತಾರೆಗಳ ತುತ್ತು "ಎಂಬಲ್ಲಿ 'ತ' ವ್ಯಂಜನದ ಪುನರಾವೃತ್ತಿಯಿದೆ. ಇಂಥವೂ ಅನುಪ್ರಾಸಗಳೇ ಆಗುತ್ತವೆ. ಅಂತೆಯೇ ವರ್ಣಪುನರುಕ್ತಿಯು ಇಂಥದೇ ಸ್ಥಳದಲ್ಲಿ ಬರಬೇಕೆಂಬುದೂ ಇಲ್ಲ. ಇದೇ ಪದದಲ್ಲಿರುವ ದ್ವಿತೀಯಾಕ್ಷರ ಪ್ರಾಸವೂ ಅನುಪ್ರಾಸವೇ ಆಗಿದೆ. ಅಂತೆಯೇ ಎಲ್ಲಿಯೂ, ಎಲ್ಲ ಕಡೆಗಳಲ್ಲಿಯೂ ಬರಬಹುದು.

ಉದಾ :–

ಎಳ ಗಿಳಿಗಳ ಬಳಗಂಗಳ
ಗಳನಿಳಿತಂದೆಳಸಿ ಬಳಸಿ ಸುಳಿದೊಳವುಗುತಂ ।
ನಳನಳಿಸಿ ಬೆಳೆದು ಕಳಿಯದ
ಕಳವೆಯ ಕಣೆಶಂಗಳ ಕರಂಖಂಡಿಸುಗುಂ ॥

ವರ್ಣಾವೃತ್ತಿಯು ಹೆಚ್ಚಾದರೆ ನಮ್ಮ ಗಮನವೆಲ್ಲಾ ಶಬ್ದಚಮತ್ಕಾರದ ಕಡೆಗೇ ಹೋಗುತ್ತದೆ. ಅಂತೆಯೇ ಕವಿಯು ಶಕ್ತನಾದರೂ ಪ್ರಾಸ ಚಮತ್ಕಾರವನ್ನು ನಿಯಂತ್ರಿಸಬೇಕಾಗುತ್ತದೆ. ಹಾಗಾಗಿ ನಮ್ಮ ಕವಿಗಳು ರಸ–ಭಾವಗಳಿಗೆ ಪ್ರಾಧಾನ್ಯವಿಲ್ಲದ ವರ್ಣನಾತ್ಮಕ ವಿಭಾಗಗಳಲ್ಲಿ ಇಂಥ ಚಮತ್ಕಾರಗಳನ್ನು ಮೆರೆಯುತ್ತಾರೆ.

## ಛೇಕಾನುಪ್ರಾಸ :–

ಛೇಕಾನುಪ್ರಾಸದಲ್ಲಿ ಅನೇಕ ವ್ಯಂಜನ ಅಥವಾ ವ್ಯಂಜನ ಸಮುದಾಯದ ಪುನರಾವೃತ್ತಿಯಿರುತ್ತದೆ. ಛೇಕ ಎಂದರೆ ಚತುರ ಎಂದರ್ಥ. ಇಂಥ ಪುನರಾವೃತ್ತಿಯು ಚತುರರಿಗೆ ಪ್ರಿಯವಾದುದರಿಂದ ಈ ಹೆಸರು ಬಂತೆಂದು ಹೇಳಲಾಗಿದೆ. ಇಲ್ಲಿನ ಪುನರಾವೃತ್ತಿಗೆ ಸ್ವರೂಪ ಮತ್ತು ಕ್ರಮಗಳ ನಿಬಂಧನೆಯುಂಟು. ಉದಾ:– ರಸ ಮತ್ತು ಸರ – ಈ ಎರಡು ಶಬ್ದಗಳ ಸ್ವರೂಪ ಒಂದೇ. ಎರಡೂ ಶಬ್ದಗಳು ಎರಡಕ್ಷರವುಳ್ಳವು. ಅವೇ ಅಕ್ಷರಗಳು ಇವೆ. ಆದರೆ ವರ್ಣಗಳು ಇರುವ ಕ್ರಮದಲ್ಲಿ ವ್ಯತ್ಯಾಸವಿದೆ. ರಸದಲ್ಲಿ 'ರ' ಮೊದಲು 'ಸ' ನಂತರ, ಸರದಲ್ಲಿ 'ಸ' ಮೊದಲು 'ರ' ನಂತರದಲ್ಲಿದೆ. ಆದ್ದರಿಂದ ಇವನ್ನು ಛೇಕಾನುಪ್ರಾಸವೆನ್ನಲಾಗದು. ಆದರೆ ಕೋಮಲಮಲಯ ಶಬ್ದಗಳನ್ನು ನೋಡಿ 'ಮ' 'ಲ' ವರ್ಣಗಳು ಇದನ್ನು ಛೇಕಾನುಪ್ರಾಸವಾಗಿಸುತ್ತವೆ. ಎರಡಕ್ಷರಗಳ ಜೋಡಿಯು ವ್ಯವಧಾನರಹಿತವಾಗಿ ಪುನರಾವೃತ್ತಿಯನ್ನು ಹೊಂದುವುದು ಇದರ ನಿಯಮ. ಅವುಗಳ ನಡುವೆ ಬೇರೆ ವರ್ಣಗಳ ಪ್ರವೇಶವಾದರೆ ಅದು ವೃತ್ತ್ಯನುಪ್ರಾಸವಾಗುತ್ತದೆಯೇ ಹೊರತು ಛೇಕಾನುಪ್ರಾಸವಾಗುವುದಿಲ್ಲ.

ಕೆಲದೊಳ್ ಪುಳಿಂದಿಯಿರೆ ಪೆ
ರ್ಬುಲಿ ಬಂದೊಡ ಮಂಜನಳ್ಕಂ ನೋಡಂ ನೋಡಂ ।
ಚಲದಿಂ ಕಾಡಂ ಕಾಡಂ
ಸಲೆಪಸಿವಂ ಮರೆದು ತಣಿದು ಬೇಡಂ ಬೇಡಂ ॥

## ಶಬ್ದಾನುಪ್ರಾಸ :–

ಶಬ್ದ ಮತ್ತು ಅರ್ಥಗಳೆರಡೂ ಪುನರುಕ್ತವಾಗಿದ್ದರೂ ತಾತ್ಪರ್ಯ ಭೇದವಿದ್ದರೆ ಶಬ್ದಾನುಪ್ರಾಸ ಅಥವಾ ಲಾಟಾನುಪ್ರಾಸವೆನ್ನುತ್ತಾರೆ. ಲಾಟ ಎಂದರೆ ಈಗಿನ ಗುಜರಾತ. ಅಲ್ಲಿಯ ಜನರಿಗೆ ಈ ತೆರನ ಅನುಪ್ರಾಸವು ಪ್ರಿಯವಾದುದರಿಂದ ಈ ಹೆಸರು ಬಂತೆಂಬ ವಿವರಣೆಯಿದೆ. (**ಲಾಟಜನವಲ್ಲಭತ್ವಾಚ್ಚಲಾಟಾನುಪ್ರಾಸಃ**) ಉದಾ:– ರವಿಕಿರಣಗಳ

ಸ್ಪರ್ಶವಾದಾಗ ಕಮಲಗಳ, ಕಮಲಗಳು. ಇಲ್ಲಿ ಕಮಲಗಳ ಎಂಬ ಶಬ್ದಗಳ ವಾಚ್ಯಾರ್ಥವು ಒಂದೇ ಆಗಿದ್ದರೂ ತಾತ್ಪರ್ಯವು ಬೇರೆಯಾಗಿದೆ. ಸೂರ್ಯೋದಯವಾದಾಗ ಕಮಲಗಳು ಅರಳುತ್ತವೆಯೆಂಬುದನ್ನು ಹೇಳುತ್ತಲೇ ಕಮಲಗಳಿಗೆ ಶೋಭೆಯುಂಟಾಗುವುದು ಆಗಲೇ –ಎಂಬ ತಾತ್ಪರ್ಯವಿದೆ. ಇಂಥವುಗಳನ್ನು ಶಬ್ದಾನುಪ್ರಾಸವೆಂದೂ ಕರೆಯುತ್ತಾರೆ.

**ಅನ್ಯ ಉದಾಹರಣೆಗಳು**:

ಎತ್ತಿಬಹಸತ್ತಿಗೆಯ ಮೊತ್ತಂಗಳೆತ್ತಲುಂ
ಕತ್ತಲಿಸೆ ಪೊತ್ತಮಸವೆತ್ತಬಲ್ಗತ್ತಿಗಳ
ಕಿತ್ತುಭಟರತ್ತಿ ಜಡಿಯುತ್ತಿರಲ್ಕತ್ತಬೆಳಗಿತ್ತುವವು ಮತ್ತೆ ಬಲಕೆ।
ಸುತ್ತಲುಂ ಕೆತ್ತವೋಲ್ಮತ್ತಗಜಮೊತ್ತರಿಸಿ
ಮುತ್ತಿ ನಡೆಯುತ್ತಲರ ನೊತ್ತಿ ನಿಲಿಸುತ್ತಿರಲು
ದತ್ತ ಚಮರೋತ್ಥಿತಮರುತ್ತಲೆಯೊಳುತ್ತಮ ಹಿಮೋತ್ಕರಂ ಬಿತ್ತರಿಸಿತು ॥

— ಜೈ.ಭಾ–.೪–೧೯.

ಬೆಳ್ಳಿಯ ಹಳ್ಳಿಯ ಮೇರೆಯ ಮೀರಿ
ತಿಂಗಳಿನೂರಿನ ನೀರನು ಹೀರಿ
ಆಡಲು ಹಾಡಲು ತಾ ಹಾರಾಡಲು
ಮಂಗಳಲೋಕದ ಅಂಗಳಕೇರಿ
ಹಕ್ಕಿ ಹಾರುತಿದೆ ನೋಡಿದಿರಾ.

— ದ.ರಾ.ಬೇಂದ್ರೆ. 'ಗರಿ'

ಬರುವದೇನುಂಟೊಮ್ಮೆ ಬರುವ ಕಾಲಕೆಬಹುದು
ಬಯಕೆ ಬರುವದರ ಕಣ್ಣನ್ನೇ ಕಾಣೋ

—ಮಧುರಚೆನ್ನ. "ನನ್ನನಲ್ಲ"

ಜೀವನವನದಲಿ ಕವನಮಯೂರಂ
ನಿಖಿಲ ಭುವನ ಮನನಯನ ವಿಹಾರಂ

— ಕುವೆಂಪು. "ನವಿಲು"

ಹತ್ತಿ ಮಲೆಯನು ಸುತ್ತಿ ಶಿಲೆಯನು
ಮೆತ್ತಗಿಲ್ಲಿಗೆ ಬರುವೆಯಾ ?
ಒತ್ತಿ ಕರವನು ಎತ್ತಿ ಶಿರವನು
ಮುತ್ತನಿಡುವೆನು ಕೆನ್ನಗೆ,
ತುಟಿಗೆ ತಾವರೆಗಣ್ಣಿಗೆ

— ಕೆ. ಎಸ್. ನರಸಿಂಹಸ್ವಾಮಿ. "ಮಲ್ಲಿಗೆಯ ಮಾಲೆ"

# ೨. ಯಮಕ

ಲಕ್ಷಣ :– ಮೂರು ಅಥವಾ ಅದಕ್ಕಿಂತ ಹೆಚ್ಚು ಅಕ್ಷರಗಳುಳ್ಳ ಪದವೋ ಪದಭಾಗವೋ ನಿಯತವಾಗಿ ಪುನರಾವೃತ್ತಿಯನ್ನು ಹೊಂದಿದ್ದರೆ ಯಮಕವೆಂದು ಕರೆಯುತ್ತಾರೆ. ( ಸ್ವರ ವ್ಯಂಜನ ಸಮುದಾಯ ಪೌನರುಕ್ತ್ಯಂ ಯಮಕಮ್– ರುಯ್ಯಕ ).

ಯಮಕವೆಂದರೆ ಯುಗ್ಮ ಅಥವಾ ಜೋಡಿ. ಇಲ್ಲಿ ಸ್ವರ ವ್ಯಂಜನಗಳ ಸಮುದಾಯದ ಪುನರುಕ್ತಿಯು ಕನಿಷ್ಠ ಎರಡು ಬಾರಿಯಾದರೂ ಬರಬೇಕು. ಯಮಕದಲ್ಲಿ ಸಾರ್ಥಕ ವರ್ಣಗಳ ಪುನರುಕ್ತಿಯಿರುವಂತೆ ನಿರರ್ಥಕ ವರ್ಣಗಳ ಪುನರುಕ್ತಿಯೂ ಬರಬಹುದಾಗಿದೆ. ಯಮಕದಲ್ಲಿ ಪದಗಳ ಪುನರಾವೃತ್ತಿಯಿದ್ದರೆ ಅವು ಭಿನ್ನಾರ್ಥಕಗಳಾಗಿರಬೇಕಾಗುತ್ತದೆ. ಇದು ಲಾಟಾನುಪ್ರಾಸದಿಂದ ಯಮಕವನ್ನು ಬೇರ್ಪಡಿಸುವ ಅಂಶ. ಲಾಟಾನುಪ್ರಾಸದಲ್ಲಿ ಶಬ್ದ ಅರ್ಥಗಳೆರಡೂ ಪುನರುಕ್ತಿಯನ್ನು ಹೊಂದಿರುತ್ತವೆ, ತಾತ್ಪರ್ಯದಲ್ಲಿ ಮಾತ್ರ ಭೇದ.

ಯಮಕವನ್ನು ತುಂಬಾ ಎಚ್ಚರಿಕೆಯಿಂದ ಪ್ರಯೋಗಿಸಬೇಕೆಂದು ಆಲಂಕಾರಿಕರು ಹೇಳುತ್ತಾರೆ. ಧ್ವನಿಕಾರನಾದ ಆನಂದವರ್ಧನನಂತೂ ಯಮಕವನ್ನು ರಸ ವಿರೋಧಿಯೆಂದೇ ಗಣಿಸುತ್ತಾನೆ. ಶೃಂಗಾರ, ಅದರಲ್ಲಿಯೂ ವಿಪ್ರಲಂಭದಲ್ಲಿಯಂತೂ ಯಮಕದ ಪ್ರಯೋಗವು ಸರ್ವಥಾ ನಿಷಿದ್ಧವೆಂದು ಅವನು ಹೇಳುತ್ತಾನೆ. ಯಮಕವು ಕವಿಗಳ ಪಾಂಡಿತ್ಯ ಪ್ರದರ್ಶನಕ್ಕೆ ಅನುಕೂಲವೇ ಹೊರತು ರಸಪ್ರತಿಪಾದನೆಗೆ ಅನುಕೂಲವಲ್ಲವೆಂದೇ ಅವನ ತೀರ್ಮಾನವಿದ್ದಂತಿದೆ. ಕವಿಗಳು ತಮ್ಮ ಭಾಷಾಪ್ರಭುತ್ವವನ್ನು ಪ್ರದರ್ಶಿಸುವ ಸಲುವಾಗಿ ಯಮಕವನ್ನು ಆಗಾಗ ಪ್ರಯೋಗಿಸುವುದುಂಟು.

ಉದಾ :–

ಅಮಳ್ಗಳ್ ನಯವಿಕ್ರಮಗುಣ
ದಮಳ್ಗಳ್ ನೃಪಶಾಸ್ತ್ರ ಶಸ್ತ್ರಪರಿಣತವರಂ।
ಸಮರದೊಳುದಗ್ರಶೌರ್ಯಂ
ಸಮರಸ ಸಂಪನ್ನ ನಾವನುರದಾಂಪನ್ನಂ ॥

ಇಲ್ಲಿ ನಿಯತವಾಗಿ " ಅಮಳ್ಗಳ್ " ಮತ್ತು " ಸಮರ " ಎಂಬ ಪದಗಳ ಪುನರುಕ್ತಿಯನ್ನು ಗಮನಿಸಬಹುದು. ಇಲ್ಲಿ ಪ್ರತಿಯೊಂದು ಚರಣದ ಆದಿಯಲ್ಲಿ ಯಮಕವಿದೆ.

**ತರಿ ಸಂದಿಸೆ ಕರಿಘಟೆಯಂ**
**ತುರುಗಿರೆ ಪಾಯ್ದವು ಶಿಲೀಮುಖಿಂ ಪುಷ್ಕರದೊಳ್ ।**
**ಗರಿ ಸಂದಿಸೆ ಮೊರದೊರ್ಮಾದ**

ತಿರುಗುವ ತೆರದಿಂ ಶಿಲೀಮುಖಂ ಪುಷ್ಕರದೋಳ್ ॥
ಎಳೆವಾಸೆ ತೊಡರ್ದದೆನೆ ಮಿಸು
ಪಳೆವಾಸೆಯದೆಸೆಯ ನಿಂದಳಂ ಕೈಪಿಡಿದೊ।
ಲ್ದಳೆವಾಸೆಯಾಂತನಂಬುಜ
ದಳೆವಾಸೆಡೆಗೊಂಡ ಪುಳಿನದೆಡೆಗವನೀಶಂ ॥
ಕುವಲಯಕಧಿಪತಿಯಪ್ಪನೆ
ತವೆ ಲಕ್ಷಣಯುಕ್ತನಲ್ಲದಿರ್ದೊಡೆ ರಾಜಂ।
ಕುವಲಯಕಧಿಪತಿಯಪ್ಪನೆ
ತವೆ ಲಕ್ಷಣಯುಕ್ತನಲ್ಲದಿರ್ದೊಡೆ ರಾಜಂ ॥

ಅನ್ಯ ಉದಾಹರಣೆಗಳು :

ನಾಗೇಂದ್ರನಂ ಬಿಡದೆ ತಲೆವಾಗಿಸಿತ್ತಮರ
ನಾಗೇಂದ್ರನಂ ಬುದ್ಧಿ ದೊರೆಸಿತ್ತು ಪುರಮರ್ದ
ನಾಗೇಂದ್ರನಂ ನಿಂದು ಬೆರಗಾಗಿಸಿತ್ತಮಲ ಧರ್ಮಜನ ಕೀರ್ತಿ ಬಳಿಕ।
ನಾಗೇಂದ್ರಶಯನಾಲಯವ ಜಡಧಿಯೆನಿಸಿನುತ
ನಾಗೇಂದ್ರ ವರದಾಯುಧವ ಪೊಳ್ಳುಗಳೆದು ಮಥ
ನಾಗೇಂದ್ರಧರನ ಜಾತೆಯ ನಿಲವುಗೆಡಿಸಿನೆರೆ ರಾಜಿಸಿತು ಮೂಜಗದೊಳು।

— ಜೈ. ಭಾ. ೨–೧೨.

ಏತಕೇತಕೆ ಏತಕೆ ? ಇದು
ಏತಕೀ ಪರಿವರ್ತನ
ಏತಕೀ ಪರಿವರ್ತನ.

— ಗೋಪಾಲಕೃಷ್ಣ ಅಡಿಗ "ಸಮಗ್ರಕಾವ್ಯ" (ಪುಟ ೧೯೭)

# ಸಾದೃಶ್ಯ ಮೂಲವಾದ ಅಲಂಕಾರಗಳು

## ೧. ಉಪಮಾ

**ಲಕ್ಷಣ:**– ಎರಡು ವಸ್ತುಗಳಲ್ಲಿರುವ ಸುಂದರವಾದ ಸಾದೃಶ್ಯವನ್ನು ಹೇಳುವುದೇ ಉಪಮೆ ( **ಉಪಮಾಯತ್ರ ಸಾದೃಶ್ಯಲಕ್ಷ್ಮೀರುಲ್ಲಸತಿ ದ್ವಯೋಃ** –ಕುವಲಯಾನಂದ )

ಉಪಮೆಯು ಅತ್ಯಂತ ಪ್ರಾಚೀನವಾದ ಅಲಂಕಾರ. ಬಹುಶಃ ಅತ್ಯಂತ ಸಹಜವಾದುದು ಹೌದು. ಒಂದು ಮತ್ತೊಂದಕ್ಕೆ ಇರುವ ಸಾದೃಶ್ಯಗಳನ್ನು ಗುರುತಿಸುವುದು ಮನುಷ್ಯನ ಆಲೋಚನೆಯ ಸಹಜವಾದ ಕ್ರಿಯೆಯಾಗಿದೆ. ಮತ್ತು ಇದು ಮನುಷ್ಯ ಹಾಗೂ ಅವನಿಗೆ ಹಿನ್ನೆಲೆಯಾದ ನಿಸರ್ಗ ಇವುಗಳ ಸಂಬಂಧದಿಂದ ನಿಷ್ಪನ್ನವಾದದ್ದು. ಸುತ್ತಣ ವಸ್ತುಗಳನ್ನು, ಸಂಗತಿಗಳನ್ನು ನೋಡುತ್ತಾ ನೋಡುತ್ತಾ ಅವುಗಳಿಗಿರುವ ಪರಸ್ಪರ ಸಾದೃಶ್ಯ, ವಿರೋಧ ಹಾಗೂ ಸಂಬಂಧಗಳನ್ನು ಗುರುತಿಸುವ ಮನುಷ್ಯನ ಮನಸ್ಸು, ಮಾತಿನ ಮೂಲಕ ತನ್ನ ಅಭಿವ್ಯಕ್ತಿಯನ್ನು ರೂಪಿಸಿಕೊಳ್ಳುವಾಗ ಈ ಸಾದೃಶ್ಯಗಳನ್ನು ಯಥಾಶಕ್ತಿಯಾಗಿ ಬಳಸಿಕೊಳ್ಳುತ್ತ ಹೇಳುವ ಮಾತನ್ನು ಸ್ಪಷ್ಟಗೊಳಿಸುವುದು ದೈನಂದಿನ ವ್ಯವಹಾರದಲ್ಲಿ ತೀರ ಪರಿಚಿತವಾದ ಸಂಗತಿ. ಎರಡು ಭಿನ್ನವಸ್ತುಗಳ ನಡುವಣ ಸಾದೃಶ್ಯವನ್ನು ಗುರುತಿಸುವಿಕೆಯಿಂದ, ಅವುಗಳನ್ನು ಹೋಲಿಸಿ ಹೇಳುವ ಉಕ್ತಿಕ್ರಮವನ್ನು ಉಪಮೆ ಎಂದು ಕರೆಯಲಾಗಿದೆ. ( ಕಾವ್ಯಾರ್ಥ ಚಿಂತನ.–ಪುಟ .೮೫–೮೫ )

ಉಪಮೆಯು ಅನಿವಾರ್ಯವಾದುದೂ ಹೌದು. ಅಂತೆಯೇ ಜನಸಾಮಾನ್ಯರೂ ಯಥಾಮತಿಯಾಗಿ ಬಳಸುತ್ತಾರೆ. ಶಾಸ್ತ್ರಗಳಲ್ಲಂತೂ ಗಹನವಾದ ತತ್ವಗಳ ಸ್ಪಷ್ಟೀಕರಣಕ್ಕಾಗಿ ಅವುಗಳ ಬಳಕೆ ಯಥೇಚ್ಛವಾಗಿ ನಡೆದಿದೆ. ಆದರೆ ಬೇರೆಡೆಗಳಲ್ಲಿ ಬಳಕೆಗೊಳ್ಳುವ ಉಪಮೆಗೂ ಕಾವ್ಯದಲ್ಲಿ ಬಳಕೆಗೊಳ್ಳುವ ಉಪಮೆಗೂ ಉದ್ದೇಶದಲ್ಲಿ ವ್ಯತ್ಯಾಸವಿದೆ. ಕಾವ್ಯದಲ್ಲಿ ಅದು ಬಳಕೆಗೊಳ್ಳುವುದು ಜಿ. ಎಸ್. ಶಿವರುದ್ರಪ್ಪನವರು ಹೇಳುವಂತೆ ಉಪಮೆಗಳನ್ನು ಬಳಸುವ ಉದ್ದೇಶ, ವಿಷಯವನ್ನು ಸ್ಪಷ್ಟಪಡಿಸುವುದಷ್ಟೇ ಆಗಿರದೆ ಒಂದು ಬಗೆಯ ಆಶ್ಚರ್ಯ ಹಾಗೂ ಆನಂದವನ್ನುಂಟು ಮಾಡುವುದಕ್ಕಾಗಿ. ( ಕಾವ್ಯಾರ್ಥ ಚಿಂತನ. ಪುಟ – ೮೬. )

ಉಪಮೆಗಳನ್ನು ಅತ್ಯಂತ ಪ್ರಾಚೀನವಾದ ವೇದ ಮಂತ್ರಗಳಲ್ಲಿ ಕಾಣಬಹುದು. ವೈದಿಕ ಸೂಕ್ತಗಳಲ್ಲಿ ಅನೇಕ ಸುಂದರವಾದ ಉಪಮೆಗಳಿವೆ. ಉಪನಿಷತ್ತುಗಳಲ್ಲಿ ತತ್ವವನ್ನು ತಿಳಿಸುವುದಕ್ಕೋಸ್ಕರ ಬಳಸಲಾಗಿದೆ. ಅಂತೆಯೇ ಉಪಮಾ ಸ್ವರೂಪದ ವಿವೇಚನೆಯನ್ನು ವೈದಿಕ ಶಬ್ದಗಳ ನಿರುಕ್ತವನ್ನು ಹೇಳುವ ಯಾಸ್ಕನ ನಿರುಕ್ತದಲ್ಲಿಯೇ ಕಾಣಬಹುದು. ಯಾಸ್ಕ

ಉಪಮೆಯ ಬಗೆಗೆ ಹೇಳುವಾಗ ತನಗಿಂತ ಹಿಂದಿನವನಾದ ಗಾರ್ಗ್ಯನೆಂಬವನ ಮತವನ್ನು ಉಲ್ಲೇಖಿಸುತ್ತಾನೆ. ಯದ್ ಅತತ್ ತತ್ಸದೃಶ ಮಿತಿ ಗಾರ್ಗ್ಯಃ –ಅದಲ್ಲದ್ದು ಅದಕ್ಕೆ ಸದೃಶ್ಯವಾದುದೆಂದು ಗಾರ್ಗ್ಯನು ಹೇಳುತ್ತಾನೆ. ಈ ಮಾತಿನಿಂದ ಯಾಸ್ಕನಿಗಿಂತ ಮೊದಲೇ ಉಪಮೆಯನ್ನು ಕುರಿತ ವಿವೇಚನೆ ನಡೆದಿತ್ತೆಂದು ತಿಳಿಯುತ್ತದೆ. ನಿರುಕ್ತದ ಮೂರನೆಯ ಅಧ್ಯಾಯದಲ್ಲಿ ೧೨ ಉಪಮಾವಾಚಕ ಪದಗಳನ್ನು ಹೇಳಲಾಗಿದೆ. ಕರ್ಮೋಪಮಾ, ಭೂತೋಪಮಾ, ರೂಪೋಪಮಾ, ಸಿದ್ಧೋಪಮಾ, ಎಂಬ ಪ್ರಕಾರಗಳನ್ನು ಹೇಳುವುದರ ಜೊತೆಗೆ ಲುಪ್ತೋಪಮೆ ಎಂಬುದನ್ನೂ ಯಾಸ್ಕ ಗುರುತಿಸಿದ್ದಾನೆ. ಗುಣದಿಂದ ಶ್ರೇಷ್ಠವಾದ ಅಥವಾ ಪ್ರಖ್ಯಾತವಾದ ವಸ್ತುವನ್ನು ನ್ಯೂನ ಗುಣವುಳ್ಳ ವಸ್ತುವಿನೊಂದಿಗೆ ತುಲನೆ ಮಾಡುವುದನ್ನು ಉಪಮೆಯೆಂದು ಗುರುತಿಸಲಾಗಿದೆ . ಹೀಗೆ ನೋಡಿದಾಗ ನಿರುಕ್ತಕಾರನಲ್ಲಿಯೇ ಉಪಮೆಯ ಶಾಸ್ತ್ರೀಯ ವಿವೇಚನೆಯನ್ನು ಕಾಣಬಹುದು. ಮುಂದೆ ಭರತ, ಭಾಮಹ, ಮುಂತಾದ ಆಲಂಕಾರಿಕರೆಲ್ಲ ಉಪಮೆಯ ಮಹತ್ವವನ್ನೂ ಸ್ವರೂಪವನ್ನೂ, ಸ್ಪಷ್ಟಗೊಳಿಸಿದರು.

**ಉಪ + ಮಾ** ಎನ್ನುವುದಕ್ಕೆ **ಉಪ – ಸಾಮೀಪ್ಯಾತ್, ಮಾ – ಮಾನಂ** – ಹತ್ತಿರಕ್ಕೆ ತಂದು ತೂಗಿ ನೋಡುವುದು ಅಥವಾ ವಿಶೇಷ ಜ್ಞಾನವನ್ನು ತಿಳಿಯುವುದು ಎಂದಾಗುತ್ತದೆ. ಉಪಮೆ ಎಂಬ ಶಬ್ದಕ್ಕೆ ಸಾದೃಶ್ಯ, ಸಮಾನತೆ, ತುಲ್ಯತ್ವ, ಮುಂತಾದ ಅರ್ಥಗಳಿದ್ದರೂ ಶಬ್ದವ್ಯುತ್ಪತ್ತಿಯ ಮೂಲಕ ತಿಳಿದು ಬರುವ ಅರ್ಥವು ಮಹತ್ವದ್ದು. ಎರಡು ಭಿನ್ನವಸ್ತುಗಳನ್ನು ಹತ್ತಿರದಲ್ಲಿಟ್ಟು ತೂಗಿ ನೋಡುವುದು ಇಲ್ಲಿನ ಕ್ರಿಯೆ. ಆ ಎರಡು ವಸ್ತುಗಳನ್ನು ಹತ್ತಿರಕ್ಕೆ ತರಲು ನಿಮಿತ್ತವಾದುದು ಸಮಾನಧರ್ಮ. ಈ ರೀತಿಯ ಹೋಲಿಕೆಯ ಗುರಿಯು ಕಡಿಮೆ ಗುಣವುಳ್ಳ ವಸ್ತುವನ್ನು ಮೇಲೆತ್ತುವುದೇ ಆಗಿದೆಯೆಂಬುದನ್ನು ಮರೆಯಬಾರದು. 'ರೇಶಿಮೆಯಂತೆ ಮೈ ನುಣುಪಾಗಿದೆ'', ಎಂದಾಗ ಮೈಯ ನುಣುಪು ಕಡಿಮೆ ಎಂಬುದು ಗೊತ್ತಿರುವ ಸಂಗತಿಯೇ, ಆದರೂ ರೇಶಿಮೆಯ ನುಣುಪಿಗೆ ಹೋಲಿಸಿ ಗುಣವನ್ನು ಎತ್ತರಿಸುವ ಪ್ರಯತ್ನವನ್ನು ಮಾಡಲಾಗುತ್ತದೆ.

ಸಾದೃಶ್ಯ ಉಪಮೆಯ ಪ್ರಾಣ. ಎರಡು ವಸ್ತುಗಳಲ್ಲಿರುವ ಸಾದೃಶ್ಯವನ್ನು ಎತ್ತಿತೋರುವುದೇ ಪ್ರಧಾನವಾದುದು. ಸಾಮಾನ್ಯವಾದ ದಿನಬಳಕೆಯ ಮಾತಿಗೆ ಇಷ್ಟು ಸಾಕು. ಆದರೆ ಅದನ್ನು ಅಲಂಕಾರವೆಂದು ಪರಿಗಣಿಸಲು ಅದು ಸಾಲದು. 'ನರಿಯು ನಾಯಿಯ ಹಾಗಿದೆ' 'ಕತ್ತೆಯು ಕುದುರೆಯ ಹಾಗಿದೆ'. ಇತ್ಯಾದಿ ಮಾತುಗಳೂ ಸಾದೃಶ್ಯವನ್ನು ಹೇಳುತ್ತವೆಯಾದರೂ ಅವು ಅಲಂಕಾರವೆನಿಸಲಾರವು. ಯಾಕೆಂದರೆ ಅಲ್ಲಿ, ಸೌಂದರ್ಯಾಂಶವಿಲ್ಲ. ಚಮತ್ಕಾರವಿಲ್ಲ. ಆ ಕಾರಣದಿಂದಲೇ ಕುವಲಯಾನಂದಕಾರನು ಉಪಮೆಯ ಲಕ್ಷಣದಲ್ಲಿ ''ಸಾದೃಶ್ಯಲಕ್ಷ್ಮೀ''ಎಂಬ ಪದವನ್ನು ಸೇರಿಸಿದ್ದಾನೆ. ಉಪಮೆಯಲ್ಲಿರಬೇಕಾದುದು ಕೇವಲ ಸಾದೃಶ್ಯವಲ್ಲ: ಸುಂದರವಾದ ಸಾದೃಶ್ಯ. ಅಲ್ಲಿ ಕವಿಯು ಉದ್ದೇಶಿಸಿರುವುದೂ ಅದೇ ಸೌಂದರ್ಯಾನುಭವದ ಪುನಃ ಸೃಷ್ಟಿ. ಸೌಂದರ್ಯ ರಹಿತವಾದುದು ಅಲಂಕಾರವೆನಿಸಿಕೊಳ್ಳುವುದಿಲ್ಲವೆಂಬ ಮಾತು ಎಲ್ಲ ಅಲಂಕಾರಗಳಿಗೂ ಸಮಾನವಾಗಿ ಅನ್ವಯಿಸುವಂಥದು. ಉಪಮೆಗೆ ಸಂಬಂಧಿಸಿದಂತೆ ಒತ್ತುಕೊಟ್ಟು ಹೇಳಬೇಕಾಗುತ್ತದೆ.

ಅಲಂಕಾರ ವಿವೇಚನೆಯಲ್ಲಿ, ಉಪಮೆಯಲ್ಲಿ ಪ್ರಮುಖವಾದ ನಾಲ್ಕು ಅಂಶಗಳನ್ನು ಎತ್ತಿ ಹೇಳಲಾಗುತ್ತದೆ. ಉಪಮೇಯ, ಉಪಮಾನ, ಸಾಧಾರಣಧರ್ಮ ಹಾಗೂ ಉಪಮಾವಾಚಕಶಬ್ದ. ಇವುಗಳಲ್ಲಿ ಉಪಮೇಯವು ಮೊದಲನೆಯದು. ನಾವು ವರ್ಣಿಸಲು ಬಯಸುವ ವಸ್ತು ಅದು. ಅದನ್ನು ವರ್ಣ್ಯ, ಪ್ರಕೃತ, ಪ್ರಸ್ತುತ , ಎಂದೂ ಕರೆಯುವುದುಂಟು. ಅದನ್ನೇ ಇನ್ನೊಂದು ರೀತಿಯಲ್ಲಿ ಅಪ್ರಸಿದ್ಧ , ಅಪ್ರಖ್ಯಾತ ,ನ್ಯೂನಗುಣವುಳ್ಳ ವಸ್ತುವೆಂದೂ ಕರೆಯಬಹುದು. ವಸ್ತುವೊಂದರ ಅನುಭವದಿಂದ ಮುದಗೊಂಡ ಮನಸ್ಸು ಅದರ ಅಭಿವ್ಯಕ್ತಿಗೆ ತಹತಹಿಸಿದಾಗ ತೆಕ್ಕೆಗೊಗ್ಗುವುದು ಹೋಲಿಕೆ. ಅತ್ಯಂತ ಸಪಕಲಾದ ಉದಾಹರಣೆಯನ್ನೇ ನೋಡಿ. "ಮುಖವು ಚಂದ್ರನಂತೆ ರಮಣೀಯವಾಗಿದೆ". ಇಲ್ಲಿ 'ಮುಖವು' ಉಪಮೇಯ. ಈ ಮುಖವನ್ನು ಕಂಡು ಮುದಗೊಂಡವನು ವಕ್ತೃ. ಅವನಿಗೆ ತನಗಾದ ಆನಂದಾನುಭವವನ್ನು ಅಭಿವ್ಯಕ್ತಗೊಳಿಸಬೇಕಾಗಿದೆ. ಅದು ಕೇಳುಗನಲ್ಲಿಯೂ ಅಂಥದೇ ಅನುಭವವನ್ನು ಜಾಗ್ರತಗೊಳಿಸಲೆಂಬುದು ಗುರಿ. ಅದಕ್ಕಾಗಿಯೇ ಅವನು ಸದೃಶ ವಸ್ತುವೊಂದನ್ನು ಹುಡುಕಲು ಬಯಸುತ್ತಾನೆ. ಇಲ್ಲಿ ಅನುಭವದಿಂದ ಮುದಗೊಂಡ ಎಂದು ಹೇಳಿದರೂ ಅದನ್ನು ಅಕ್ಷರಶಃ ಸ್ವೀಕರಿಸಬೇಕಾಗಿಲ್ಲ. ಅದು ತದ್ವಿರುದ್ಧವಾದ ಅನುಭವವನ್ನು ಮೂಡಿಸಿದ್ದೂ ಇರಬಹುದು. ಒಟ್ಟಾರೆ ಉಪಮೇಯವೆಂದರೆ ನಾವು ವರ್ಣಿಸಲು ಬಯಸುವ, ಇನ್ನೊಂದರೊಡನೆ ಹೋಲಿಸಲು ಬಯಸುವ ವಸ್ತು.

ಉಪಮಾನವು ಸಾಮಾನ್ಯವಾಗಿ ಪ್ರಸಿದ್ಧ ವಸ್ತುವಾಗಿರುತ್ತದೆ. ಅಂದರೆ ಅದು ಹೆಚ್ಚಿನವರಿಗೆ ತಿಳಿದಿರುತ್ತದೆ. ಉಪಮೆಯು ಉಪಮೇಯದ ಗುಣವನ್ನು ಎತ್ತರಿಸುವ ಗುರಿಯನ್ನು ಹೊಂದಿರುವಾಗ ಇದು ಸ್ವಾಭಾವಿಕ. ಮೇಲಾಗಿ ಕೊಡುವ ಹೋಲಿಕೆ ಕೇಳುವವನಿಗೆ ಅರ್ಥವಾಗಬೇಕಲ್ಲವೇ? ಅದಕ್ಕಾಗಿ ಉಪಮಾನವು ಪ್ರಸಿದ್ಧ ವಸ್ತುವಾಗಿರಬೇಕೆನ್ನುತ್ತಾರೆ. "ಚಂದ್ರ" ನನ್ನು ಉಪಮಾನವೆನ್ನುವಾಗ ಚಂದ್ರನ ಸೌಂದರ್ಯ ಲೋಕಪ್ರಸಿದ್ಧವೆಂಬುದನ್ನು ಗೃಹೀತವಾಗಿಟ್ಟುಕೊಂಡೇ ಹೊರಡಬೇಕಾಗುತ್ತದೆ. ಗೊತ್ತಿಲ್ಲದ ವಸ್ತುವನ್ನು ಗೊತ್ತಿರುವ ವಸ್ತುವಿನೊಂದಿಗೆ ಹೋಲಿಸಿ ಪರಿಚಯಿಸಲು ಸಾಧ್ಯವೆಂಬುದು ಇತರ ಶಾಸ್ತ್ರಗಳಿಂದಲೂ ಸಿದ್ಧವಾದ ಸತ್ಯವೇ . "ಗೌರಿವಗವಯಃ "– ನಾಡಾಕಳಿನಂತೆ ಕಾಡಾಕಳು –ಎಂಬ ಮಾತು ಕಾಡಾಕಳಿನ ಪರಿಚಯವಿಲ್ಲದವನಿಗೆ ಪರಿಚಯಿಸಲಿಕ್ಕಾಗಿ . ಆಕಳನ್ನೇ ಕಾಣದಿದ್ದವನಿಗೆ ಈ ಮಾತಿನಿಂದ ಯಾವ ಪ್ರಯೋಜನವೂ ಇಲ್ಲ. ಉಪಮಾನವು ಪ್ರಸಿದ್ಧ ವಸ್ತುವಾಗಿರಬೇಕೆಂಬ ಮಾತಿನ ಹಿನ್ನೆಲೆಯಲ್ಲಿ ಈ ದೃಷ್ಟಿಯಿದೆ .

ಉಪಮೇಯಕ್ಕಿಂತ ಉಪಮಾನವು ಗುಣಾಧಿಕ್ಯವನ್ನು ಹೊಂದಿರಬೇಕಾದುದು ಅಪೇಕ್ಷಣೀಯ. ಹಾಗಲ್ಲವಾದರೆ ಅದು ಹೀನೋಪಮೆಯಾಗುತ್ತದೆ. ಅದರಿಂದ ಉಪಮೆಯ ಮೂಲೋದ್ದೇಶಕ್ಕೆ ಚ್ಯುತಿ ಬರುತ್ತದೆ. "ಉಪಮಾನಗಳು ಉಪಮೇಯಕ್ಕಿಂತ ಅಧಿಕವಾಗಿರಬೇಕಾದುದೇ ನ್ಯಾಯವೆಂದು" ಭಾಮಹನೂ "ಗುಣದಲ್ಲಿ ಹೆಚ್ಚು ಉತ್ಕೃಷ್ಟವಾಗಿರುವ ಯಾವ ಮತ್ತೊಂದರೊಡನೆ ಇದಕ್ಕೆ ಸಾಮ್ಯವನ್ನು ತರಲಾಗುವದೋ ಅದು ಉಪಮಾನ. ಗುಣದಲ್ಲಿ ಕಡಿಮೆಯಿರುವ ಯಾವುದನ್ನು ಹೋಲಿಸಲು ಹೊರಟಿರುವೆವೋ

ಅದು ಉಪಮೇಯ'' ಎಂದು ವಾಮನನು ಹೇಳಿರುವುದು ಈ ದೃಷ್ಟಿಯಿಂದ. ಆದರೆ ಇದರಿಂದ ಕವಿಪ್ರತಿಭೆಯ ವಿಜೃಂಭಣೆಗೆ ಅನಾವಶ್ಯಕವಾದ ಮಿತಿಯನ್ನು ಕಲ್ಪಿಸಿದಂತಾಗುತ್ತದೆಂದು ಅನ್ನಿಸಿದ್ದರಿಂದ ಕಲ್ಪಿತವಾದ ಉಪಮಾನಗಳನ್ನೂ ಸ್ವಾಗತಿಸಬೇಕಾಯಿತು. ಕವಿಯು ವಸ್ತು ಸ್ವರೂಪವನ್ನು ನಿವೇದಿಸುವಷ್ಟರಿಂದ ಕೃತಕೃತ್ಯನಾಗಲಾರ. ಅವನಿಗೆ ಆನಂದಾನುಭವವು ಗುರಿ. ಸಾದೃಶ್ಯದ ಚಮತ್ಕಾರ ಪ್ರತೀತಿಯತ್ತ ಅವನ ಲಕ್ಷ್ಯ. ಅಂತೆಯೇ ಸಿದ್ಧವಾದ ಉಪಮಾನಗಳು ತನ್ನ ಗುರಿ ಸಾಧನೆಯಲ್ಲಿ ಸಫಲವಾಗಲಾರವೆಂದು ಭಾವಿಸಿದಾಗ ಕಲ್ಪಿತವಾದವುಗಳನ್ನು ಆಶ್ರಯಿಸುತ್ತಾನೆ. ಅವು ಲೋಕಪ್ರಸಿದ್ಧವಲ್ಲದಿದ್ದರೂ ನಡೆಯುತ್ತದೆ.

ಉಪಮೆಯಲ್ಲಿ ಅತ್ಯಂತ ಮುಖ್ಯವಾದುದು ಸಾಧಾರಣ ಧರ್ಮ. ಆಲಂಕಾರಿಕರು ಇದನ್ನು ಸಾದೃಶ್ಯ, ಸಾಮ್ಯ, ಸಾಧರ್ಮ್ಯ, – ಎಂದು ಮುಂತಾಗಿ ಕರೆಯುತ್ತಾರೆ. ಸಾಧರ್ಮ್ಯ ಮತ್ತು ಸಾದೃಶ್ಯಗಳು ಸಮಾನಾರ್ಥಕಗಳಂತೆ ಗೋಚರವಾದರೂ ಅವುಗಳಲ್ಲಿ ಸೂಕ್ಷ್ಮವಾದ ವ್ಯತ್ಯಾಸವಿದೆ. ಧರ್ಮವು ಆಂತರಿಕವಾದ ಅಂಶಗಳಿಗೆ ಒತ್ತು ಕೊಡುವುದಾದರೆ ದೃಶ್ಯ ಬಾಹ್ಯವಾದ ಸಾಮ್ಯವನ್ನು ಮಾತ್ರ ಲಕ್ಷಿಸುತ್ತದೆ. ಡಾ|| ಕೆ. ಕೃಷ್ಣಮೂರ್ತಿಯವರು ಹೇಳುತ್ತಾರೆ: ಎರಡು ವಸ್ತುಗಳಲ್ಲಿರುವ ಹೋಲಿಕೆಯೇ ಸಾದೃಶ್ಯ. ಈ ಸಾದೃಶ್ಯದ ಪ್ರತೀತಿಗೆ ಮೂಲವೇನೆಂದು ವಿಚಾರ ಮಾಡುತ್ತಾ ಹೊರಟಾಗ ಎರಡು ವಸ್ತುಗಳಲ್ಲೂ ಇರುವ ಧರ್ಮಗಳ, ಅವುಗಳ ಸಂಬಂಧದ ಪರಿಜ್ಞಾನ ಬರುತ್ತದೆ. ಇದೇ ಸಾಧರ್ಮ್ಯ. ಸಾದೃಶ್ಯಕ್ಕೆ ಮೂಲ ಯಾವುದೋ ಅದು ಸಾಧರ್ಮ್ಯ. ಸಮಾನವಾದ ಧರ್ಮವಿಲ್ಲದಾದಾಗ ಸಾದೃಶ್ಯಪ್ರತೀತಿ ಬರಲಾರದು. (ಕನ್ನಡ ಕಾವ್ಯಪ್ರಕಾಶ. ಪುಟ ೩೯–೩೩೦). ಆದರೆ ಸಾದೃಶ್ಯವೆಂಬ ಪದವನ್ನು ಪಾರಿಭಾಷಿಕವಾಗಿ ಬಳಸಿದಾಗ **ತದ್ಭಿನ್ನತ್ವೇ ಸತಿಭೂಯೋಧರ್ಮತ್ವಮ್**– ಪರಸ್ಪರ ಭಿನ್ನವಾಗಿರುವಾಗ ಇನ್ನೊಂದರಲ್ಲಿರುವ ಧರ್ಮವನ್ನು ಹೊಂದಿರುವುದು ಎಂದು ವ್ಯಾಖ್ಯಾನಿಸಲಾಗಿದೆ. ಇದು ಅವಯವ, ಗುಣ, ಕ್ರಿಯೆಗಳೆಲ್ಲವನ್ನು ಒಳಗೊಳ್ಳುತ್ತದೆ. ಹಾಗಾಗಿ ಎರಡೂ ಪದಗಳನ್ನು ಪರ್ಯಾಯ ಪದಗಳೆಂದು ತಿಳಿದರೆ ತಪ್ಪಲ್ಲ. ಉಪಮಾನ ಉಪಮೇಯಗಳನ್ನು ಒಂದುಗೂಡಿಸುವ ತತ್ತ್ವ ಇದು. '' ಮುಖವು ಚಂದ್ರನಂತೆ ರಮಣೀಯವಾಗಿದೆ '' ಎನ್ನುವಲ್ಲಿ ಮುಖ ಮತ್ತು ಚಂದ್ರಗಳನ್ನು ಒಂದುಗೂಡಿಸುವುದು ರಮಣೀಯತೆ ಎಂಬ ಧರ್ಮ. ಅಂದರೆ ಮುಖ–ಚಂದ್ರಗಳ ಸಾಮ್ಯವು ರಮಣೀಯತ್ವಕ್ಕೆ ಸೀಮಿತ ಅಂದರೆ ಯಾವುದೇ ವಸ್ತುವಿಗೂ ಮತ್ತೊಂದು ವಸ್ತುವಿನೊಡನೆ ಸಂಪೂರ್ಣ ಸಾದೃಶ್ಯವಿರುವುದು ಅಸಂಭವ. ಆದುದರಿಂದ ಎಷ್ಟು ಸಾದೃಶ್ಯವು ಸಂಭವವೋ ಅಷ್ಟರಿಂದಲೇ ಮಹಾಕವಿಗಳು ಉಪಮೆಯನ್ನು ಪ್ರಯೋಗಿಸುತ್ತಾರೆ. ತುಂಬಿದ ಬಿಂಬದ ಚಂದ್ರನೆಲ್ಲಿ? ಯಾವ ಬೆಳಕೂ ಇಲ್ಲದ ನಲ್ಲೆಯ ಮುಖವೆಲ್ಲಿ? ಆದರೂ ಅಷ್ಟಿಷ್ಟು ಕಾಂತಿಯ ಸಾಮ್ಯದಿಂದ ನಲ್ಲೆಯ ಮುಖವನ್ನು ಪೂರ್ಣಚಂದ್ರನಿಗೆ ಹೋಲಿಸುತ್ತಾರೆ. ಡಾ||ಕೆ ಕೃಷ್ಣಮೂರ್ತಿ. ಕನ್ನಡ ಕಾವ್ಯಾಲಂಕಾರ **''ಗುಣಲೇಶೇನ ಯತ್ಸಾಮ್ಯಂ''**– ಗುಣಲೇಶದಿಂದ ಹೋಲಿಕೆಯೆಂದು ಭಾಮಹ ಹೇಳಿದರೆ **''ಯಥಾ ಕಥಂಚಿತ್ ಸಾದೃಶ್ಯಂ''** ಎನ್ನುತ್ತಾನೆ ದಂಡಿ. ಆದ್ದರಿಂದ ಉಪಮೆಯನ್ನು ಬಹಳಷ್ಟು ಜಗ್ಗಬಾರದು.

ಸಾಧರ್ಮ್ಯ ಅಥವಾ ಸಮಾನಧರ್ಮವು ಉಪಮಾನ – ಉಪಮೇಯಗಳಲ್ಲಿರುವುದೇ

ಹೊರತು ಕಾರ್ಯ–ಕಾರಣಾದಿಗಳಲ್ಲಿ ಇರುವುದಿಲ್ಲವೆಂದು ಮಮ್ಮಟ ಹೇಳುತ್ತಾನೆ. ಕಾರ್ಯ– ಕಾರಣಗಳಲ್ಲಿರುವ ಸಾಮ್ಯ ಅಥವಾ ಸಾಧರ್ಮ್ಯವು ಉಪಮೆಗೆ ವಿಷಯವಲ್ಲವೆಂದು ಇದರ ತಾತ್ಪರ್ಯ. ಕಾರ್ಯಕಾರಣಗಳು ಅನುರೂಪವಾಗಿರುವುದು ಸಹಜ. ಉದಾ:– '' ತಂದೆಯಂತೆ ಮಗ'' ಎಂದು ಹೇಳುತ್ತಾರಲ್ಲವೇ? ಆದರೆ ಅವುಗಳನ್ನು ಸಾಧರ್ಮ್ಯವೆಂದು ಗಣಿಸಬೇಕಿಲ್ಲ ಅವುಗಳನ್ನು ಭಿನ್ನ ಪದಾರ್ಥಗಳೆಂದು ಹೇಳುವಂತೆಯೂ ಇಲ್ಲ. ಎರಡು ಭಿನ್ನವಾದ ವಸ್ತುಗಳಲ್ಲಿರುವ ಸಾಧರ್ಮ್ಯವು ಇಲ್ಲಿನ ವಿಷಯ. ಅಂದರೆ ಈ ಸಾಧರ್ಮ್ಯವು ಕವಿಯ ಪ್ರತಿಭೆಗೆ ಗೋಚರವಾದುದಾಗಿರಬೇಕು. ಸಾಮಾನ್ಯ ಜನರೂ ತಿಳಿಯುವಂಥದನ್ನು ತಿಳಿಸಲು ಕವಿಯು ಬೇಕಿಲ್ಲವೆಂಬ ಅರ್ಥದಲ್ಲಿದೆ.

ಸಾಧರ್ಮ್ಯವು ಮೂರು ತೆರನಾದುದೆಂದು ಅಲಂಕಾರ ಸರ್ವಸ್ವಕಾರನಾದ ರುಯ್ಯಕ ಹೇಳುತ್ತಾನೆ. ಭೇದಪ್ರಾಧಾನ್ಯ, ಅಭೇದಪ್ರಾಧಾನ್ಯ, ಮತ್ತು ಭೇದಾಭೇದಾತುಲ್ಯತ್ವ. ಇವುಗಳಲ್ಲಿ ಮೊದಲನೆಯದು ವ್ಯತಿರೇಕದಲ್ಲಿಯೂ, ಎರಡನೆಯದು ರೂಪಕದಲ್ಲಿಯೂ, ಮೂರನೆಯದು ಉಪಮೆಯಲ್ಲಿಯೂ, ಕಂಡು ಬರುತ್ತವೆ. ಎರಡು ವಸ್ತುಗಳು ಒಂದೇ ತೆರನಾಗಿ ಕಾಣುವಂತೆ ಮಾಡುವುದು ಸಾಧರ್ಮ್ಯ. ಇದರಲ್ಲಿ ಭೇದಾಭೇದತುಲ್ಯತ್ತ್ವವೆಂದರೆ ಭೇದ ಮತ್ತು ಅಭೇದಗಳು ಸಮಾನವಾಗಿ ಇರುವದೆಂದರ್ಥ. ''ಮುಖವು ಚಂದ್ರನಂತೆ ರಮಣೀಯವಾಗಿದೆ'' ಎಂದಾಗ ವಾಸ್ತವವಾಗಿ ಮುಖ ಮತ್ತು ಚಂದ್ರಗಳು ಬೇರೆ ಬೇರೆ. ಆದರೆ ಅವುಗಳಲ್ಲಿರುವ ರಮಣೀಯತೆ ಎಂಬ ಧರ್ಮ ಒಂದೇ. ಅಂದರೆ ಧರ್ಮದ ದೃಷ್ಟಿಯಿಂದ ಅಭೇದ; ವಸ್ತು ದೃಷ್ಟಿಯಿಂದ ಭೇದ. ಎರಡು ವಸ್ತುಗಳಲ್ಲಿ ಕೆಲವು ಅಂಶಗಳು ಸಾಮಾನ್ಯ; ಇನ್ನು ಕೆಲವು ಒಂದನ್ನೊಂದು ಬೇರ್ಪಡಿಸುವ ವಿಶೇಷಗಳು. ಇದು ಮಹತ್ವದ ಅಂಶ. ''ತೊಂಡೆಯ ಹಣ್ಣಿನಂತೆ ತುಟಿ'' ಎಂದಾಗ ಧರ್ಮವು ಲುಪ್ತವಾಗಿದೆ. ಅಂಥ ಸಂದರ್ಭದಲ್ಲಿ ತುಟಿಯು ನೂರಕ್ಕೆ ನೂರರಷ್ಟು ತೊಂಡೆಯ ಹಣ್ಣನ್ನು ಹೋಲುವುದೆಂದು ತಿಳಿಯಲು ಅವಕಾಶವಿದೆ. ಅದನ್ನು ನಿಯಂತ್ರಿಸುವ ತತ್ವ, ಭೇದಾಭೇದತುಲ್ಯತ್ತ್ವ, ಸಮಾನತೆ ಇರುವುದು ನಿರ್ದಿಷ್ಟ ಧರ್ಮಗಳಲ್ಲಿ ಮಾತ್ರವೇ ಹೊರತು ಸಮಗ್ರ ವಸ್ತುವಿನಲ್ಲಲ್ಲ. ವಸ್ತು ವೈಶಿಷ್ಟ್ಯವನ್ನು ರಕ್ಷಿಸುತ್ತಲೇ ಅಭೇದವನ್ನು ಕಲ್ಪಿಸಲಾಗಿರುತ್ತದೆ.

ಉಪಮೆಯಲ್ಲಿ ವ್ಯಕ್ತವಾಗುವ ಸಾಧಾರಣ ಧರ್ಮವು ಮೂರು ತೆರನಾದುದೆಂದು ರುಯ್ಯಕ ಹೇಳುತ್ತಾನೆ. 'ಅನುಗಾಮಿತ್ವ, ವಸ್ತುಪ್ರತಿವಸ್ತುಭಾವ', ಮತ್ತು ಬಿಂಬ ಪ್ರತಿಬಿಂಬಭಾವ.' ಹೋಲಿಸಿರುವ ವಸ್ತುಗಳಲ್ಲಿ ಒಂದೇ ಧರ್ಮವಿದ್ದು ಅದನ್ನು ಒಂದೇ ಬಾರಿಗೆ ಹೇಳಿದ್ದರೆ ಅದು ಅನುಗಾಮಿಧರ್ಮ. ಅಂದರೆ ಅನುಸರಿಸಿಕೊಂಡು ಹೋಗುವಂಥದ್ದು.

ಉದಾ :–

**ಎಳಗಿಳಿವಿಂಡಿನಂತೆ ಮಿಳಿರ್ದಾಡುವ ತುಂಬಿಯ ಬಿಂಬಲಂತೆ ಕೆಂ**
**ದಳಿರ್ಗಳ ತೊಂಗಲಂತೆ ನಡೆನೋಡುವ ಪೆಂಡಿರ ನೋಟದಂತೆ ಪೂ ।**
**ಗಳ ಪೊಸಗಂಪಿನೊಳ್ ಪೊರೆದುತೀಡುವ ತಂಬೆಲರಂತೆ ತೋರ್ಪ ತಿಂ**
**ಗಳ ಸಿರಿಯಂತೆ ಸೋಲಿಸದೆ ಕಾವನ ಕಬ್ಬಮದಾರನಾದೊಡಂ ॥**

ಇಲ್ಲಿ ಕಾವನಕಬ್ಬ , ಉಪಮೇಯ; ಎಳಗಿಳಿವಿಂಡು, ತುಂಬಿಯಬಿಂಬಲ, ತಳಿರ್ಗಳ ತೊಂಗಲು, ಪೆಂಡಿರನೋಟವೇ, ಮುಂತಾದವು ಉಪಮಾನಗಳು. ''ಸೋಲಿಸದೆ'' ಎಂಬುದರಿಂದ ಸಾಧಾರಣ ಧರ್ಮವು ವ್ಯಕ್ತವಾಗಿದೆ. ಇದನ್ನು ಕವಿ ಹೇಳಿದ್ದು ಒಂದೇ ಬಾರಿಗೆ ಅದು ಎಲ್ಲ ಉಪಮಾನಗಳಿಗೂ ಸಮಾನವಾಗಿ ಅನ್ವಯಿಸುತ್ತದೆ. ಈ ತೆರನಾಗಿ ಧರ್ಮವು ಅನುಗಾಮಿಯಾಗಿದ್ದರೆ ಅದು ಅನುಗಾಮಿತ್ವ. ಇದು ದೀಪಕದ ರೀತಿ. ಇಲ್ಲಿರುವ ಉಪಮಾವಾಚಕ ಪದಗಳನ್ನು ತೆಗೆದು ಹಾಕಿದರೆ ಇದೇ ದೀಪಕವಾಗುತ್ತದೆ.

ವಸ್ತು ಪ್ರತಿವಸ್ತುಭಾವವೆಂದರೆ ಎರಡು ವಸ್ತುಗಳಲ್ಲಿನ ಸಾಧಾರಣ ಧರ್ಮವನ್ನು ಭಿನ್ನಭಿನ್ನ ಶಬ್ದಗಳಿಂದ ಪ್ರತಿಪಾದಿಸುವುದು.

ಉದಾ :–

**ಆ ವಿಕಟಾಂಗನೊಳಿಂತಾ**
**ದೇವಿಗೆ ರುಚಿಯಾಗೆ ರತಿಫಲಾಸ್ವಾದನದೊಳ್**
**ಬೇವಂ ಮೆಚ್ಚಿದ ಕಾಗೆಗೆ**
**ಮಾವಿಳಿದಪ್ಪಂತೆ ಪತಿಯೊಳಿಳಿದಾಯ್ತು ಮನಂ ||**

ಇಲ್ಲಿ ಅಷ್ಟಾವಂಕನನ್ನು ಮೆಚ್ಚಿದ ಅಮೃತಮತಿಗೆ ಯಶೋಧರನಲ್ಲಿ ಆಸಕ್ತಿ ತೊಲಗಿತೆಂಬುದನ್ನು ಹೇಳುತ್ತ ''ಬೇವಂ ಮೆಚ್ಚಿದ ಕಾಗೆಗೆ ಮಾವಿಳಿದಪ್ಪಂತೆ ಪತಿಯೊಳಿಳಿದಾಯ್ತು ಮನಂ'' ಎಂದಿದ್ದಾನೆ. ಉಪಮಾನವಾದ ಕಾಗೆಗೂ ಉಪಮೇಯವಾದ ದೇವಿಗೂ ಇರುವುದು ''ಇಳಿದಾಗುವುದು'' ಎಂಬ ಒಂದೇ ಧರ್ಮ. ಅದನ್ನೇ ಕವಿಯು ಎರಡು ಬಾರಿ ಹೇಳಿದ್ದಾನೆ. ಇಲ್ಲಿ ಶಬ್ದ– ಅರ್ಥಗಳ ಪುನರುಕ್ತಿಯಿದೆ. ಶಬ್ದ ಪುನರುಕ್ತಿಯನ್ನು ಸಂಸ್ಕೃತದಲ್ಲಿ ದೋಷವೆಂದು ಪರಿಗಣಿಸುತ್ತಾರಾದರೂ ಕನ್ನಡ ಕವಿಗಳು ಅದಕ್ಕೆ ಅಷ್ಟು ಮಹತ್ವವನ್ನು ಕೊಟ್ಟಿಲ್ಲ. ಹಾಗಾಗಿ ಒಂದೇ ಧರ್ಮವನ್ನು ಎರಡು ಬಾರಿ ಹೇಳಿದ ಕಾರಣ ಇಲ್ಲಿ ವಸ್ತು ಪ್ರತಿವಸ್ತುಭಾವವಿದೆ. ಇನ್ನೊಂದು ಉದಾಹರಣೆ: –

**ಧ್ಯಾನದೊಳಭವಂ ನೆರೆದಿನಿ**
**ಸಾನುಮನರೆ ಮುಚ್ಚಿ ಕಣ್ಗಳಂ ನಿಶ್ಚಳಿತಂ |**
**ತಾನಿರ್ದು ಮರೆದು ಕಂದಿದ**
**ಮೀನಂ ತಳ್ತಾಡದಿರ್ದ ಮಡುವಂ ಪೋಲ್ತಂ ||**

—— ಪಂ.ಭಾ.೧೧–೪೬.

ಇಲ್ಲಿ ಶಿವಧ್ಯಾನದಲ್ಲಿ ನಿರತನಾಗಿ ಅರ್ಧನಿಮೀಲಿತ ನೇತ್ರನಾದ ಅರ್ಜುನನ ವರ್ಣನೆಯಿದೆ. ಧ್ಯಾನಸ್ಥನಾಗಿ ಅರೆಮುಚ್ಚಿದ ಕಣ್ಗಳುಳ್ಳ ಅವನು ''ನಿಶ್ಚಳಿತ'' ನಾಗಿದ್ದು ಮೀನುಗಳು ಅಲುಗಾಡದಿದ್ದ ಮಡುವಿನಂತೆ ಇದ್ದನೆಂದು ಕವಿ ವರ್ಣಿಸುತ್ತಾನೆ. ಇಲ್ಲಿ ''ನಿಶ್ಚಳಿತ'' ಮತ್ತು ''ತಳ್ತಾಡದಿರ್ದ'' ಎಂಬ ಪದಗಳು ಬೇರೆಯಾಗಿದ್ದರೂ ಅರ್ಥವೊಂದೇ. ಅವು ಸೂಚಿಸುವ ಧರ್ಮವೊಂದೇ. ಇದು ವಸ್ತುಪ್ರತಿವಸ್ತುಭಾವ. ಅರ್ಥಾತ್ ಸದೃಶ ವಸ್ತುಗಳ ಮುಖಾಮುಖಿ.

ಪ್ರತಿವಸ್ತೂಪಮೆಯೆಂಬ ಅಲಂಕಾರದ ರೀತಿ ಇದು.

ಬಿಂಬ ಪ್ರತಿಬಿಂಬ ಭಾವವೆಂದರೆ ನಿಜವಾಗಿಯೂ ಭಿನ್ನವಾದ ಧರ್ಮಗಳನ್ನು ಬೇರೆ ಬೇರೆ ಶಬ್ದಗಳಿಂದ ವ್ಯಕ್ತಪಡಿಸಿದರೂ ಅವುಗಳಲ್ಲಿ ಸಾದೃಶ್ಯವು ತೋರುವುದು.

ಉದಾ:-

**ಬೆಳಗುವ ಸೊಡರೊಳ್ ಸೊಡರಂ**
**ಬೆಳಗಿ ಪಲರ್ ಕೊಂಡು ಪೋಗೆಯುಂ ಕುಂದದೆ ಪ।**
**ಜ್ಜಳಿಸುವ ವೋಲ್ ಜಗಮೆಲ್ಲಂ**
**ಕೊಳಲುಂ ತವದಿತ್ತು ಮೆರೆವ ನಿರಿವ ಬೆಡಂಗಂ ॥**

— ಗದಾ.೧-೬.

ಬೆಳಗುವ ದೀಪವೊಂದರಿಂದ ದೀಪಗಳನ್ನು ಹಚ್ಚಿಕೊಂಡು ಹೋದರೂ ಆ ದೀಪದ ಕಾಂತಿಯು ಹೇಗೆ ಕುಂದುವುದಿಲ್ಲವೋ ಹಾಗೆ ಜಗತ್ತಿಗೆಲ್ಲ ಕೊಟ್ಟು ಇರಿವ ಬೆಡಂಗನು ಮೆರೆಯುವನು ಎಂದು ಕವಿಯು ವರ್ಣಿಸುತ್ತಾನೆ. ಇಲ್ಲಿ ಉಪಮಾನವಾದ ಸೊಡರಿನಲ್ಲಿ ''ಪಜ್ಜಳಿಸುವುದು'' ಎಂಬ ಧರ್ಮವಿದ್ದರೆ , ಉಪಮೇಯಲ್ಲಿ '' ಮೆರೆಯುವುದು '' ಎಂಬ ಧರ್ಮವಿದೆ. ವಾಸ್ತವವಾಗಿ ಇವೆರಡೂ ಬೇರೆ ಬೇರೆ. ಅವುಗಳನ್ನು ಬೇರೆ ಬೇರೆ ಶಬ್ದಗಳಿಂದ ವ್ಯಕ್ತಗೊಳಿಸಲಾಗಿದೆ . ಆದರೂ ಅವುಗಳಲ್ಲಿ ಒಂದು ತೆರನಾದ ಹೋಲಿಕೆಯಿದೆ. ಇದು ಬಿಂಬಪ್ರತಿಬಿಂಬ ಭಾವ. ಇದು ದೃಷ್ಟಾಂತದ ರೀತಿ .

ಯಾವುದೇ ವರ್ಣನೆಯಲ್ಲಿ ಕವಿಪ್ರತಿಭೆ, ಲೋಕರೂಢಿಯ ''ಶ್ರೇಷ್ಠ'', ''ಕನಿಷ್ಠ'' ಗಳ ಕಲ್ಪನೆಯನ್ನು ಅವಲಂಬಿಸಿ ಸಾದೃಶ್ಯಗಳನ್ನು ಸಂಘಟಿಸುವುದಿಲ್ಲ. (ಕಾವ್ಯಾರ್ಥ ಚಿಂತನ. ಪುಟ ೬೨) ಎಂಬ ಡಾ॥ ಜಿ. ಎಸ್. ಶಿವರುದ್ರಪ್ಪನವರ ಮಾತು ಸತ್ಯವಾದುದು. ಇದನ್ನು ಆಲಂಕಾರಿಕರೂ ತತ್ವಶಃ ಒಪ್ಪಿಕೊಂಡವರೇ. ಕಾವ್ಯಾದರ್ಶವನ್ನು ಬರೆದ ದಂಡಿಯು ಉಪಮಾಚಕ್ರವೆಂದು ಕರೆದು ರೂಪೋಪಮೆ, ಗುಣೋಪಮೆ, ಎಂದು ಮುಂತಾಗಿ ಉಪಮೆಗಳನ್ನು ವಿಭಾಗಿಸುತ್ತಾನೆ. ಅಂದರೆ ಎರಡು ವಸ್ತುಗಳಲ್ಲಿ ಕವಿಯು ಕಾಣುವ ಸಾದೃಶ್ಯವು ರೂಪವಾಗಿರಬಹುದು, ಗುಣವಾಗಿರಬಹುದು, ಭಾವವಾಗಿರಬಹುದು, ಅಥವಾ ಇನ್ನೇನೋ ಆಗಿರಬಹುದು. ಕವಿಯನ್ನು ನಿಯಂತ್ರಿಸುವುದು ಶಕ್ಯವಿಲ್ಲ. ಅವರು ನಿರಂಕುಶಮತಿಗಳು ಎಂಬ ಅಭಿಪ್ರಾಯವೇ ಇದೆ. ಉಪಮಾನವು ಉಪಮೇಯಕ್ಕಿಂತ ಅಧಿಕವಾಗಿರಬೇಕು ಎಂಬ ಮಾತಿಗೆ ಯಾವುದೇ ಸಂದರ್ಭದಲ್ಲಿಯೂ ಉಪಮೇಯವು ಹೀನವೆಂಬ ಭಾವವು ಬರಕೂಡದೆಂಬ ಅಭಿಪ್ರಾಯವಿದ್ದಂತಿದೆ. ಅವು ಯಥೋಚಿತವಾಗಿರಬೇಕು. ಜನ್ನನ ಯಶೋಧರಚರಿತೆಯ ಹಿಂದಿನ ಉದಾಹರಣೆಯಲ್ಲಿ ರಾಣಿಯನ್ನು, ಬೇವನ್ನು ಮೆಚ್ಚಿದ ಕಾಗೆಗೆ ಹೋಲಿಸಿದ್ದಾನೆ ಕವಿ. ಅವಳ ಚರ್ಯೆಗೆ ತಕ್ಕ ಉಪಮಾನ ಅದು. ಅತಿಶಯತೆಯ ಅಂಶ ಕಾವ್ಯಕ್ಕೆ ಅವಶ್ಯ. ಕವಿವಿವಕ್ಷೆಗನುಗುಣವಾಗಿ ಉಪಮಾನದ ಆಧಿಕ್ಯದ ತೀರ್ಮಾನವಾಗುತ್ತದೆ .

ಉಪಮಾವಾಚಕವು ನಾಲ್ಕನೆಯದು. ಉಪಮಾನ – ಉಪಮೇಯಗಳ ಸಾದೃಶ್ಯವನ್ನು ಸೂಚಿಸುವ ಪದ ಇದು. ಅಂತೆ, ಹಾಗೆ, ಅಂತೆವೋಲ್, ಅಂತಿರೆವೋಲ್, ಸದೃಶ, ಸಮ, ವೋಲ್ವ, ತುಲ್ಯ, ಉಪಮ, – ಹೀಗೆ ಸಾದೃಶ್ಯವಾಚಕಗಳ ಪಟ್ಟಿ ಬೆಳೆಯುತ್ತದೆ. ಉಪಮಾನ ಉಪಮೇಯಗಳ ನಡುವಿನ ಸಾದೃಶ್ಯವನ್ನು ಭೇದಿಸುವುದು ಇವುಗಳ ಕೆಲಸ. ಕೆಲವು ಪದಗಳು ಕಿವಿಗೆ ಬಿದ್ದೊಡನೆ ಸಾದೃಶ್ಯ ಜ್ಞಾನವಾಗುತ್ತದೆ. ಇನ್ನು ಕೆಲವು ಪದಗಳನ್ನು ಬಳಸಿದಾಗ ಅವುಗಳ ಅರ್ಥದ ಬಲದಿಂದ ಸಾದೃಶ್ಯ ಜ್ಞಾನವಾಗುತ್ತದೆ. ಹೀಗೆ ಉಪಮಾವಾಚಕಗಳನ್ನು ಆಧರಿಸಿ ಕಾವ್ಯಪ್ರಕಾಶಕಾರನಾದ ಮಮ್ಮಟನು ಉಪಮೆಯಲ್ಲಿ ಶ್ರೌತೀ, ಆರ್ಥೀ, ಎಂಬ ವಿಭಾಗವನ್ನು ಕಲ್ಪಿಸುತ್ತಾನೆ. ಅದೇ ಆಧಾರದ ಮೇಲೆ ಅಂತೆ, ಅಂತಿರೆ, ಅಂತೆವೋಲ್, ಹಾಗೆ, ಮುಂತಾದ ಶಬ್ದಗಳಿಂದ ಥಟ್ಟನೇ ಸಾದೃಶ್ಯ ಜ್ಞಾನವೊದಗುವುದೆಂದೂ ತೆರಂ, ಮಾಳ್ಕೆ, ಸದೃಶ, ಸಮ, ತುಲ್ಯ ಮುಂತಾದ ಪದಗಳನ್ನು ಬಳಸಿದಾಗ ಅರ್ಥದ ಬಲದ ಮೇಲೆ ಔಪಮ್ಯ ಜ್ಞಾನವಾಗುವದೆಂದೂ ಹೇಳಬಹುದು. ಆದರೆ ಈ ತತ್ವವು ಅತ್ಯಂತ ಸೂಕ್ಷ್ಮವಾದುದರಿಂದ ಮನವರಿಕೆಯಾಗುವುದು ಕಷ್ಟ. ಉಪಮಾವಾಚಕ ಪದಗಳು ಸಾದೃಶ್ಯವನ್ನು ಬೋಧಿಸುವ ಕೆಲಸವನ್ನು ಮಾಡುತ್ತವೆ ಎಂಬುದನ್ನು ತಿಳಿದರೆ ಸಾಕು.

## ಪೂರ್ಣೋಪಮೆ :–

ಉಪಮೆಯ ಪ್ರಮುಖ ಘಟಕಗಳಾದ ಉಪಮಾನ, ಉಪಮೇಯ, ಸಾಧಾರಣಧರ್ಮ, ಹಾಗೂ ಉಪಮಾವಾಚಕ ಪದಗಳೆಲ್ಲವನ್ನೂ ಹೇಳಿದ್ದರೆ ಅದು ಪೂರ್ಣೋಪಮೆಯೆನಿಸಿಕೊಳ್ಳುತ್ತದೆ. ಇಲ್ಲಿ ಎಲ್ಲವೂ ವಾಚ್ಯವಾಗಿರುವುದರಿಂದ ಸಾದೃಶ್ಯದ ಚಮತ್ಕಾರವನ್ನು ಸವಿಯುವುದಷ್ಟೇ ಓದುಗನ ಕೆಲಸ.

ಉದಾ :–

**ಬಳಸಿ ಸುಳಿದಾಡಿ ಕಾಲ್ವಿಡಿ**
**ದೆಳಸಿ ಕಲಾಲಾಪವೊದವೆ ಜನನಿಯ ಮೊಲೆ ವಾ।**
**ಲ್ಗಳನುಣ್ಬ ಶಿಶುಗಳಂತಿರೆ**
**ಕಳವೆಯ ಪಾಲ್ದೆನೆಯನುಂಡವು ಗಿಳಿಗಳ್ ॥**

ಇಲ್ಲಿ ಭತ್ತದ ಹಾಲ್ದೆನೆಗಳನ್ನುಣ್ಣುವ ಗಿಳಿಗಳನ್ನು, ಮೊಲೆ ಹಾಲನ್ನು ಕುಡಿಯುವ ಶಿಶುಗಳಿಗೆ ಹೋಲಿಸುತ್ತಾನೆ. ಕವಿ ಗಿಳಿಗಳು ಉಪಮೇಯ; ಶಿಶುಗಳು ಉಪಮಾನ. ಬಳಸುವುದು, ಸುಳಿದಾಡುವುದು, ಕಾಲ್ವಿಡಿಯುವುದೇ, ಮುಂತಾದ ಕ್ರಿಯೆಗಳು – ಗಿಳಿಗಳಿಗೂ ಶಿಶುಗಳಿಗೂ ಸಮಾನವಾಗಿರುವುದರಿಂದ ಸಾಧಾರಣ ಧರ್ಮ 'ಅಂತಿರೆ' ಎಂಬುದು ಉಪಮಾವಾಚಕ. ಹೀಗೆ ಉಪಮೆಯ ಎಲ್ಲ ಅಂಶಗಳೂ ಇಲ್ಲಿ ಶಬ್ದೋಪಾತ್ತ ಅಥವಾ ವಾಚ್ಯವಾಗಿರುವುದರಿಂದ ಇದು ಪೂರ್ಣೋಪಮೆಯಾಗಿದೆ. ಸಾಧರ್ಮ್ಯ ನಿರೂಪಣೆಯ ಸಂದರ್ಭದಲ್ಲಿ ಕೊಟ್ಟ ಉದಾಹರಣೆಗಳೂ ಇದೇ ವರ್ಗಕ್ಕೆ ಸೇರುತ್ತವೆ ಎಂಬುದನ್ನು ಗಮನಿಸಿ.

ಮಮ್ಮಟನು ಪೂರ್ಣೋಪಮೆಯನ್ನು ಶ್ರೌತೀ ಮತ್ತು ಆರ್ಥೀ ಎಂದು ವಿಭಾಗಿಸಿ ಪುನಃ ಅವುಗಳಲ್ಲಿ ವಾಕ್ಯ, ಸಮಾಸ, ತದ್ಧಿತಗಳ, ಆಧಾರದ ಮೇಲೆ ಮೂರು ಉಪವಿಭಾಗಗಳನ್ನು ಹೇಳಿ ಪೂರ್ಣೋಪಮೆಯು ಆರು ತೆರನಾದುದೆನ್ನುತ್ತಾನೆ. ಅವು ವ್ಯಾಕರಣವನ್ನು ಆಧರಿಸಿದ ಭೇದಗಳಾಗಿ ಕಾಣುತ್ತವೆ. ಕನ್ನಡದ ಸಂದರ್ಭದಲ್ಲಿ ಅಷ್ಟು ಉಪಯುಕ್ತವೂ ಅಲ್ಲವೆಂದು ಭಾವಿಸಿ ಭೇದಗಳನ್ನು ವಿಸ್ತರಿಸುವ ಗೋಜಿಗೆ ಹೋಗಿಲ್ಲ.

## ಲುಪ್ತೋಪಮೆ :–

ಉಪಮೆಯ ಪ್ರಮುಖವಾದ ನಾಲ್ಕು ಅಂಶಗಳನ್ನು ಎಲ್ಲ ಸಂದರ್ಭಗಳಲ್ಲೂ ಕವಿಗಳು ಸ್ಪಷ್ಟವಾಗಿ ಹೇಳುವುದಿಲ್ಲ. ಕೆಲವನ್ನು ಮಾತ್ರ ಹೇಳಿ ಇನ್ನು ಕೆಲವನ್ನು ನಮ್ಮ ಊಹೆಗೆ ಬಿಡುತ್ತಾರೆ. ಇಂಥವುಗಳಿಗೆ ಲುಪ್ತೋಪಮೆಯೆಂದು ಹೆಸರು. ಈ ಪ್ರಕಾರವನ್ನು ಯಾಸ್ಕನೇ ಗುರುತಿಸಿದ್ದ. ಅವನು ಲುಪ್ತೋಪಮೆಗಳನ್ನು ಅರ್ಥೋಪಮೆಯೆಂದೂ ಕರೆಯುತ್ತಾನೆ. (**ತಾನಿಪುನರಿಮಾನಿ ಅರ್ಥೋಪಮಾನಿ ಇತ್ಯೇವಮಾಚಕ್ಷತೇ** – ನಿರುಕ್ತ). ಅಲ್ಲಿನ ಉಪಮೆಯು ಅರ್ಥದ ಬಲದಿಂದ ಗೃಹೀತವಾಗುವುದರಿಂದ ಅರ್ಥೋಪಮೆಯೆಂಬುದು ಸಾರ್ಥಕವಾದ ಹೆಸರು. ಆದರೆ ಆಲಂಕಾರಿಕರಲ್ಲಿ ಆ ಹೆಸರು ಅಷ್ಟೊಂದು ಪ್ರಿಯವಾಗಲಿಲ್ಲ. ಭಾಮಹನೇನೋ ಲುಪ್ತೋಪಮೆಯ ಇರವನ್ನು ಸೂಚಿಸಿದ್ದಾನೆ. ಆದರೆ ಸ್ಪಷ್ಟವಾಗಿ ಅದನ್ನೊಂದು ಪ್ರಕಾರವೆಂದು ಸ್ವೀಕರಿಸಿಲ್ಲ. ವಾಮನ ತನ್ನ ಕಾವ್ಯಾಲಂಕಾರ ಸೂತ್ರವೃತ್ತಿಯಲ್ಲಿ "ಲುಪ್ತೋಪಮೆ"ಯನ್ನು ಹೆಸರಿಸುತ್ತಾನೆ. ಆದರೆ ವಿಸ್ತಾರವಾದ ಚರ್ಚೆಯಿಲ್ಲ. ಮುಂದೆ ಉದ್ಭಟ ಲುಪ್ತೋಪಮೆಯ ಹನ್ನೆರಡು ಭೇದಗಳನ್ನು ಹೇಳಿದರೆ, ಮಮ್ಮಟ ಹತ್ತೊಂಭತ್ತು ಭೇದಗಳನ್ನು ಹೇಳಿದ್ದಾನೆ. ಕುವಲಯಾನಂದಕಾರನು ಎಂಟು ಭೇದಗಳನ್ನು ಹೇಳಿದ್ದಾನೆ. ಮಮ್ಮಟನನ್ನು ಅನುಸರಿಸಿ ವಿಶ್ವನಾಥಾದಿಗಳು ಭೇದಗಳನ್ನು ವಿಸ್ತರಿಸಿದ್ದಾರೆ. ಈ ಕುರಿತು ಅಪ್ಪಯ್ಯ ದೀಕ್ಷಿತರು ಹೇಳುವ ಮಾತು ಗಮನಾರ್ಹವಾಗಿದೆ. –ಅವು ಶಬ್ದ ಶಾಸ್ತ್ರ, ವ್ಯುತ್ಪತ್ತಿಕೌಶಲವನ್ನು ಪ್ರದರ್ಶಿಸಲು ಪ್ರಯೋಜನಕಾರಿಯಾಗುತ್ತವೆಯೇ ಹೊರತು ಅಲಂಕಾರ ಶಾಸ್ತ್ರದಲ್ಲಿ ಅವುಗಳಿಂದ ಹೆಚ್ಚಿನ ಪ್ರಯೋಜನವಿಲ್ಲ. (**ಶಬ್ದಶಾಸ್ತ್ರವ್ಯುತ್ಪತ್ತಿಕೌಶಲ ಮಾತ್ರ ಪ್ರಯೋಜನೋ ನಾತೀವಾಲಂಕಾರ ಶಾಸ್ತ್ರೇ ವ್ಯುತ್ಪಧ್ಯತಾಮರ್ಹತಿ – ಚಿತ್ರಮಿಮಾಂಸಾ**). ಹಾಗಾಗಿ ಲುಪ್ತೋಪಮೆಯ ಕೆಲವು ಪ್ರಭೇದಗಳನ್ನು ಮಾತ್ರ ಗಮನಿಸಲಾಗಿದೆ.

## (೧) ಧರ್ಮಲುಪ್ತೋಪಮೆ :–

ಉಪಮಾನ, ಉಪಮೇಯ ಮತ್ತು ಉಪಮಾವಾಚಕಗಳನ್ನು ಹೇಳಿ, ಸಾಧಾರಣ ಧರ್ಮ –ವನ್ನು ವಾಚ್ಯವಾಗಿಸದೆ ನಮ್ಮ ಊಹೆಗೆ ಬಿಟ್ಟಿದ್ದರೆ ಅದು ಧರ್ಮಲುಪ್ತೋಪಮೆಯಾಗುತ್ತದೆ.

ಉದಾ :–

**ಅನಿಮಿಷಚಾಪದಂತೆ ಸಿರಿಶಾರದ ನೀರ ಕಾಂತಿಯಂತೆ ಯೌ**
**ವನದೆಸಕಂ ತೃಣಾಗ್ರಗತವಾರಿಕಣಿಕಾಗಣದಂತೆ ಸಂದಜೀ।**

ವನಮದರಿಂ ಭವಪ್ರಭವಜೀವಿಗೆ ನಿರ್ಮಲಧರ್ಮ ಮಾರ್ಗದೊಳ್
ಮನಮೊಸೆದಾಗಳುಂ ನಡೆಯವೇಳ್ಪುದು ವಿಶ್ವ ಮೃಗೇಂದ್ರವಲ್ಲಭಾ ॥

ಇಲ್ಲಿ ಅನೇಕ ಉಪಮೆಗಳಿವೆ, ಅನಿಮಿಷ ಚಾಪದಂತೆ ಸಿರಿ; ಶಾರದ ನೀರಕಾಂತಿಯಂತೆ ಯೌವನದೆಸಕಂ, 'ತೃಣಾಗ್ರಗತ ವಾರಿಕಣಿಕಾಗಣದಂತೆ ಸಂದ ಜೀವನಂ;' ' ಅನಿಮಿಷ ಚಾಪದಂತೆ ಸಿರಿ' ಎಂಬಲ್ಲಿ ಅನಿಮಿಷಚಾಪ ಉಪಮಾನ; ಸಿರಿ – ಉಪಮೇಯ, ಅಂತೆ ಉಪಮಾವಾಚಕ, ಇಲ್ಲಿ ಧರ್ಮವನ್ನು ಹೇಳಿಲ್ಲ. ಧರ್ಮವು ಇಲ್ಲವೆಂದು ಇದರ ಅರ್ಥವಲ್ಲ. ಅದನ್ನು ನಾವೇ ಊಹಿಸಿಕೊಳ್ಳಬೇಕು. ಇಲ್ಲಿರುವ ಎಲ್ಲ ಉಪಮೆಗಳಲ್ಲಿಯೂ ಅನುಗಾಮಿಯಾದ ಸಾಧಾರಣ ಧರ್ಮ 'ಅಸ್ಥಿರತೆ ' ಅದನ್ನು ಕವಿ ಹೇಳಿಲ್ಲವಾದುದರಿಂದ ಇದು ಧರ್ಮಲುಪ್ತೋಪಮೆಯೆನಿಸುತ್ತದೆ.

## (೨) ವಾಚಕಲುಪ್ತೋಪಮೆ :–

ಉಪಮಾವಾಚಕ ಪದವನ್ನು ಹೇಳಿರದಿದ್ದರೆ ಅದು ವಾಚಕ ಲುಪ್ತೋಪಮೆ. ಉದಾ:–''ಬಳಿಕವಂ ಕಂಡನುತ್ಪಳದಳ ಶ್ಯಾಮಕೋಮಲತರ ಶರೀರನಂ ಲಕ್ಷ್ಮೀ ಮನೋಹಾರನಂ'' ಇಲ್ಲಿ ''ಉತ್ಪಲ ದಳದಂತೆ ಶ್ಯಾಮಕೋಮಲ ಶರೀರ'' ಎಂದು ಅರ್ಥ ಮಾಡಿಕೊಳ್ಳಬೇಕು. ಕವಿಯು ''ಅಂತೆ'' ಎಂಬ ಶಬ್ದವನ್ನು ವಾಚ್ಯವಾಗಿ ಹೇಳಿಲ್ಲ. ಮೇಲಿನ ಉದಾಹರಣೆಯ ಅನಿಮಿಷಚಾಪದಂತೆ ಎಂಬುದನ್ನು ''ಅನಿಮಿಷಚಾಪಸಿರಿ'' ಎಂದರೆ ವಾಚಕಲುಪ್ತೋಪಮೆಯಾಗುತ್ತದೆ.

## (೩) ಧರ್ಮವಾಚಕಲುಪ್ತೋಪಮೆ :–

ಸಾಧಾರಣ ಧರ್ಮ ಮತ್ತು ಉಪಮಾವಾಚಕ ಪದಗಳು ಲುಪ್ತವಾದರೆ ಅದು ಧರ್ಮವಾಚಕಲುಪ್ತೋಪಮೆಯಾಗುತ್ತದೆ. ಉದಾ:–'' ಅಲರ್ಗಣ್ '' –ಇದನ್ನು ಅಲರಂತಿರ್ಪಕಣ್ –ಅಲರ್ಗಣ್ ಎಂಬುದಾಗಿ ವಿಗ್ರಹಿಸಬೇಕಾಗುತ್ತದೆ. ಸಮಸ್ತಪದದಲ್ಲಿ ವಾಚಕಪದ ಕಾಣುವುದಿಲ್ಲ, ಧರ್ಮವಂತೂ ಉಕ್ತವಾಗಿಯೇ ಇಲ್ಲ. ಇಂಥ ಪ್ರಯೋಗಗಳಿರುವಾಗ ಇದು ಉಪಮೆಯೋ? ರೂಪಕವೋ? ಎಂಬ ಸಂದೇಹ ಬಂದರೆ ಆಶ್ಚರ್ಯವಿಲ್ಲ. ಇಂಥ ಸಂದರ್ಭದಲ್ಲಿ ಇತರ ಪದಗಳನ್ನು ಗಮನಿಸಿ ತೀರ್ಮಾನಿಸಬೇಕೆಂಬುದು ಕ್ರಮ. ಉದಾ:–ಮುಖಚಂದ್ರ ಇದನ್ನು ''ಮುಖವು ಚಂದ್ರನಂತಿದೆ'' ಎಂದೂ '' ಮುಖವೇ ಚಂದ್ರನೆಂದೂ'' ವಿಗ್ರಹವನ್ನು ಹೇಳಬಹುದು. ಇದರಲ್ಲಿ ಯಾವುದು ಸರಿ? ಎಂದರೆ ವಾಕ್ಯವನ್ನು ಗಮನಿಸಬೇಕು. ಉದಾ :– ಮುಖಚಂದ್ರನು ಉದಿಸಿದನು; ಇಲ್ಲಿ ಕ್ರಿಯಾಪದವು ಚಂದ್ರನಿಗೆ ಸಂಬಂಧಿಸಿದೆ. ಹೀಗೆ ಧರ್ಮವು ಉಪಮಾನಕ್ಕೆ ಸೇರಿದ್ದರೆ ಅದು ರೂಪಕ. ಬದಲಿಗೆ ಉಪಮೇಯಕ್ಕೆ ಸೇರಿದ್ದರೆ ಉಪಮೆ. ಉದಾ :–ಮುಖಚಂದ್ರನಲ್ಲಿ ನಗೆ ತುಂಬಿದೆ. ಇಲ್ಲಿ ನಗುವು ಮುಖಕ್ಕೆ ಸೇರಿದ ಧರ್ಮ. ಹೀಗೆ ವಾಕ್ಯದಲ್ಲಿರುವ ಇತರ ಪದಗಳ ನೆರವಿನಿಂದ ಉಪಮೆಯೋ ರೂಪಕವೋ ಎಂಬುದನ್ನು ತೀರ್ಮಾನಿಸಬೇಕೆಂಬುದು ಆಲಂಕಾರಿಕರ ಅಭಿಪ್ರಾಯ.

ಹಾಗಾದರೆ ಮುಖಚಂದ್ರ ಎಂಬುದು ಚಂದ್ರಮುಖ ಎಂದಾದಲ್ಲಿ?

## (೪) ಧರ್ಮೋಪಮೇಯ ಲುಪ್ತೋಪಮೆ :-

ಸಾಧಾರಣ ಧರ್ಮ ಹಾಗೂ ಉಪಮೇಯಗಳೆರಡೂ ಲುಪ್ತವಾಗಿದ್ದಲ್ಲಿ ಈ ಪ್ರಕಾರವು ಸಂಭವಿಸುತ್ತದೆ.

ಎಳ್ಳನಿತು ನಿನ್ನ ಮಾತಂ ಕೇಳ್ವೆನೆಂದೆಣಿಕೆ
ಗೊಳ್ಳದಿರು ಪರಿಚರ್ಯೆ ಮನೆ ವಾಳ್ತೆಯೆಂದೆಂಬ
ತಳ್ಳಿಯವಳಲ್ಲ ನೀನೆಂದುದಂ ಮಾಡೆನೆಂದಾ ಚಂಡಿ ಚಂಡಿಗೊಳಲು ।
ಮುಳ್ಳಿಡಿದ ಮರನೇರಿದಂತಾದುದಿಹ ಪರಕೆ
ದೂಳ್ಳಿತಾದಪುದೆ ಬಂದುದು ತಪೋಹಾನಿಯೆಂ
ದಳ್ಳಿಯೋಳ್ ಕೋಲ್ಗೊಂಡ ತೆರದೊಳುದ್ದಾಲಕಂ ಚಿಂತಿಪಂ ಪ್ರತಿದಿನದೊಳು॥

ಇಲ್ಲಿ ''ಮುಳ್ಳಿಡಿದ ಮರನೇರಿದಂತಾದುದು'' ಎಂಬಲ್ಲಿರುವ ಉಪಮೆಯನ್ನು ಗಮನಿಸಿ. ಮುಳ್ಳಿಡಿದ ಮರನೇರುವುದು -ಉಪಮಾನ ಅಂತೆ ಉಪಮಾವಾಚಕ. ಚಂಡಿಯನ್ನು ಮದುವೆಯಾದುದು ಉಪಮೇಯವಾಗಿದ್ದರೂ ಅದನ್ನು ಕವಿ ಹೇಳಿಲ್ಲ. ''ಹಿಂಸೆಗೊಳಗಾಗುವುದು'' ಎಂಬುದು ಧರ್ಮವಾಗಿದ್ದರೂ ಅದನ್ನು ಕವಿಯು ಹೇಳಿಲ್ಲ.

## ೫) ವಾಚಕಧರ್ಮೋಪಮಾನಲುಪ್ತೋಪಮೆ:-

ಉಪಮಾವಾಚಕಪದ, ಸಾಧಾರಣಧರ್ಮ, ಹಾಗೂ ಉಪಮಾನಗಳು ಲುಪ್ತವಾದರೆ ಈ ಪ್ರಕಾರವು ಸಂಭವಿಸುತ್ತದೆ. ಉದಾ:-'' ಮರಾಳಗಮನೆ'' ಎಂದರೆ ಮರಾಳದ ಗಮನದಂತೆ ಗಮನವುಳ್ಳವಳು ಎಂದರ್ಥ. ಈ ಅರ್ಥವನ್ನು ಕೊಡುವ ಈ ಸಮಾಸದಲ್ಲಿ ಧರ್ಮವಾಗಲಿ ವಾಚಕವಾಗಲಿ, ಕಂಡುಬರುವುದಿಲ್ಲ ''ಮರಾಳ '' ಎಂಬ ಪದವಿದೆಯಾದರೂ ''ಮರಾಳಗಮನ'' ಎಂಬ ಪದವಿಲ್ಲದ್ದರಿಂದ ಉಪಮಾನವೂ ಕಾಣುವುದಿಲ್ಲ. ಆದ್ದರಿಂದ ಇದನ್ನು ಧರ್ಮೋಪಮಾನವಾಚಕಲುಪ್ತೋಪಮೆಯೆಂದು ಹೇಳುತ್ತಾರೆ. ಈ ಪ್ರಕಾರವನ್ನು ಸಮರ್ಥಿಸಲು ಬೇಕಾದುದು ವ್ಯಾಕರಣ ಕೌಶಲ.

ಲುಪ್ತೋಪಮೆಯನ್ನು ಕುರಿತು ಡಾ॥ ಜಿ. ಎಸ್. ಶಿವರುದ್ರಪ್ಪನವರು ಹೇಳುವ ಮಾತುಗಳು ಮನನೀಯವಾಗಿವೆ. '' ನಮ್ಮ ಆಲಂಕಾರಿಕರು ಕೇವಲ '' ಲುಪ್ತೋಪಮೆ'' ಯೆಂದು ಕರೆದರೇ ವಿನಾ, ಪೂರ್ಣೋಪಮೆ ಹೀಗೆ ತನ್ನ ಒಂದೊಂದು ಅಂಗವನ್ನು ಲುಪ್ತಮಾಡಿಕೊಂಡಿದ್ದರಿಂದ ಅಭಿವ್ಯಕ್ತಿಯಲ್ಲಿ ಕಾಣಿಸಿಕೊಂಡ ಬದಲಾವಣೆಗಳನ್ನಾಗಲೀ , ಅದಕ್ಕೂ ಮಿಗಿಲಾಗಿ ಅಭಿವ್ಯಕ್ತಿಗೆ ಏನು ಲಾಭವಾಯಿತೆಂದಾಗಲೀ, ಗುರುತಿಸಲಿಲ್ಲ. ಅವರೇ ಮುಂದುವರೆದು ಅಭಿಪ್ರಾಯ -ಪಡುವಂತೆ , ಪೂರ್ಣೋಪಮೆಯು ಲುಪ್ತೋಪಮೆಯಾಗುತ್ತಾ ನಡೆದಂತೆ ಸಶಕ್ತವಾಗುತ್ತ ಹೋಗುತ್ತದೆ.

ಆಯ್ದ ಕೆಲವು ಉದಾಹರಣೆಗಳಲ್ಲಿ ಇಂಥ ಪ್ರಕ್ರಿಯೆಯನ್ನು ಕಾಣಬಹುದು. ಆದರೆ

ಸಾರ್ವತ್ರಿಕವಾಗಿ ಅಂಥ ಅಭಿಪ್ರಾಯಕ್ಕೆ ಬರುವುದು ಕಷ್ಟವಾಗುತ್ತದೆ. ಲುಪ್ತೋಪಮೆಯ ಶ್ರೇಷ್ಠತೆಯನ್ನು ಪ್ರತಿಪಾದಿಸುತ್ತ "ಈ ದೃಷ್ಟಿಯಿಂದ ಪೂರ್ಣೋಪಮೆ" ತೀರಾ ತಾರ್ಕಿಕವಾದದ್ದು ಮಾತ್ರವಲ್ಲ ಪ್ರಾಥಮಿಕವಾದದ್ದು ಎಂದರೂ ನಡೆಯುತ್ತದೆ. (ಕಾವ್ಯಾರ್ಥ ಚಿಂತನ.ಪುಟ ೬೭) ಎಂದೂ ಹೇಳಿಬಿಡುತ್ತಾರೆ. ಇದು ಸ್ವಲ್ಪ ಅವಸರದ ತೀರ್ಮಾನವಾಗಿ ಕಾಣುತ್ತದೆ. ಸಹೃದಯರ ಕಲ್ಪನೆಗೆ ಹೆಚ್ಚು ಅವಕಾಶ ಮಾಡಿಕೊಡುವಂಥದ್ದು ಉತ್ತಮ ಕಾವ್ಯವೆಂಬುದನ್ನು ತಾರ್ಕಿಕ ಅಂತ್ಯಕ್ಕೆ ಒಯ್ಯಲಾಗದಷ್ಟೇ? ಆಗ ಕವಿಯು ಪೂರ್ಣವಾಗಿ ಸಹೃದಯನ ಊಹೆಗೆ ಬಿಟ್ಟದ್ದು ಶ್ರೇಷ್ಠ ಕಾವ್ಯವಾದೀತು. ಅಂದರಿಷ್ಟೇ ಪೂರ್ಣೋಪಮೆಗೆ ತನ್ನದೇ ಆದ ಸೊಗಸು ಇದ್ದೇ ಇದೆ. ಪೂರ್ಣೋಪಮೆಯೆಂದು ಕರೆದದ್ದು ಘಟಕಗಳು ವಾಚ್ಯವಾಗಿವೆಯೆಂಬುದರಿಂದ ಮಾತ್ರ. ಉಪಮೆಯ ಸ್ವಾರಸ್ಯವಿರುವುದು ಘಟಕಗಳು ವಾಚ್ಯವೋ , ಅಲ್ಲವೋ ಎಂಬುದರಲ್ಲಿಲ್ಲ. ಅರ್ಥಾಂತರಗಳನ್ನು ಹೊಳೆಯಿಸುವ ಶಕ್ತಿಯಲ್ಲಿ, ಕವಿಪ್ರತಿಭೆಯ ಪರಾಕಾಷ್ಠೆಯಲ್ಲಿ ಮೂಡಿಬಂದ ಉಪಮೆ ತನ್ನ ಚೆಲುವನ್ನಷ್ಟೇ ಉಣಬಡಿಸಿ ತೃಪ್ತವಾಗುವುದಿಲ್ಲ. ಅದರಿಂದಾಚೆಗೂ ವಿಸ್ತರಿಸುತ್ತದೆ.

ಉಪಮೆಯ ವಿವೇಚನೆಯಲ್ಲಿ ಉಪಮಾನೋಪಮೇಯಗಳ ಮುಖಾಮುಖಿಯ ಬಗ್ಗೆ ರುಯ್ಯಕ ನಮ್ಮ ಗಮನ ಸೆಳೆಯುತ್ತಾನೆ. ಉಪಮಾನ ಉಪಮೇಯಗಳನ್ನು ಎದುರು ಬದುರಾಗಿ ನಿಲ್ಲಿಸಿ ಅವುಗಳಲ್ಲಿ ಒಂದೊಂದರ ಅವಯವವನ್ನೂ ಇನ್ನೊಂದರ ಅವಯವದೊಡನೆ ಹೋಲಿಸಿ ಅವಯವಗಳ ಸಾಮ್ಯವನ್ನು ಎತ್ತಿತೋರುವ ಬಗೆ ಇದು. ಅವನು ಸಾಧರ್ಮ್ಯದ ಬಗೆಗಳನ್ನು ಹೇಳುವಾಗ ಅನುಗಾಮಿತ್ವ, ವಸ್ತು, ಪ್ರತಿವಸ್ತುಭಾವ, ಮತ್ತು ಬಿಂಬ – ಪ್ರತಿಬಿಂಬಭಾವಗಳ ಬಗೆಗೆ ಹೇಳುವುದು ಉಪಮೆಯ ಸ್ವರೂಪ ವಿವೇಚನೆಯಲ್ಲಿ ಮಹತ್ವದ ಹೆಜ್ಜೆಯಾಗಿದೆ. ಉಪಮೆಯ ಘಟಕಗಳ ವಾಚ್ಯಾವಾಚ್ಯತೆಯನ್ನು ಆಧರಿಸಿದ ಪೂರ್ಣಾ, ಲುಪ್ತಾ, ಎಂಬ ಭೇದಗಳಿಗಿಂತ ಆಂತರಂಗಿಕವೆನ್ನಬಹುದಾದುದು ಇದು. ಮುಂದೆ ಪಂಡಿತರಾಜ ಜಗನ್ನಾಥನು ಸಾಮಾನ್ಯ ಧರ್ಮದ ಆಧಾರದ ಮೇಲೆ ಐದು ಭೇದಗಳನ್ನು ಹೇಳುವುದರ ಮೂಲಕ ಉಪಮೆಯ ಕ್ಷೇತ್ರವನ್ನು ಮತ್ತಿಷ್ಟು ವಿಸ್ತರಿಸಿದ್ದಾನೆ.

ಉಪಮೆಯಲ್ಲಿ ಅವಯವ – ಅವಯವಿಭಾವವು ಇರಲು ಸಾಧ್ಯ . ಬಿಂಬ – ಪ್ರತಿಬಿಂಬಭಾವದ ಮುಂದಿನ ಹೆಜ್ಜೆ ಇದು. ಈ ಕಲ್ಪನೆಯನ್ನು ಸ್ವೀಕರಿಸಿದ ಜಗನ್ನಾಥ ಉಪಮೆಯಲ್ಲಿಯೂ ರೂಪಕದಂತೆ ಸಾವಯವ – ನಿರವಯವಗಳ ಭೇದಗಳ ಬಗೆಗೆ ಹೇಳುತ್ತಾನೆ. ಅಂದರೆ ಉಪಮೇಯದ ಒಂದೊಂದು ಅವಯವಕ್ಕೂ ಉಪಮಾನವನ್ನು ಹೇಳುತ್ತ ಹೋಗುವ ರೀತಿ ಇದು. ಈ ಆಧಾರದ ಮೇಲೆ ಎಂಟು ಭೇದಗಳನ್ನು ಜಗನ್ನಾಥನು ಹೇಳುತ್ತಾನೆ.

ಮಾಲೋಪಮೆಯನ್ನು ಆಲಂಕಾರಿಕರು ಅಲ್ಲಗಳೆದಿಲ್ಲ. ಭಾಮಹ, ವಾಮನನಂಥವರು ಸ್ವಲ್ಪ ರಾಗವೆಳೆದಿದ್ದರೂ ಮುಂದಿನವರು ಮಾಲೋಪಮೆಯನ್ನು ಸ್ವೀಕರಿಸಿದರು. ಆದರೆ ಅದಕ್ಕೆ ಪ್ರತ್ಯೇಕವಾದ ಲಕ್ಷಣವನ್ನು ಹೇಳುವ ಅಗತ್ಯವಿಲ್ಲವೆಂದು ಮಮ್ಮಟ ವಾದಿಸುತ್ತಾನೆ. ಮಾಲೋಪಮೆಯು ಮಾಲಾಕಾರವಾಗಿರುತ್ತದೆ ; ಒಂದೇ ಉಪಮೇಯವನ್ನು ಹಲವಾರು

ಉಪಮಾನಗಳಿಂದ ಬಣ್ಣಿಸಲಾಗುತ್ತವೆ ಎನ್ನುವುದನ್ನು ಬಿಟ್ಟರೆ, ಅದು ಉಪಮೆಯ ಎಲ್ಲ ಲಕ್ಷಣಗಳನ್ನೂ ಒಳಗೊಂಡಿದೆ. ಉಪಮೆಯನ್ನು ತಿಳಿದವನಿಗೆ ಮಾಲೋಪಮೆಯನ್ನು ತಿಳಿಯುವುದು ಕಷ್ಟವಲ್ಲವೆಂಬ ಧೋರಣೆ ಅಲ್ಲಿದೆ. ಮಾಲೋಪಮೆಯು ಉಪಮೆಯ ಒಂದು ಪ್ರಭೇದವಷ್ಟೇ?

ಒಟ್ಟಾರೆ ಚಮತ್ಕಾರಿಯಾದ ಅಥವಾ ಸುಂದರವಾದ ಸಾದೃಶ್ಯವಿರುವುದನ್ನು ಉಪಮೆಯೆಂದು ಕರೆಯಬಹುದು. ಅಂದರೆ ಎರಡು ವಸ್ತುಗಳ ನಡುವಿನ ಸಾದೃಶ್ಯದ ಸೊಗಸನ್ನು ಎತ್ತಿತೋರುವುದೇ ಕವಿಯ ಗುರಿಯಾಗಿರಬೇಕು. ಅಲ್ಲಿ ಉಪಮಾನವು ಲೋಕಪ್ರಸಿದ್ಧವಾದುದೇ ಇರಬೇಕೆಂಬ ಆಗ್ರಹವಿಲ್ಲ. ವಾಮನನೇ ಉಪಮಾನವನ್ನು ಲೌಕಿಕೀ ಮತ್ತು ಕಲ್ಪಿತಾ ಎಂದು ಹೇಳಿದ್ದಾನೆ. ಅಲ್ಲಿ ಮನಂಬುಗುವ ಸಾದೃಶ್ಯವಿರಬೇಕಾದುದು ಮುಖ್ಯ.

ಉದಾ:–

**ತಿಂತಿಣಿಯಾಗೆ ನಟ್ಟ ಕಣೆಯೊಳ್ ನೆಲಮುಟ್ಟದೆ ಮಯ್ಯೊಳತ್ತಮಿ**
**ತ್ತಂ ತೆರೆದಿರ್ದ ಪುಣ್ಗಳೆಸೆವಕ್ಕರದಂತಿರೆ ನೋಡಿಕಲ್ಲಿಮೆಂ।**
**ಬಂತೆವೊಲಿರ್ದನಟ್ಟವಣೆಕೋಲ್ಗಳ ಮೇಲೆಸೆದಿರ್ದ ವೀರಸಿ**
**ದ್ಧಾಂತದ ಶಾಸನಂ ಬರೆದ ಪೊತ್ತಗೆಯಂ ತಮರಾಪಗಾತ್ಮಜಂ॥**

—— ಪಂ. ಭಾ. ೧೧, ೪೬

ಇದು ಶರಶಯ್ಯೆಯಲ್ಲಿ ಮಲಗಿದ ಭೀಷ್ಮನ ಚಿತ್ರ. ಮೈಗೆಲ್ಲ ಬಾಣ ತಾಗಿ ಬಾಣಗಳ ಮೇಲೆ ಮಲಗಿದ್ದ ಭೀಷ್ಮನ ಮೈ ಮೇಲಿನ ತೆರೆದ ಹುಣ್ಣುಗಳು ಅಕ್ಷರಗಳಂತಿರಲಾಗಿ ಭೀಷ್ಮನು ಅಟ್ಟವಣೆಯ ಕೋಲ್ಗಳ ಮೇಲಿದ್ದ ವೀರಸಿದ್ಧಾಂತದ ಶಾಸನವನ್ನು ಬರೆದ ಹೊತ್ತಗೆಯಂತಿದ್ದನೆಂದು ಕವಿ ವರ್ಣಿಸುತ್ತಾನೆ. ತೆರೆದ ಹುಣ್ಣುಗಳನ್ನು ಅಕ್ಷರಗಳಿಗೆ ಹೋಲಿಸುವುದಾಗಲಿ ಭೀಷ್ಮನನ್ನು ವೀರಸಿದ್ಧಾಂತದ ಹೊತ್ತಿಗೆಗೆ ಹೋಲಿಸುವುದಾಗಲಿ ವಿನೂತನವಾದ ಕ್ರಮ. ಇಲ್ಲಿನ ಉಪಮಾನಗಳು ಲೋಕಪ್ರಸಿದ್ಧವೆನ್ನುವಂತಿಲ್ಲ. ಆದರೆ ರಮ್ಯತೆಗೆ ಕೊರತೆಯುಂಟೆ?

ಉಪಮೆಯ ಗರ್ಭದಲ್ಲಿರುವ ಸ್ವಾರಸ್ಯ ಸಂತತಿ ಸಹಸ್ರಾರು. ಅವೆಲ್ಲವನ್ನೂ ಪ್ರತ್ಯೇಕವಾಗಿ ಗಣಿಸುವುದಾಗಲಿ, ಲಕ್ಷಿಸುವುದಾಗಲಿ, ಲಾಕ್ಷಣಿಕನ ಮಿತಿಗೆ ಮೀರಿದ್ದು. ಒಬ್ಬೊಬ್ಬ ಕವಿಯೂ ತನ್ನದೇ ಆದ ವಿಶಿಷ್ಟ ಮುದ್ರೆಯನ್ನೊತ್ತಿ ಉಪಮೆಯ ಕ್ಷಿತಿಜವನ್ನು ವಿಸ್ತರಿಸುತ್ತಾನೆ ಎಂಬ ಅಭಿಪ್ರಾಯವನ್ನು ಲಾಕ್ಷಣಿಕರು ತಾಳಿದರೂ ಅದರ ಭೇದಗಳನ್ನು ಪಟ್ಟಿ ಮಾಡುವ ಪ್ರಯತ್ನವನ್ನು ಕೈಬಿಡಲಿಲ್ಲ. ಉಪಮೆಯ ಪಟ್ಟಿಗೆ ಹೊಸ ಭೇದಗಳು ಈಗಲೂ ಸೇರುತ್ತಿವೆ. ನಾವು ಸೇರಿಸಲು ಬಯಸಿದರೆ ಅದು ಉಪಮೆಯ ಹಿರಿಮೆ.

## ಉಪಮೆಯ ಮಹತ್ವ.

ಈ ಹಿರಿಮೆಯನ್ನು ಅರಿತ ಆಲಂಕಾರಿಕರು ಉಪಮೆಯನ್ನು ನಾನಾ ವಿಧವಾಗಿ

ಕೊಂಡಾಡಿದ್ದಾರೆ. ರಾಜಶೇಖರನು ಅದನ್ನು ಅಲಂಕಾರ ಶಿರೋರತ್ನವೆಂದೂ, ಕವಿವಂಶದ ಮಾತೆಯೆಂದೂ ಕರೆಯುತ್ತಾನೆ. ಅಪ್ಪಯ್ಯ ದೀಕ್ಷಿತ ಅದನ್ನು ಕಾವ್ಯರಂಗದಲ್ಲಿ ವಿವಿಧ ವೇಷ ತೊಟ್ಟು ನಲಿವ ನರ್ತಕಿಗೆ ಹೋಲಿಸುತ್ತಾನೆ. ವಾಮನನಂತೂ ಉಪಮಾ ಮತ್ತು ಉಪಮಾ ಪ್ರಪಂಚವೆಂದು ವಿಂಗಡಿಸಿ ಅಲಂಕಾರಗಳೆಲ್ಲಾ ಉಪಮೆಯನ್ನು ಆಧರಿಸಿವೆಯೆಂದು ಹೇಳುತ್ತಾನೆ. ಎಲ್ಲ ಅಲಂಕಾರಗಳು ಉಪಮೆಯನ್ನಾಧರಿಸಿವೆಯೆಂಬುದನ್ನು ಒಪ್ಪುವುದು ಕಷ್ಟಕರವಾದರೂ ಅಲಂಕಾರಗಳ ದೊಡ್ಡದೊಂದು ಗುಂಪು ಉಪಮೆಯ ಸಂತಾನವೆಂದು ಹೇಳಲು ತೊಂದರೆಯಿಲ್ಲ. ಈ ಅಲಂಕಾರಗಳಲ್ಲೆಲ್ಲ ಉಪಮೆಯ ಛಾಯೆ ಇದ್ದೇ ಇದೆ. ಅವುಗಳಲ್ಲಿ ಕೆಲವನ್ನು ಗಮನಿಸಬಹುದು.

| | |
|---|---|
| ಮುಖವು ಚಂದ್ರನಂತೆ ಸುಂದರವಾಗಿದೆ | ಉಪಮಾ |
| ಮುಖವು ಮುಖದಂತೆಯೇ | ಅನನ್ವಯ |
| ಮುಖವು ಚಂದ್ರನಂತೆ ; ಚಂದ್ರನು ಮುಖದಂತೆ | ಉಪಮೇಯೋಪಮಾ |
| ಇದು ಮುಖವೋ? ಚಂದ್ರನೋ ? | ಸಂದೇಹ |
| ಇದು ಬಹುಶಃ ಚಂದ್ರನೇ ಇರಬೇಕು. | ಉತ್ಪ್ರೇಕ್ಷೆ |
| ಇದು ಮುಖವಲ್ಲ ಚಂದ್ರ | ಅಪಹ್ನುತಿ |
| ಮುಖವೇ ಚಂದ್ರ | ರೂಪಕ |
| ಆಹಾ ! ಚಂದ್ರ ! | ಅತಿಶಯೋಕ್ತಿ |
| ಚಂದ್ರನನ್ನು ನೋಡಿ ಮುಖವನ್ನು ನೆನೆಯುತ್ತೇನೆ. | ಸ್ಮರಣ |
| ಮುಖಚಂದ್ರನಿಂದ ದುಃಖವು ದೂರವಾಗುತ್ತದೆ. | ಪರಿಣಾಮ |
| ಮುಖವನ್ನು ಕಂಡು ಚಂದ್ರನೆಂದು ಚಕೋರಗಳು ನಲಿಯುತ್ತವೆ | ಭ್ರಾಂತಿಮಾನ್ |
| ಮುಖದಿಂದ ಚಂದ್ರ ಕಮಲಗಳು ಸೋತವು | ತುಲ್ಯಯೋಗಿತಾ |
| ರಾತ್ರಿಯಲ್ಲಿ ಚಂದ್ರ ಮತ್ತು ಮುಖಗಳು ಮುದಗೊಳಿಸುತ್ತವೆ. | ದೀಪಕ |
| ನಿನ್ನ ಮುಖದಿಂದ ನನಗೆ ತೋಷ : ಚಕೋರಗಳಿಗೆ ಚಂದ್ರನಿಂದ ಹರ್ಷ | ಪ್ರತಿವಸ್ತೂಪಮಾ |
| ನೆಲದ ಮೇಲೆ ಮುಖ ; ಆಕಾಶದಲ್ಲಿ ಚಂದ್ರ | ದೃಷ್ಟಾಂತ |
| ಮುಖವು ಚಂದ್ರನ ಕಾಂತಿಯನ್ನು ತಳೆದಿದೆ. | ನಿದರ್ಶನಾ |
| ಕಳಂಕರಹಿತವಾದ ಮುಖವು ಚಂದ್ರನನ್ನು ಮೀರಿಸಿದೆ. | ವ್ಯತಿರೇಕ |
| ಮುಖವಿರುವಾಗ ಚಂದ್ರನೇಕೆ ? | ಪ್ರತೀಪ |
| ಚಂದ್ರನೊಡನೆ ನಿನ್ನ ಮುಖವು ಮುದಗೊಳಿಸುತ್ತದೆ. | ಸಹೋಕ್ತಿ |
| ಮುಖವಿಲ್ಲದೇ ಚಂದ್ರನು ಸೊಗಸಲ್ಲ. | ವಿನೋಕ್ತಿ |
| ಮುಖ ಚಂದ್ರಗಳೆರಡೂ ಕಲಾಭಿರಾಮಗಳು | ಶ್ಲೇಷ |

ಕಲಾಭಿರಾಮವಾದ ಪೂರ್ಣಮುಖ — ಸಮಾಸೋಕ್ತಿ

ಮುಖವನ್ನು ಕಂಡು ಚಂದ್ರನೆಂದು ಚಕೋರಗಳು,

ಕಮಲವೆಂದು ದುಂಬಿಗಳು ನಲಿದವು. — ಉಲ್ಲೇಖ

ಚಂದ್ರನೇ ನಮಸ್ಕಾರ: ಪ್ರಸನ್ನನಾಗಿರುವೆ – ಅಪ್ರಸ್ತುತ ಪ್ರಶಂಸಾ

ಹೀಗೆ ಈ ಅಲಂಕಾರಗಳಲ್ಲೆಲ್ಲಾ ಸಾದೃಶ್ಯವು, ವಾಚ್ಯವೋ, ವ್ಯಂಗ್ಯವೋ, ಆಗಿರುವದನ್ನು ಕಾಣಬಹುದು. ಅವುಗಳಲ್ಲಿ ಭೇದವಿರುವುದು ಸಾದೃಶ್ಯವನ್ನು ವ್ಯಕ್ತಪಡಿಸುವ ವಿಧಾನದಲ್ಲಿ ಇದನ್ನೇ ಉಕ್ತಿ ವೈಚಿತ್ರ್ಯವೆಂದು ಕರೆಯುತ್ತೇವೆ. ಅವುಗಳ ಸೊಗಸಿನಲ್ಲಿನ ತಾರತಮ್ಯವನ್ನು ಕುರಿತು ಅಲಂಕಾರ ಶಾಸ್ತ್ರವು ಮೌನವಾಗಿದ್ದೆ. ರಸಾನುಗುಣವಾಗಿ ಬಂದಾಗ ಯಾವುದೇ ಅಲಂಕಾರವಾದರೂ ವಿಶೇಷವಾದ ವಿಚ್ಛಿತ್ತಿ ಅಥವಾ ಸೊಬಗನ್ನು ತಳೆಯುತ್ತದೆ ಎಂಬುದು ಅಭಿಪ್ರಾಯ.

**ಅನ್ಯ ಉದಾಹರಣೆಗಳು:**

ಮುರುಕು ಜೋಪಡಿಯೊಳಗೆ
ಮಳೆಯ ನೀರಿಳಿವಂತೆ
ಇಳಿಯುತಿವೆ ತಲೆಯೊಳಗೆ ನೂರು ಚಿಂತೆ;
ಒಳಗೆಲ್ಲ ಕೆಸರು, ಬರಿಕೆಸರು: ಅದರೊಳಗು
ಮೊಳೆಯುತಿವೆ ಆಸೆಗಳು ಹಸುರಿನಂತೆ

— ಜಿ. ಎಸ್. ಶಿವರುದ್ರಪ್ಪ. 'ದೀಪದಹೆಜ್ಜೆ' – ಪು. ೧೭

ಬನದ ಕರಡಿಯ ಹಾಗೆ
ಚಿಕ್ಕ ಮಕ್ಕಳ ಹೊತ್ತು
ಗಂಡನ್ನ ಸಾಕಿದಳು ಕಾಸು ಗಂಟಿಕ್ಕಿದಳು
ನೊಂದ ನಾಯಿಯ ಹಾಗೆ ಬೈದು ಗೊಣಗಿ ಗುದ್ದಾಡಿದಳು

— ಪಿ. ಲಂಕೇಶ್ 'ತಲೆಮಾರು' – ಪು–೫೩

ಒಣಗಿದೆಲೆಯ ರಾಶಿ ನಡುವೆ
ಬಿದ್ದ ಕಿಡಿಯ ರೀತಿ
ಜ್ವಾಲೆಯಾಗಿ ಹರಡುತಿತ್ತು
ಹಿಂದೆ ನಿನ್ನ ಪ್ರೀತಿ

— ಎಸ್. ಎಸ್. ಲಕ್ಷ್ಮೀನಾರಾಯಣಭಟ್ಟ 'ಬಂದೇ ಬರತಾವ ಕಾಲ' – ಪುಟ –೭

ಕಾಲುವೆಯಲಿ ಕೆಂಪಾಗಿಹ ಮಳೆನೀರು,
ಇಡ್ಲಿಯ ಮುಳುಗಿಸಿ ಬಿಟ್ಟಿದೆ ಕಮ್ಮಗೆ ಸಾಂಬಾರು,
ಎಣ್ಣೆ ಹಚ್ಚಿ ಎರೆದಂತಿದೆ ಉದ್ದಕು ಡಾಂಬರು ರಸ್ತೆ

— ಚೆನ್ನವೀರ ಕಣವಿ – 'ಸಮಗ್ರಕಾವ್ಯ' – (ಪು – ೩೩೬)

## ೨. ಅನನ್ವಯ

ಉಪಮಾನ ಉಪಮೇಯ ಭಾವಗಳೆರಡೂ ಒಂದರಲ್ಲಿಯೇ ಇದ್ದರೆ ಅದು ಅನನ್ವಯ
(ಏಕಸ್ಯೈವೋಪಮಾನೋಪಮೇಯತ್ವೇ ಅನನ್ವಯ : —ಕುವಲಯಾನಂದ )

ಅನನ್ವಯವೆಂದರೆ ಅನ್ವಯವಿಲ್ಲದಿರುವುದು ಎಂದರ್ಥ . ಅಂದರೆ ಬೇರೊಂದು ಉಪಮಾನದೊಡನೆ ಸಂಬಂಧವನ್ನು ಹೊಂದಿಲ್ಲವೆಂಬ ಅರ್ಥದಲ್ಲಿ ಇದನ್ನು ಅನನ್ವಯವೆಂದು ಕರೆಯಲಾಗಿದೆ. ಇಲ್ಲಿ ಒಂದೇ ವಸ್ತುವು ಉಪಮೇಯವಾಗಿಯೂ ಉಪಮಾನವಾಗಿಯೂ ಇರುತ್ತದೆ. ಇದು ಸ್ವಲ್ಪ ವಿಚಿತ್ರವಾದುದು. ಹಿಂದೆಯೇ ನಾವು ಗ್ರಹಿಸಿದಂತೆ ಉಪಮಾನವು ಗುಣಾಧಿಕ್ಯವುಳ್ಳ ಶ್ರೇಷ್ಠ ವಸ್ತುವಾಗಿರುತ್ತದೆ. ಅಂಥ ವಸ್ತುವಿನೊಂದಿಗೆ ಉಪಮೇಯವನ್ನಿಟ್ಟು ಉಪಮೇಯದ ಗುಣವನ್ನು ಎತ್ತರಿಸಲಾಗುತ್ತದೆ. ಅದು ಉಪಮೇಯದ ಹಿಂದಿನ ಉದ್ದೇಶ. ಆದರೆ ಇಲ್ಲಿ ಒಂದೇ ವಸ್ತುವು ಎರಡು ಪಾತ್ರಗಳನ್ನು ನಿಭಾಯಿಸುತ್ತದೆ. ಆಲಂಕಾರಿಕರಲ್ಲಿ ಮೊದಲಿಗನಾದ ಭಾಮಹನೇ ಗುರುತಿಸುವಂತೆ '**ಅಸಾದೃಶ್ಯ ವಿವಕ್ಷೆ**' ಸದೃಶ ವಸ್ತುವಲ್ಲವೆಂಬುದನ್ನು ನಿರೂಪಿಸುವುದು ಇಲ್ಲಿನ ಉದ್ದೇಶ. ಮುಂದಿನ ಆಲಂಕಾರಿಕರು ಇದನ್ನೇ 'ದ್ವಿತೀಯಸದೃಶ ವ್ಯವಚ್ಛೇದ' '**ದ್ವಿತೀಯ ಸಬ್ರಹ್ಮಚಾರಿ ನಿವೃತ್ತಿ**' ಎಂದೆಲ್ಲ ಹೇಳುತ್ತಾರೆ. ದ್ವಿತೀಯ ಸದೃಶ ವ್ಯವಚ್ಛೇದದ ಗುರಿಯಿಲ್ಲದೆಯೇ ಕೇವಲ ಒಂದೇ ವಸ್ತುವನ್ನು ಉಪಮಾನೋಪಮೇಯಗಳನ್ನಾಗಿ ಹೇಳಿದರೆ ಅಲ್ಲಿ ಅನನ್ವಯವಿದೆಯೆಂದು ಹೇಳಲಾಗದು. ಉದಾ :–'' ಕೆಂಪು ಮತ್ತು ಹಳದಿ ಹೂಗಳಿಂದ ಕೂಡಿದ ಈ ಪರ್ವತವು ಒಮ್ಮೊಮ್ಮೆ ಕಾಳ್ಗಿಚ್ಚು ಆವರಿಸಿರುವ ಈ ಪರ್ವತವನ್ನೇ ಹೋಲುತ್ತದೆ . ಇಲ್ಲಿ ಉಪಮಾನೋಪಮೇಯಗಳೆರಡೂ ಒಂದೇ ವಸ್ತುವಾದರೂ ದ್ವಿತೀಯ ಸದೃಶ ವ್ಯವಚ್ಛೇದದ ಗುರಿಯಿಲ್ಲದಿರುವುದರಿಂದ ಅನನ್ವಯವಾಗಲಾರದು . ತುಂಬ ಪ್ರಸಿದ್ಧವಾದ ವಾಲ್ಮೀಕಿ ರಾಮಾಯಣದ ಈ ಶ್ಲೋಕವನ್ನು ನೋಡಿ . –

**ಗಗನಂ ಗಗನಾಕಾರಂ ಸಾಗರಸ್ಸಾಗರೋಪಮಃ ।**
**ರಾಮ ರಾವಣಯೋರ್ಯುದ್ಧಂ ರಾಮರಾವಣಯೋರಿವ ॥**

ಗಗನವು ಗಗನದಂತೆಯೇ; ಸಾಗರವು ಸಾಗರದಂತೆಯೇ; ರಾಮರಾವಣರ ಯುದ್ಧವು ರಾಮರಾವಣರ ಯುದ್ಧದಂತೆಯೇ. ಅನನ್ವಯವು ಹುಟ್ಟುವುದು ವಿಶಿಷ್ಟವಾದ ಮಾನಸಿಕ ಸ್ಥಿತಿಯಲ್ಲಿ . ವಸ್ತುವೊಂದನ್ನು ಕಂಡು ಮನಸ್ಸು ಮುಗ್ಧವಾದಾಗ ತತ್ಸಮಾನ ವಸ್ತುವಿನ ಹೋಲಿಕೆಯನ್ನು ನಿರಾಕರಿಸುತ್ತದೆ. ಪ್ರಪಂಚದಲ್ಲಿ ನಿಜವಾಗಿಯೂ ಏಕೈಕವೆನಿಸುವ ವಸ್ತುಗಳು ಇರುವುದೂ ಇದಕ್ಕೆ ಕಾರಣವಾಗಿದೆ . ಮೇಲಿನ ಉದಾಹರಣೆಯಲ್ಲಿ ನೋಡುವಂತೆ ಗಗನಕ್ಕೆ ಸದೃಶ ವಸ್ತು ಯಾವುದೂ ಇಲ್ಲ; ಸಾಗರಕ್ಕೆ ಸಮಾನವಾದುದೂ ಇಲ್ಲ; ಇಂಥ ಸ್ಥಿತಿಯಲ್ಲಿ ಇನ್ನೊಂದರೊಡನೆ ಹೋಲಿಸುವ ಪ್ರಸಕ್ತಿಯಾದರೂ ಎಲ್ಲಿದೆ ? ಅಂತೆಯೇ ವಸ್ತುವಿನ ಪರಿಣಾಮವು ಗಾಢವಾಗಿ ಆದ ಸ್ಥಿತಿಯಲ್ಲಿ ಸದೃಶವಾದ ಮತ್ತೇನೂ ಜ್ಞಾಪಕಕ್ಕೆ ಬರಲಾರದು.

ಉದಾ :-

''ಅಂಥಿಂಥ ಹೆಣ್ಣು ನೀನಲ್ಲ.
ನಿನ್ನಂಥ ಹೆಣ್ಣು ಇನ್ನಿಲ್ಲ''

ಅಲಂಕಾರಿಕರು ಚರ್ಚಿಸುವ ಮತ್ತೊಂದು ಪ್ರಶ್ನೆ – ಉಪಮಾನ ಉಪಮೇಯಗಳು ಸಾದೃಶ್ಯವನ್ನು ಆಧರಿಸುತ್ತವೆ. ಸಾದೃಶ್ಯವಿದೆ ಎನ್ನಬೇಕಾದರೆ ಭೇದವಿರಬೇಕಾದುದು ಅವಶ್ಯ. ವಸ್ತುಭೇದವೇ ಇಲ್ಲವಾದಾಗ ಸಮಾನತೆಯನ್ನು ಹೇಳುವುದಾದರೂ ಹೇಗೆ ? ಈ ಪ್ರಶ್ನೆಗೆ ಉತ್ತರವಾಗಿ ಒಂದೇ ವಸ್ತುವನ್ನು ಬೇರೆ ಬೇರೆಯಾಗಿ ಕಲ್ಪಿಸಿಕೊಳ್ಳುವುದು . ಅದು ಸಾದೃಶ ನಿರೂಪಣೆಯ ಸಲುವಾಗಿ. ಈ ಭೇದವು ಆಹಾರ್ಯವೇ ಹೊರತು ನಿಜವಾದುದಲ್ಲವೆಂದು ಹೇಳಲಾಗಿದೆ.

**ದೊರೆಗಾಣೆಂ ನಿನಗೆ ಜಿನೇ**
**ಶ್ವರ ಪೆರರಂ ನಿನಗೆ ನೀನೆ ದೊರೆಯೆನಿಪ್ಪೆಮಂ ।**
**ದರ ಗಿರಿಗೆ ಮಂದರಾದ್ರಿಯೆ**
**ದೊರೆ ಜಲಧಿಗಗಾಧ ಜಲಧಿದೊರೆ ಪೆರವೊಳವೇ ॥**

ಇಲ್ಲಿ ಕವಿಯು ಜಿನೇಶ್ವರನಿಗೆ ಸಮಾನರಾರೂ ಇಲ್ಲ, ಅವನಿಗೆ ಅವನೇ ಸಮಾನ, ಮಂದರಾದ್ರಿಗೆ ಮಂದರಾದ್ರಿಯು ಸಮ ; ಜಲಧಿಗೆ ಜಲಧಿಯೇ ಸಮ; ಎನ್ನುತ್ತಾನೆ. ಇಲ್ಲಿ ಉಪಮಾನ ಉಪಮೇಯಗಳೆರಡೂ ಒಂದೇ ಆಗಿರುವುದನ್ನು ಗಮನಿಸಬಹುದು.

ಅನನ್ವಯವನ್ನು ಉಪಮೆಯ ಪ್ರಭೇದವೆಂದೇ ಭೋಜ, ಹೇಮಚಂದ್ರ ಮುಂತಾದವರು ಭಾವಿಸುತ್ತಾರೆ. ಆದರೆ ಇತರರು ಅದನ್ನೊಪ್ಪುವುದಿಲ್ಲ. ಉಪಮೆಯಲ್ಲಿ ಚಮತ್ಕಾರವಿರುವುದು ಸಾದೃಶ್ಯದಲ್ಲಿ. ಆದರೆ ಅನನ್ವಯದಲ್ಲಿ ಸಾದೃಶ್ಯ ನಿರಾಕರಣೆಯೇ ಚಮತ್ಕಾರಕ್ಕೆ ಕಾರಣವಾಗಿರುತ್ತದೆ. ಆ ದೃಷ್ಟಿಯಿಂದ ನೋಡಿದರೆ ಉಪಮೆಗೆ ವಿರುದ್ಧವಾದ ಕ್ರಿಯೆ ಇಲ್ಲಿ ನಡೆಯುತ್ತದೆ. ಆದರೆ ಎರಡೂ ಅಲಂಕಾರಗಳ ಗುರಿ ಒಂದೇ ಎಂಬುದನ್ನು ಒಪ್ಪಬಹುದು. ಅಂದರೆ ಉಪಮೇಯದ ಹಿರಿಮೆಯನ್ನು ಸ್ಥಾಪಿಸುವುದು. ಉಪಮೆಯು ಸಾದೃಶ್ಯ ಸ್ಥಾಪನೆಯ ಮೂಲಕ ಆ ಗುರಿಯನ್ನು ಸಾಧಿಸಿದರೆ ಅನನ್ವಯವು ಸಾದೃಶ್ಯ ನಿರಾಕರಣೆಯಿಂದ ಅದನ್ನು ಸಾಧಿಸುತ್ತದೆ. ಉಪಮೆಯಲ್ಲಿ ಉಪಮಾನ – ಉಪಮೇಯಗಳು ಭಿನ್ನವಾಗಿದ್ದರೆ ಇಲ್ಲಿ ಅವು ಒಂದೇ ಆಗಿರುತ್ತವೆ ಎಂಬುದು ಸ್ವರೂಪಗತ ಭೇದವಾಗಿದೆ. ಉಪಮೆಯು ಎರಡು ಭಿನ್ನ ವಸ್ತುಗಳ ನಡುವಿನ ಸಾದೃಶ್ಯವನ್ನು ಎತ್ತಿ ಹೇಳಿ ವಸ್ತುಗಳ ಐಕ್ಯದತ್ತ ಸಾಗುತ್ತದೆಯಾದರೆ ಅನನ್ವಯವು ದ್ವಿತೀಯ ಸದೃಶ್ಯವನ್ನು ನಿರಾಕರಿಸುವ ಮೂಲಕ ವಸ್ತುವಿನ ವಿಶಿಷ್ಟತೆಗೆ ಒತ್ತುಕೊಡುತ್ತದೆ. ಹೀಗಾಗಿ ಉಪಮೆ ಮತ್ತು ಅನನ್ವಯಗಳ ಸ್ವರೂಪವು ಬೇರೆಯಾಗಿದೆಯಷ್ಟೇ ಅಲ್ಲ , ರೀತಿಯೂ ಭಿನ್ನವಾಗಿದೆ. ಹಾಗಾಗಿ ಅವುಗಳನ್ನು ಪ್ರತ್ಯೇಕ ಅಲಂಕಾರಗಳೆಂದು ಪರಿಗಣಿಸುವುದೇ ಸೂಕ್ತವಾದುದು.

ಅನ್ಯ ಉದಾಹರಣೆ: –

ಇವರ ರೂಪಿವರ ವಿಭ್ರಮ
ಮಿವರತಿಲಾವಣ್ಯ ಮಿವರ ಸೊಬಗಿವರ ಕಳಾ
ನಿವಹಜ್ಞತೆಯಿವರ ಗುಣಂ
ವಿವರಿಸೆ ಮತ್ತಿವರೊಳಲ್ಲ ಧನ್ಯರೊಳೊಳವೆ ॥

— ರಾ.ವಿ. ೮–೭೮

ಸಚ್ಛೃತ್ವ ಧರ್ಮರತ್ನ ಪ್ರದೀಪ ಸೌ
ಮ್ಯತ್ತ್ವ ಗಂಧ ಕುಸುಮ ,
ಅವಳವಳ ಹಾಗೆ , ಮಿಕ್ಕವರು ಮಿಕ್ಕವರು
ಹೆಸರಿಗಷ್ಟೇ ಕುಸುಮ

— ಬಿ. ಎಚ್.ಶ್ರೀಧರ ' ರಸಯಜ್ಞ '

ಮಾತೊಳೆ ವಿಶ್ವವ ತೋಲಿಸುವ
ಮನದೊಳಿದೆಲ್ಲವ ಜಾಲಿಸುವ
ಮುದದೊಳಗೆಲ್ಲರ ಕೀಲಿಸುವ
ನಿನ್ನನ ದಾರಿಗೆ ಹೋಲಿಸುವ

— ಪು. ತಿ. ನ. 'ಹಂಸದಮಯಂತಿ' .

ಹೆಣ್ಗಳಲಿ ನಿನ್ನ ಸರಿ
ಭಕುತಿ ಝರಿ , ಮುಕುತಿ ಸಿರಿ ,
ಇನ್ನದಾರದು ?
ಇನ್ನುವರೆಗೂ ತೋರದು .

— ಡಿ.ಎಸ್.ಕರ್ಕಿ. –' ನಕ್ಷತ್ರಗಾನ ' ಪುಟ ೩೪ .

## ೩. ಉಪಮೇಯೋಪಮಾ

ಲಕ್ಷಣ :– ಪರ್ಯಾಯವಾಗಿ ಉಪಮಾನೋಪಮೇಯ ಭಾವವಿದ್ದರೆ ಉಪಮೇಯೋಪಮಾ.

(ದ್ವಯೋಃ ಪರ್ಯಾಯೇಣ ತಸ್ಮಿನ್ನುಪಮೇಯೋಪಮಾ – ರುಯ್ಯಕ)

ಉಪಮೇಯೋಪಮೆಯು ಹೆಸರೇ ಸೂಚಿಸುವಂತೆ ಉಪಮೇಯವು ಉಪಮೆಯಾಗುತ್ತದೆ. ಉಪಮೇಯವು ಉಪಮಾನವಾಗುವುದು ಹಾಗೆಯೆ ಉಪಮಾನವು ಉಪಮೇಯವಾಗುವುದು ಇಲ್ಲಿನ ರೀತಿ. ಉದಾ :– ಮುಖದಂತೆ ಚಂದ್ರ; ಚಂದ್ರನಂತೆ ಮುಖ. ಮೊದಲನೇ ವಾಕ್ಯದಲ್ಲಿ ಉಪಮೇಯವಾಗಿರುವುದು ಮುಂದಿನ ವಾಕ್ಯದಲ್ಲಿ ಉಪಮಾನವಾಗುತ್ತದೆ. ಅಂದರೆ ಅವುಗಳ ಸ್ಥಾನವು ಅದಲು ಬದಲಾಗುತ್ತದೆ. ಹೀಗೆ ಮಾಡುವುದರ ಉದ್ದೇಶವೇನು ? ಅಂಥ ಮೂರನೆಯ ವಸ್ತುವಿಲ್ಲವೆಂಬುದನ್ನು ತೋರುವುದು ಅರ್ಥಾತ್ ತೃತೀಯ ಸದೃಶ ವ್ಯವಚ್ಛೇದ. ಈ ಎರಡು ವಸ್ತುಗಳೊಂದಿಗೆ ಹೋಲಬಲ್ಲ ಮೂರನೆಯ ವಸ್ತುವಿಲ್ಲವೆಂಬುದನ್ನು ತೆರೆದು ತೋರುವುದೇ ಇದರ ಹಿಂದಿನ ಉದ್ದೇಶ.

ಈ ಅಲಂಕಾರದಲ್ಲಿ ಕವಿಯ ಮಾನಸಿಕ ಸ್ಥಿತಿಯು ಹೇಗಿರುತ್ತದೆಂದರೆ ಅವನು ಉಪಮಾನ ಉಪಮೇಯಗಳನ್ನು ಬಿಟ್ಟು ಬೇರಾವುದನ್ನೂ ತನ್ನ ಭಾವದ ಆಧಾರವನ್ನಾಗಿಸಲು ಬಯಸುವುದಿಲ್ಲ. ಅವೆರಡು ವಸ್ತುಗಳ ಸಾಮ್ಯದ ಬಗ್ಗೆ ಒಂದು ತೆರನಾದ ದೃಢತೆ. ಅಂತೆಯೇ ಅವನು ಉಪಮೇಯದ ಸೊಬಗನ್ನು ವರ್ಣಿಸಲು ಉಪಮಾನದ ನೆರವನ್ನು ಪಡೆದಂತೆ, ಉಪಮಾನದ ಸೊಗಸನ್ನು ವರ್ಣಿಸಲು ಉಪಮೇಯದ ನೆರವನ್ನು ಪಡೆಯುತ್ತಾನೆ. ಅವನು ಆ ಎರಡು ವಸ್ತುಗಳನ್ನು ಬಿಟ್ಟು ಬೇರೆಡೆಗೆ ಕಣ್ಣನ್ನು ಹಾಯಿಸುವುದಿಲ್ಲ. ಈ ಅಲಂಕಾರಕ್ಕೆ ಅವಶ್ಯವಾದ ಅಂಶಗಳು ಇವು :–

(೧) ಇದರಲ್ಲಿ ಎರಡು ವಸ್ತುಗಳನ್ನು ಪರ್ಯಾಯವಾಗಿ ಉಪಮೇಯವನ್ನಾಗಿಸಲಾಗುತ್ತದೆ.

(೨) ಇಲ್ಲಿ ಎರಡು ವಾಕ್ಯಗಳಿರುತ್ತವೆ. ಮೊದಲನೆಯ ವಾಕ್ಯದ ಉಪಮಾನ, ಎರಡನೆ ವಾಕ್ಯದಲ್ಲಿ ಉಪಮೇಯವಾಗುತ್ತದೆ.

(೩) ಇಲ್ಲಿ ತೃತೀಯ ಸದೃಶ ವ್ಯವಚ್ಛೇದವಿರುತ್ತದೆ. ಉಪಮಾನೋಪಮೇಯಗಳ ಸ್ಥಾನವು ಬದಲಾಗುತ್ತದೆ.

(೪) ಉಪಮಾನೋಪಮೇಯಗಳು ಅದಲು ಬದಲಾದರೂ ಧರ್ಮವು ಒಂದೇ ಆಗಿರುತ್ತದೆ. ಉದಾ :– 'ಮಿಂಚಿನಂತೆ ನೀನು ತೆಳ್ಳಗೆ' 'ನಿನ್ನಂತೆ ಮಿಂಚು ಬೆಳ್ಳಗೆ' ಎಂದರೆ ಉಪಮೇಯೋಪಮೆಯಾಗುವುದಿಲ್ಲ. ಯಾಕೆಂದರೆ ಇಲ್ಲಿ ಧರ್ಮದಲ್ಲಿ ಭೇದವಿದೆ. ತೃತೀಯ ಸದೃಶ ವ್ಯವಚ್ಛೇದದ ಗುರಿಯೂ ಇಲ್ಲ. ಇಂಥವು ರಶನೋಪಮೆಗಳ ವರ್ಗಕ್ಕೆ ಸೇರುತ್ತವೆ.

**ಈ ಕಣ್ಗಾಕಣ್ ಆಕ**
**ಣ್ಗೀಕಣ್ ಎರಡರ್ಕಮೆರಡೆ ಪಡಿಮತ್ತಿಲ್ಲೀ।**
**ಲೋಕ ವ್ಯವಹಾರದ ನುಡಿ**
**ಯೀ ಕಣ್ಣುಪಮಾನಮಿಲ್ಲ ಮಿನ್ನು ಮುನ್ನಂ ॥**

— ಗಿರಿಜಾ. ೧೦–೫೦

ಇಲ್ಲಿ ಕವಿಯು, ಶಿವನ ಕಣ್ಣುಗಳ ಸೊಬಗನ್ನು ಹೇಳಿದ್ದಾನೆ. ಅವು ಹೇಗಿವೆಯೆಂದರೆ 'ಈ ಕಣ್ಣಿಗೆ ಆ ಕಣ್ಣು ಸಮಾನ ' ' ಆ ಕಣ್ಣಿಗೆ ಈ ಕಣ್ಣು ಸಮಾನ ' ಅವನ್ನು ಬಿಟ್ಟರೆ ಈ ಕಣ್ಣಿಗೆ ಎಂದೆಂದೂ ಉಪಮಾನವಿಲ್ಲ, ಇಲ್ಲಿ ಇವುಗಳಿಗೆ ಸಮಾನವಾದುದು ಬೇರೊಂದಿಲ್ಲವೆಂಬ ಮಾತಿದೆ. ಈ ತೃತೀಯ ಸದೃಶ ವ್ಯವಚ್ಛೇದವು ವಾಚ್ಯವಾಗಿಲ್ಲದಿದ್ದರೂ ನಡೆಯುತ್ತದೆ.

**ಸವನಿಸೆ ನರಪತಿ ಪದಮೀ**
**ಯವನಿಯ ಪೊರೆಯಿಳಿಪಿ ಸಲುಪುವಂ ಚಿಕದೇವಂ ।**
**ವಿವರಿಸೆ ಕೃಷ್ಣನು ಮಿದರಿಂ**
**ದಿವನಂ ಪೋಲ್ದುಮವನುಮಿವನಂ ಪೋಲ್ದುಂ ॥**

ನರಪತಿ ಪದವಿಯು ದೊರೆತ ಚಿಕದೇವನು ಭೂಮಿಯ ಭಾರವನ್ನು ನಿವಾರಿಸಿ ಪೊರೆಯುತ್ತಿದ್ದಾನೆ. ಅದೇ ರೀತಿಯಲ್ಲಿ ವಿಷ್ಣು ಅದರಿಂದ ಇವನು ಅವನನ್ನೂ ಅವನು ಇವನನ್ನೂ ಹೋಲುತ್ತಿದ್ದಾರೆ–ಎಂದು ಕವಿ ಹೇಳುತ್ತಾನೆ . ಇವರಿಗೆ ಸಮಾನರಾದ ಮೂರನೆಯವರಿಲ್ಲವೆಂಬುದು ತಾತ್ಪರ್ಯ.

ಉಪಮೇಯೋಪಮೆಯ ಉಲ್ಲೇಖವನ್ನು ಪ್ರಥಮತಃ ಮಾಡಿದವನು ಭಾಮಹ. ದಂಡಿಯು ಇದನ್ನು ಸ್ವತಂತ್ರವಾದ ಅಲಂಕಾರವೆಂದು ಭಾವಿಸಿದಂತಿಲ್ಲ. ಅವನು ಅನ್ಯೋನ್ಯೋಪಮೆಯೆಂದು ಉಪಮೆಯ ಭೇದಗಳಲ್ಲೊಂದೆಂದೂ ಹೇಳುತ್ತಾನೆ. ಅನಂತರದಲ್ಲಿ ವಾಮನ, ಮಮ್ಮಟ, ರುಯ್ಯಕ, ಶೋಭಾಕರ , ವಿದ್ಯಾಧರ, ವಿದ್ಯಾನಾಥ, ಜಯದೇವ, ವಿಶ್ವನಾಥ, ಅಪ್ಪಯ್ಯ ದೀಕ್ಷಿತ, ಜಗನ್ನಾಥ, ಮುಂತಾದವರು ಇದನ್ನು ಕುರಿತು ವಿವೇಚಿಸಿದ್ದಾರೆ. ರುಯ್ಯಕನು, ಧರ್ಮವು ವ್ಯಕ್ತವಾಗುವುದು ಅಥವಾ ಅವ್ಯಕ್ತವಾಗುವುದರ ಆಧಾರದ ಮೇಲೆ ಎರಡು ಪ್ರಕಾರಗಳನ್ನು ಹೇಳುತ್ತಾನೆ. ಜಗನ್ನಾಥನು ಉಕ್ತಧರ್ಮ ಮತ್ತುವ್ಯಕ್ತಧರ್ಮಗಳೆಂಬ ಎರಡು ಪ್ರಕಾರಗಳನ್ನು ಹೇಳಿ ಅದರ ಅನೇಕ ಉಪ ವಿಭಾಗಗಳನ್ನು ವಿಸ್ತರಿಸುತ್ತಾನೆ. ಅಷ್ಟೇ ಅಲ್ಲ ಉಪಮೆಯಂತೆ ಪೂರ್ಣಾ –ಲುಪ್ತಾ ಎಂದು ಮುಂತಾಗಿ ಎಲ್ಲ ಭೇದಗಳೂ ಸಂಭವಿಸಲು ಸಾಧ್ಯವೆಂದು ಹೇಳುತ್ತಾನೆ.

ಅನನ್ವಯದಂತೆ ಉಪಮೇಯೋಪಮೆಯೂ ವಿಶಿಷ್ಟತೆ ಅಥವಾ ಪ್ರತ್ಯೇಕತೆಗೆ ಒತ್ತು ಕೊಡುವ ಅಲಂಕಾರವಾಗಿದೆ. ಅನನ್ವಯದಲ್ಲಿ ಒಂದೇ ವಸ್ತುವು ಉಪಮಾನ ಉಪಮೇಯಗಳೆರಡೂ ಆಗಿದ್ದರೆ ಇಲ್ಲಿ ಎರಡು ಭಿನ್ನ ವಸ್ತುಗಳಿರುತ್ತವೆ . ಸಾಮ್ಯವು ಎರಡು ವಸ್ತುಗಳಿಗೆ ಸೀಮಿತವಾಗಿರುತ್ತದೆ . ಅಲ್ಲಿ ದ್ವಿತೀಯ ಸದೃಶ ವ್ಯವಚ್ಛೇದವು ಗುರಿಯಾದರೆ ಇಲ್ಲಿ

ತೃತೀಯ ಸದೃಶ ವ್ಯವಚ್ಛೇದವು ಗುರಿ. ಇದು ಆ ಎರಡೂ ಅಲಂಕಾರಗಳಲ್ಲಿರುವ ಭೇದ. ಕನ್ನಡದಲ್ಲಿ ಕಾವ್ಯಾವಲೋಕನಕಾರನು ದಂಡಿಯನ್ನು ಅನುಸರಿಸಿ ಇದನ್ನು ಅನ್ಯೋನ್ಯೋಪಮೆಯೆಂದು ಕರೆದಿದ್ದಾನೆ.

ಆದರೆ ದ್ವಿತೀಯ ಸದೃಶ್ಯ ವ್ಯವಚ್ಛೇದದ ಸೊಗಸು ಕವಿಗಳನ್ನು ಆಕರ್ಷಿಸಿದಂತೆ ಇದು ಆಕರ್ಷಿಸಲಿಲ್ಲ ಪ್ರಾಚೀನ ಕಾವ್ಯಗಳಲ್ಲಿಯೂ ಆಧುನಿಕ ಕಾವ್ಯಗಳಲ್ಲಿಯೂ, ಈ ಅಲಂಕಾರವನ್ನು ಬಳಸಿದವರ ಸಂಖ್ಯೆ ಕಡಿಮೆ.

**ಅನ್ಯ ಉದಾಹರಣೆ:**

ಗಿರಿಯು ಕರಿಯಂದದಿಂ
ಕರಿಯು ಗಿರಿಯಂದದಿಂ
ಸುರಿವ ಮದಧಾರೆಯುಂ ಝರಿಯಂದದಿಂ
ಝರಿಯು ಮದದಂದದಿಂ
ಪೆರೆಯನೋಲ್ ತರುಣಿವೊಗ
ತರುಣಿ ಮೊಗದೋಲ್ ಪೆರೆಯನೊಪ್ಪುತಿಹನು .

—— "ಕನ್ನಡ ಕುವಲಯಾನಂದ"

## ೪. ಪ್ರತೀಪ

**ಲಕ್ಷಣ:– ಉಪಮಾನದ ನಿಂದೆ ಅಥವಾ ಅದನ್ನೇ ಉಪಮೇಯವನ್ನಾಗಿಸುವುದು ಪ್ರತೀಪ.**

**( ಉಪಮಾನ ಸ್ಯಾಕ್ಷೇಪ: ಉಪಮೇಯತಾಕಲ್ಪನಂ ವಾ ಪ್ರತೀಪಮ್ –ರುಯ್ಯಕ )**

ಪ್ರತೀಪವೆಂದರೆ ಪ್ರತಿಕೂಲವಾಗಿರುವುದೆಂದು ಅರ್ಥ . ಇಲ್ಲಿ ಉಪಮೇಯವು ಉಪಮಾನಕ್ಕೆ ಪ್ರತಿಕೂಲವಾಗಿರುತ್ತದೆ . ಉಪಮಾನ ಉಪಮೇಯಗಳೆಂಬ ವಿಭಾಗವಿರುವಲ್ಲಿ ಉಪಮಾನವು ಅಧಿಕ ಗುಣವುಳ್ಳದ್ದೂ ಉಪಮೇಯವು ನ್ಯೂನಗುಣವುಳ್ಳದ್ದೂ ಆಗಿರುವುದು ಸಾಮಾನ್ಯನಿಯಮ. ಅಂತೆಯೇ ಉಪಮಾಲಂಕಾರದಲ್ಲಿ ಉಪಮೇಯವು ಉಪಮಾನಕ್ಕೆ ಸದೃಶವಾಗಿದೆಯೆಂಬುದನ್ನು ತೋರಿಸುವ ಮೂಲಕ ಉಪಮೇಯವನ್ನು ಮೇಲೆತ್ತಲಾಗುತ್ತದೆ. ಆದರೆ ಪ್ರತೀಪದಲ್ಲಿ ಈ ಕ್ರಿಯೆಯು ಅದಲು ಬದಲಾಗುತ್ತದೆ . ಉಪಮೇಯವು ಉಪಮಾನಕ್ಕಿಂತ ಶ್ರೇಷ್ಠವಾಗಿದೆಯೆಂಬುದನ್ನು ಪ್ರತಿಪಾದಿಸುವ ಪ್ರಯತ್ನ ನಡೆಯುತ್ತದೆ. ಇಲ್ಲಿಯೂ ಅಂತರ್ಗತವಾದ ತತ್ವವು ಸಾದೃಶ್ಯವೇ ಆಗಿದೆ. ಇದನ್ನು ಆಧರಿಸಿ ಉಪಮೆ, ಸಂದೇಹ, ಉತ್ಪ್ರೇಕ್ಷೆ , ರೂಪಕ , ಅತಿಶಯೋಕ್ತಿ ಮುಂತಾದ ಅಲಂಕಾರಗಳಲ್ಲಿ ಉಪಮೇಯ ಉಪಮಾನಗಳಲ್ಲಿ ಉಪಮಾನದೊಂದಿಗೆ ಉಪಮೇಯದ ಅಭಿನ್ನತೆಯನ್ನು ಸ್ಥಾಪಿಸಿ ಉಪಮೇಯದ ಉತ್ಕರ್ಷವನ್ನು ಹೇಳುವ ಪ್ರಯತ್ನ ನಡೆಯುತ್ತದೆ. ಪ್ರತೀಪ , ವ್ಯತಿರೇಕ ಮುಂತಾದವುಗಳಲ್ಲಿ ತದ್ವಿರುದ್ಧವಾದ ರೀತಿಯಲ್ಲಿ ಉಪಮೇಯದ ಹಿರಿಮೆಯನ್ನು ಸ್ಥಾಪಿಸುವ ಪ್ರಯತ್ನ ನಡೆಯುತ್ತದೆ. ಅಂತಿಮ ಗುರಿಯೊಂದೇ ಆದರೂ ಸೇರುವ ದಾರಿಗಳು ಬೇರೆ ಬೇರೆ. ಈ ಅಂಶವನ್ನು ಗಮನಿಸಿಯೇ ದಂಡಿ, ಭೋಜರಂಥ ಆಲಂಕಾರಿಕರೂ ಕಾವ್ಯಾವಲೋಕನಕಾರನಾದ ನಾಗವರ್ಮನೂ ಇದನ್ನು ವಿಪರ್ಯಾಸೋಪಮೆಯೆಂಬ ಹೆಸರಿನಲ್ಲಿ ಕರೆಯುತ್ತಾರೆ.

ಪ್ರತೀಪದಲ್ಲಿ ಉಪಮೇಯದ ಉತ್ಕರ್ಷವನ್ನು ಸಾಧಿಸುವುದು ಉದ್ದೇಶ. ಅದನ್ನು ಸಾಧಿಸುವುದು ಹೇಗೆ ? ಇದಕ್ಕೆ ಕವಿಗಳು ಕಂಡುಕೊಂಡ ಉತ್ತರವು ಪ್ರತೀಪದ ಪ್ರಭೇದಗಳಿಗೆ ಮೂಲವಾಗಿದೆ . ಉಪಮಾನದ ನಿಂದೆಯು ಒಂದು ವಿಧಾನವಾದರೆ ಉಪಮಾನವನ್ನೇ ಉಪಮೇಯವಾಗಿಸುವುದು ಮತ್ತೊಂದು. ಮಮ್ಮಟ, ರುಯ್ಯಕ, ಮುಂತಾದವರು ಒಪ್ಪುವ ಭೇದಗಳು ಇವೆರಡು, ಮುಂದೆ ಕುವಲಯಾನಂದಕಾರನ ಕಾಲಕ್ಕೆ ಐದು ಭೇದಗಳನ್ನು ಕಾಣುತ್ತೇವೆ. ಜಗನ್ನಾಥನೂ ಕೂಡ ಐದು ಭೇದಗಳನ್ನು ಹೇಳುತ್ತಾನೆ. ಆದರೆ ಈ ಭೇದಗಳಲ್ಲಿ ಒಂದನ್ನು ಬಿಟ್ಟು ಉಳಿದವುಗಳನ್ನು ಉಪಮೆಯಲ್ಲಿಯೇ ಅಂತರ್ಗತಗೊಳಿಸಬಹುದೆಂದು ಹೇಳುತ್ತಾನೆ. ಕುವಲಯಾನಂದವನ್ನು ಅನುಸರಿಸಿ ಐದು ಭೇದಗಳ ಸ್ವರೂಪವನ್ನು ಗಮನಿಸಬಹುದು.

## ಪ್ರಥಮ ಪ್ರತೀಪ :–

ಪ್ರಸಿದ್ಧವಾದ ಉಪಮಾನವನ್ನು ಉಪಮೇಯವನ್ನಾಗಿ ಕಲ್ಪಿಸಿ ತನ್ಮೂಲಕ ಉಪಮಾನವನ್ನು ಅನಾದರಿಸುವುದು. ( **ಪ್ರತೀಪಮುಪಮಾನಸ್ಯೋಪಮೇಯಕಲ್ಪನಮ್**) ಉದಾ: ನಿನ್ನ ಕಣ್ಣುಗಳಿಗೆ ಸಮಾನವಾದುದು ಪದ್ಮ ; ನಿನ್ನ ಮುಖಕ್ಕೆ ಸದೃಶನಾದವನು ಚಂದ್ರ .

## ದ್ವಿತೀಯ ಪ್ರತೀಪ :–

ಪ್ರಸಿದ್ಧವಾದ ಉಪಮಾನವನ್ನು ಉಪಮೇಯವನ್ನಾಗಿ ಕಲ್ಪಿಸಿ, ನಿಜವಾದ ಉಪಮೇಯವನ್ನು ನಿಂದಿಸುವುದು. ಇಲ್ಲಿ ಉಪಮೇಯದ ನಿಂದೆಯಲ್ಲಿಯೇ ಉಪಮಾನದ ಬಗೆಗೆ ಅನಾದರ ತೋರುತ್ತದೆ. ಉದಾ :– ' ಎಲೈ ಮುಖವೇ ಗರ್ವಿಸಬೇಡ , ಚಂದ್ರನೂ ಕೂಡಾ ಕಾಂತಿಯಲ್ಲಿ ನಿನಗೆ ಸಮಾನನೇ '. ಇಲ್ಲಿ ಉಪಮೇಯವಾದ ಮುಖವನ್ನು ನಿಂದಿಸುವಲ್ಲಿಯೇ ಉಪಮಾನದ ಅನಾದರವಿದೆ. ಮೊದಲನೆಯ ಪ್ರತೀಪದಲ್ಲಿ ಉಪಮಾನವು ಉಪಮೇಯವಾಗುವ ಮೂಲ ಅನಾದರಿಸಲ್ಪಟ್ಟಿದೆಯಾದರೆ ಇಲ್ಲಿ ಉಪಮೇಯದ ನಿಂದೆಯೂ ಸೇರಿದೆ. ಆದರೆ ಅದು ನಿಜವಾದ ನಿಂದೆಯಲ್ಲ ಸ್ತುತಿಯೇ ಆಗಿದೆಯೆಂಬುದನ್ನು ಗ್ರಹಿಸಬಹುದು.

## ತೃತೀಯ ಪ್ರತೀಪ :–

ಅತ್ಯುತ್ಕೃಷ್ಟವಾದ ಗುಣದ ಕಾರಣದಿಂದ ಎಂದೂ ಉಪಮಾನವೂ ಆಗದಿದ್ದ ವಸ್ತುವನ್ನು ಉಪಮೇಯವನ್ನಾಗಿಸಿ ಅದನ್ನು ಅನಾದರಿಸುವುದು. (**ವರ್ಣ್ಯೋಪಮೇಯ ಲಾಭೇನ ತಥಾನ್ಯಸ್ಯಪ್ಯನಾದರಃ**) ಉದಾ:– ಎಲೈ ಹಾಲಾಹಲವೇ , ನಾನೇ ಭಯಂಕರನೆಂಬ ಸೊಕ್ಕು ಬೇಡ, ಈ ಲೋಕದಲ್ಲಿ ನಿನ್ನಂತೆ ಇರುವ ದುರ್ಜನ ವಚನಗಳಿವೆ.

## ಚತುರ್ಥ ಪ್ರತೀಪ :–

ಉಪಮಾನವು ಉಪಮೇಯದೊಡನೆ ಹೋಲಿಕೆಗೆ ತಕ್ಕುದಲ್ಲವೆನ್ನುವುದು. (**ವರ್ಣ್ಯೇನಾನ್ಯಸ್ಯೋಪಮಯಾ ಅನಿಷ್ಪತ್ತಿ ವಚಶ್ಚಯತ್** ) ಉದಾ :– ಓ ಸುಂದರಿ, ಈ ಲೋಕಾಪವಾದವನ್ನು ಕೇಳು, ಚಂದ್ರನು ನಿನ್ನ ಮುಖಕ್ಕೆ ಸಮಾನನೆಂದು ಜನ ಹೇಳುತ್ತಾರೆ. ಇಲ್ಲಿ ಚಂದ್ರನು ಉಪಮೇಯವಾಗಲು ಕೂಡಾ ಅಯೋಗ್ಯನೆಂಬ ಭಾವ.

## ಪಂಚಮ ಪ್ರತೀಪ :–

ಉಪಮೇಯವೇ ಉಪಮಾನದ ಹೊರೆಯನ್ನು ಹೊರಲು ಸಮರ್ಥವಾದುದರಿಂದ ಉಪಮಾನವು ವ್ಯರ್ಥವೆನ್ನುವುದು. ( **ಪ್ರತೀಪಮುಪಮಾನಸ್ಯ ಕೈಮರ್ಥ್ಯಮಪಿಮನ್ವತೇ** ) ಉದಾ :– ಅವಳ ಮುಖವನ್ನು ನೋಡಿದ ಮೇಲೆ ಕಮಲವೇಕೆ? ಚಂದ್ರನೇಕೆ ?

ಈ ಐದೂ ಭೇದಗಳನ್ನು ಗಮನಿಸಿದರೆ ಪ್ರತೀಪವು ಎಷ್ಟೊಂದು ಬಗೆಗಳಲ್ಲಿ

ವ್ಯಕ್ತವಾಗಬಹುದೆಂಬುದನ್ನು ತಿಳಿಯಬಹುದು. ಈ ರೀತಿಯಲ್ಲಿ ಭೇದಗಳನ್ನು ಲೆಕ್ಕ ಹಾಕುತ್ತಾ ಹೋದರೆ ಇನ್ನಷ್ಟು ಭೇದಗಳನ್ನು ಹೇಳಬಹುದು. ಹಾಗಾಗಿ ಪ್ರಾಚೀನರ ಮಾರ್ಗವನ್ನು ಹಿಡಿದು ಉಪಮೇಯವನ್ನು ಉಪಮಾನವಾಗಿಸುವುದು ಮತ್ತು ಉಪಮಾನದ ವ್ಯರ್ಥತೆಯ ಪ್ರತಿಪಾದನೆಯೆಂಬ ಎರಡು ಪ್ರಕಾರಗಳನ್ನು ಲಕ್ಷಿಸಿದರೆ ಸಾಕೆನಿಸುತ್ತದೆ. ಉಳಿದವುಗಳನ್ನು ಅಂದರೆ ಮೊದಲಿನ ನಾಲ್ಕು ಭೇದಗಳನ್ನು ಮೊದಲನೆಯ ಪ್ರಕಾರದಲ್ಲಿಯೂ, ಐದನೆಯ ಭೇದವನ್ನು ಎರಡನೆಯ ಪ್ರಕಾರದಲ್ಲಿಯೂ ಸೇರಿಸಬಹುದು.

ಉದಾ :–

**ಮೊಗಮಂ ತಾವರೆ ಕಣ್ಣನುತ್ಪಳದಳಂ ಧಮ್ಮಿಲ್ಲಮಂಸೋಗೆ ಸೆ**
**ಳ್ಳುಗುರಂ ಕೇದಗೆ ಪುರ್ವನಂಗಜನಬಿಲ್ ದಂತಾಳಿಯಂ ಮುತ್ತು ಕೈ ।**
**ಮುಗಿದಾರಾಧಿಸಿ ಪೋಲ್ತುವೆನ್ನದೆ ಸರೋಜಾತಾದಿ ನಿಸ್ಸಾರ ವ**
**ಸ್ತುಗಳೊಳ್ ಪೋಲಿಪರಂತದೆಂತಾಂಮರುಳರೋ ರೂಪಂ ವಿಚಿತ್ರಾಂಗಿಯಾ ।।**

**— ಆದಿಪುರಾಣ ೬–೮೫.**

ಇಲ್ಲಿ ಮೊಗವನ್ನು ತಾವರೆ, ಕಣ್ಣನ್ನು ನೈದಿಲೆ, ಹೆರಳನ್ನು ನವಿಲು, ಉಗುರನ್ನು ಕೇದಗೆ, ಹುಬ್ಬನ್ನು ಮನ್ಮಥನ ಧನುಸ್ಸು , ದಂತಗಳನ್ನು ಮುತ್ತು , –ಇವು ಕೈ ಮುಗಿದು ಆರಾಧಿಸಿ ಸಾದೃಶ್ಯವನ್ನು ಪಡೆದವು ಎಂದು ಹೇಳದೇ, ಕಮಲವೇ ಮುಂತಾದ ನಿಸ್ಸಾರವಾದ ವಸ್ತುಗಳ ಜೊತೆಗೆ ಇವಳ ರೂಪವನ್ನೂ ಮರುಳರು ಹೇಗೆ ಹೋಲಿಸುತ್ತಿದ್ದಾರೋ! ಎಂದು ಹೇಳಲಾಗಿದೆ. ಪ್ರಸಿದ್ಧ ಉಪಮಾನ ವಸ್ತುಗಳಾದ ತಾವರೆ, ಉತ್ಪಳದಳ, ಮುಂತಾದವು ಉಪಮೇಯಗಳಾಗಿವೆ. 'ಮುಖವು ತಾವರೆಯಂತಿದೆ' ಎಂದು ಹೇಳುವ ಲೋಕಪ್ರಸಿದ್ಧಕ್ರಮವನ್ನು ವಿಪರ್ಯಸ್ತಗೊಳಿಸಿ, 'ತಾವರೆಯು ಮೊಗವನ್ನು ಹೋಲುತ್ತಿದೆ'ಯೆನ್ನಲಾಗಿದೆ. ಇದು ಪ್ರತೀಪ. ಇನ್ನೊಂದನ್ನು ನೋಡಿ.

**ಅರವಿಂದದ ಸಿರಿ ಮೇಣಿರು**
**ಳಿರುಳೆರೆಯನ ಸಿರಿ ಪಗಲೊಳಿಳಿಗುಮಿವೆರಡಂ ।**
**ಸರಿಮಾಳ್ಪುದೆಂತೊ ಸಿರಿಬಂ**
**ದೆರವಿಲ್ಲದೆ ನೆಲಸಿನಿಂದ ತರಳೆಯ ಮೊಗದೊಳ್ ।।**

ಇಲ್ಲಿ ಅರವಿಂದದ ಕಾಂತಿಯು ರಾತ್ರಿಯಲ್ಲಿ ಕುಂದುತ್ತದೆ ; ಚಂದ್ರನ ಕಾಂತಿಯು ಹಗಲಿನಲ್ಲಿ ಕುಂದುತ್ತದೆ. ಹಗಲು ರಾತ್ರಿಗಳೆರಡರಲ್ಲಿಯೂ ಕಾಂತಿಯು ಕುಂದದ ಈ ತರಳೆಯ ಮುಖವನ್ನು ಅವುಗಳಿಗೆ ಹೋಲಿಸುವುದಾದರೂ ಹೇಗೆ ? ಎಂದು ಕವಿಯು ಪ್ರಶ್ನಿಸುತ್ತಾನೆ. ಉಪಮಾನ ವಸ್ತುಗಳಾದ ಅರವಿಂದ , ಚಂದ್ರಗಳು ತಿರಸ್ಕೃತವಾಗಿವೆಯಾದ್ದರಿಂದ ಇಲ್ಲಿರುವುದು ಪ್ರತೀಪ.

ಉಪಮಾನವನ್ನು ಉಪಮೇಯವಾಗಿಸುವ ಬಗೆಗಳು ನೂರಾರು. ಅವೆಲ್ಲವನ್ನು ಲೆಕ್ಕ ಹಾಕುವುದು ಅಸಾಧ್ಯ. ಅಂತೆಯೇ ಉಪಮಾನದ ವ್ಯರ್ಥತೆಯನ್ನು ಬಗೆ ಬಗೆಯಾಗಿ ಹೇಳಬಹುದು.

ಉಪಮಾನವೆಂದರೆ ಉಪಮೇಯದ ಉತ್ಕರ್ಷಕ್ಕೆ ಕಾರಣವಾದುದೆಂಬ ಅರ್ಥವನ್ನಿಟ್ಟುಕೊಂಡರೆ ಪ್ರತೀಪದ ವ್ಯಾಪ್ತಿ ಮತ್ತಷ್ಟು ಹಿಗ್ಗಬಹುದು.

ಅನ್ಯ ಉದಾಹರಣೆಗಳು:

ಈ ಮಹಿಗೆಲ್ಲ ಮಗ್ಗಳದ ದಾಸಿಯನಗ್ರಣಿ ಮಾಡಿ ದಾನ ಚಿಂ
ತಾಮಣಿಯಂ ನೆಗಳ್ತೆವಡೆದೊಪ್ಪಮೆ ಸಾಲ್ಗು ಮದರ್ಕೆ ಮುನ್ನ ಚಿಂ।
ತಾಮಣಿ ಕಾಮಧೇನು ಸುರಭೂರುಹ ಮೆಂಬಿವನೇಕೆ ಮಾಡಿದಂ
ತಾಮರ ಸೋದ್ಭವಂ ಜಡನಜಂಗೆ ವಿವೇಕಮದೆಲ್ಲಿ ಬಂದಪುದೋ

— ಅಜಿತಪುರಾಣ. –೧–೬೨

ಸಮಸಂದಲ್ಲಿಯ ಸಿಂಬೆಗಂ ಸರಿಯೆಪೇಳಾರಂಭೆ ನೋಡಲ್ ತಿಲೋ
ತ್ತಮೆಗಿಂತುತ್ತಮ ರೂಪಮಾಪಿಡೆ ವಿಲಾಸಂ ಚಿತ್ರ ತನ್ನೊಂದು ಬಿಂ।
ಕಮನಾಳ್ದೂರ್ವಶಿಗೀ ವಶೀಕರಣಮೆಲ್ಲಿರ್ದಪುದೆಂಬೊಂದು ವಿ
ಭ್ರಮದಿಂ ದಿಗ್ಭ್ರಮೆಯಂ ವಿಟರ್ಗೆ ಪಡೆಗುಂ ತದ್ವಾರ ನಾರೀಜನಂ ॥

— ಧರ್ಮಾಮೃತ. ೨–೧೧೩.

ಪಾರುವ ತುಂಬಿಯಂ ಕಳಿವ ಪೂಗಣೆಯಂ ಮುಗಿವಬ್ಜಮಂ ತಮಂ
ದೋರಲಗಲ್ವ ಚಕ್ರಯುಗಮಂ ನಸು ಬಳ್ಕುವ ಕಲ್ಪವಲ್ಲಿಯಂ।
ನೀರೆಯ ಕುಂತಳಕ್ಕೆ ನಯನಕ್ಕೆ ಮೊಗಕ್ಕೆ ಕುಚಕ್ಕೆ ತೋಳ್ಗೆ ಕೈ
ಮೀರಿ ಸಮಾನಮೆಂದೊಡುಪಮಾನಕೆ ಹೀನಮದಾಗದಿರ್ಪುದೇ ॥

— ಕಾವ್ಯಸಾರಂ –೬ –೭೫.

ಸಿರಿ ತುಳುನಾಡಿನ ಬಾಲೆ !
ಕಣ್ಣಕಾಂತಿಯನೇ ಪೋಲೆ
ಜಿಂಕೆ ಮರಿಯು ತಾನತ್ತು
ಬೇಡಿತೆ ನಿನ್ನೊಳು ಸೊತ್ತು

— ಕಯ್ಯಾರ ಕಿಞ್ಞಣ್ಣ ರೈ 'ಶ್ರೀಮುಖ' – (ಪುಟ ೩೭.)

ಬಲವಾದ ವಿತದಂತಿರಲು ಆಕೆಯ ಕಾಲು
ಬತ್ತವನು ಕುಟ್ಟಬಹುದೇ !
ಕಣ್ತೆರೆಯಲಾಕೆ ಮಿಂಚಿನ ದಾರ ಬರುತಿರಲು
ಮನೆಗೆ ಆ ದೀಪವೇ ಸಾಕು .

— ಕೆ.ಎಸ್. ನರಸಿಂಹಸ್ವಾಮಿ. – 'ಮಲ್ಲಿಗೆಯಮಾಲೆ' ಪುಟ ೨೦೨

## ೫. ವ್ಯತಿರೇಕ.

**ಲಕ್ಷಣ:–** ಉಪಮಾನ ಅಥವಾ ಉಪಮೇಯದ ವೈಲಕ್ಷಣ್ಯವನ್ನು ಪ್ರತಿಪಾದಿಸಿದರೆ ವ್ಯತಿರೇಕ.

( **ವ್ಯತಿರೇಕೋ ವಿಶೇಷಶ್ಚೇದುಪಮಾನೋಪಮೇಯ ಯೋಃ** —— ಕುವಲಯಾನಂದ )

ವ್ಯತಿರೇಕವೆಂಬ ಪದಕ್ಕೆ ವಿಶೇಷ ಪ್ರಕಾರದ ಅತಿರೇಕ ಅರ್ಥಾತ್ ಆಧಿಕ್ಯವೆಂದು ಅರ್ಥ. (**ವ್ಯತಿರೇಕೋ ವಿಶೇಷಣಾತಿರೇಕ : ಆಧಿಕ್ಯಮ್** –ಪ್ರದೀಪ ) ಗುಣ ವಿಶೇಷದ ಕಾರಣದಿಂದ ಉಪಮೇಯವೋ, ಉಪಮಾನವೋ, ಅಧಿಕವೆಂದು ನಿರೂಪಿತವಾದರೆ ಅದು ವ್ಯತಿರೇಕವೆನಿಸುತ್ತದೆ. ನಾವು ಈ ಹಿಂದೆಯೇ ಗಮನಿಸಿದಂತೆ ಸಾಧರ್ಮ್ಯದಲ್ಲಿ ಅಭೇದಪ್ರಾಧಾನ್ಯ, ಭೇದಾಭೇದತುಲ್ಯತ್ವ ಹಾಗೂ ಭೇದಪ್ರಾಧಾನ್ಯಗಳೆಂಬ ಮೂರು ಪ್ರಕಾರಗಳಿವೆ. ಅವುಗಳಲ್ಲಿ ಭೇದಪ್ರಾಧಾನ್ಯ ಸಾಧರ್ಮ್ಯವುಳ್ಳದ್ದು ವ್ಯತಿರೇಕವೆಂದು ರುಯ್ಯಕ ಅಭಿಪ್ರಾಯ ಪಡುತ್ತಾನೆ. (**ಭೇದಪ್ರಾಧಾನ್ಯೇ ಉಪಮಾನಾದುಪಮೇಯಸ್ಯಾಧಿಕ್ಯೇ ವಿಪರ್ಯಯೇ ವಾ ವ್ಯತಿರೇಕ :**) ಈಗಾಗಲೇ ಗಮನಿಸಿದಂತೆ ಕೆಲವು ಅಲಂಕಾರಗಳು ಉಪಮಾನೋಪಮೇಯಗಳ ಸಮಾನತೆಯನ್ನೋ, ಅಭೇದವನ್ನೋ , ಪ್ರತಿಪಾದಿಸಿದರೆ ಇನ್ನು ಕೆಲವು ಸಾಧರ್ಮ್ಯವನ್ನು ಸೂಚಿಸುತ್ತಲೇ ಪ್ರತ್ಯೇಕತೆಗೆ ಒತ್ತುಕೊಡುತ್ತವೆ. ವ್ಯತಿರೇಕ ಆ ವರ್ಗಕ್ಕೆ ಸೇರಿದ ಅಲಂಕಾರ. ಉಪಮಾನ – ಉಪಮೇಯಗಳಲ್ಲಿರುವ ಸಾಧರ್ಮ್ಯವನ್ನು ಇಲ್ಲಿಯೂ ಗುರುತಿಸಲಾಗುತ್ತದೆ. ಆದರೆ ಅದೇ ಸಮಯದಲ್ಲಿ ಉಪಮಾನವೋ, ಉಪಮೇಯವೋ ಅವುಗಳಲ್ಲಿ ಯಾವುದಾದರೊಂದು ಹೆಚ್ಚಿನದು ಎಂದು ನಿರೂಪಿಸುವ ಪ್ರಯತ್ನ ಕಂಡುಬರುತ್ತದೆ. ಉದಾ :– " ಕಳಂಕವುಳ್ಳ ಚಂದ್ರನಿಗಿಂತ ಕಳಂಕವಿಲ್ಲದ ಮುಖವು ಸೊಗಸಾಗಿದೆ " ಇಲ್ಲಿ ಉಪಮೇಯವಾದ ಮುಖವು ಉಪಮಾನವಾದ ಚಂದ್ರನಿಗಿಂತ ಶ್ರೇಷ್ಠವೆಂದು ಪ್ರತಿಪಾದಿಸುವ ಪ್ರಯತ್ನವಿದೆ. "ಚಂದ್ರನು ಕ್ಷೀಣನಾದರೂ ವೃದ್ಧಿಯನ್ನು ಹೊಂದುತ್ತಾನೆ. ಯೌವನವು ಹೋದರೆ ಮತ್ತೆ ಬಾರದು" ಕೆಲವು ಆಲಂಕಾರಿಕರ ಮತದಂತೆ ಇಲ್ಲಿ ಉಪಮಾನದ ಆಧಿಕ್ಯದ ನಿರೂಪಣೆಯಿದೆ.

ವ್ಯತಿರೇಕಾಲಂಕಾರದ ವಿವೇಚನೆ ಭಾಮಹನಿಂದ ಮೊದಲ್ಗೊಂಡು ಎಲ್ಲ ಆಲಂಕಾರಿಕರಲ್ಲಿಯೂ ಇದೆ. ಆದರೆ ಅವರಲ್ಲಿ ಮತೈಕ್ಯವಿಲ್ಲ. ಮುಖ್ಯವಾಗಿ ವ್ಯತಿರೇಕದ ಸ್ವರೂಪದ ವಿಚಾರದಲ್ಲಿ, ಆಲಂಕಾರಿಕರ ಮತಭೇದ. ವ್ಯತಿರೇಕವು ಉಪಮೇಯದ ಆಧಿಕ್ಯವನ್ನು ಪ್ರತಿಪಾದಿಸುವುದೆಂಬ ವಿಚಾರದಲ್ಲಿ ಎಲ್ಲರದ್ದೂ ಸಹಮತವಿದೆ. ಆದರೆ ವ್ಯತಿರೇಕವು ಉಪಮಾನದ ಆಧಿಕ್ಯವನ್ನೂ ಪ್ರತಿಪಾದಿಸುತ್ತದೆ ಎಂಬುದರ ಬಗ್ಗೆ ತೀವ್ರವಾದ ಭಿನ್ನಾಭಿಪ್ರಾಯವುಂಟು. ಭಾಮಹ, ದಂಡಿ, ವಾಮನ, ಮುಂತಾದವರು ಉಪಮೇಯಾಧಿಕ್ಯ ಪ್ರತಿಪಾದನೆಯನ್ನು ಮಾತ್ರ ಹೇಳಿದರು. ಉದ್ಭಟನ ಅಭಿಪ್ರಾಯವು ಅಸ್ಪಷ್ಟವಾಗಿದೆ. ಉಪಮಾನದ ಆಧಿಕ್ಯ ಪ್ರತಿಪಾದನೆಯೂ ವ್ಯತಿರೇಕವಾಗಬಲ್ಲುದೆಂಬುದನ್ನು ಸ್ಪಷ್ಟವಾಗಿ

ಹೇಳಿದವನು ರುದ್ರಟ. ಅಂದಿನಿಂದ ಈ ಪ್ರಕಾರವನ್ನು ಒಪ್ಪುವವರು ಹಾಗೂ ಒಪ್ಪದಿರುವವರು ಎಂದು ಎರಡು ಗುಂಪಾಯಿತು.

ಉಪಮಾನವೆಂಬ ಕಲ್ಪನೆಯಲ್ಲಿಯೇ ಅದು ಉಪಮೇಯಕ್ಕಿಂತ ಶ್ರೇಷ್ಠವೆಂಬ ಅಭಿಪ್ರಾಯವಿದೆ. ಹಾಗಿರುವಾಗ ಉಪಮಾನದ ಆಧಿಕ್ಯವನ್ನು ಪ್ರತಿಪಾದಿಸುವಲ್ಲಿ ಸೊಗಸೆಲ್ಲಿಯದು? ಉಪಮೇಯದ ಆಧಿಕ್ಯವನ್ನು ಪ್ರತಿಪಾದಿಸುವುದು ಮುಖ್ಯ. ಈಗಾಗಲೇ ಸಿದ್ಧವಾದುದನ್ನು ಮತ್ತೆ ಸಿದ್ಧಪಡಿಸಬೇಕಾಗಿಲ್ಲ. ಮಮ್ಮಟನಂತೂ ರುದ್ರಟನು ಉಪಮಾನಾಧಿಕ್ಯವನ್ನು ಪ್ರತಿಪಾದಿಸುವದೆಂದು ಹೇಳುವ ಉದಾಹರಣ ಶ್ಲೋಕವನ್ನು ಕುರಿತೂ ಚರ್ಚಿಸುತ್ತಾನೆ. '' ಚಂದ್ರನು ಕ್ಷೀಣನಾದರೂ ವರ್ಧಿಸುತ್ತಾನೆ. ಯೌವನವು ಹೋದರೆ ಮತ್ತೆ ಬಾರದು '' ಎಂಬಲ್ಲಿ ನಿಜವಾಗಿ ಪ್ರತಿಪಾದಿತವಾಗಿರುವುದು ಉಪಮೇಯವಾದ ಯೌವನದ ಆಧಿಕ್ಯ, ಕ್ಷಯ – ವೃದ್ಧಿಗಳಿರುವ ಚಂದ್ರನಲ್ಲಿ ಅವಕ್ಕೆ ಮಹತ್ವವಿಲ್ಲ. ಹೋದರೆ ಮತ್ತೆ ಬಾರದು. ಯೌವನ ಅಮೂಲ್ಯವಾದುದು. ಎಂಬ ತಾತ್ಪರ್ಯದ ಮಾತುಗಳನ್ನಾಡುತ್ತಾನೆ. ಮಮ್ಮಟನ ಅಭಿಪ್ರಾಯವನ್ನೇ ಹೇಮಚಂದ್ರ, ವಿದ್ಯಾಧರ, ಜಗನ್ನಾಥ ಮುಂತಾದವರು ಅನುಮೋದಿಸಿದ್ದಾರೆ.

ವ್ಯತಿರೇಕವು ಮೂಲತಃ ಆಧಿಕ್ಯವನ್ನು ಪ್ರತಿಪಾದಿಸುವ ಅಲಂಕಾರ. ಅದು ಉಪಮೇಯದ್ದೂ ಇರಬಹುದು; ಉಪಮಾನದ್ದೂ ಇರಬಹುದು. ಉಪಮಾನವು ಸ್ವಾಭಾವಿಕವಾಗಿಯೇ ಉಪಮೇಯಕ್ಕಿಂತ ಶ್ರೇಷ್ಠವಾಗಿರುವುದಾದರೂ ಅದರ ಹೆಚ್ಚಳವನ್ನು ಸಕಾರಣವಾಗಿ ಪ್ರತಿಪಾದಿಸಿದಾಗ ಚಮತ್ಕಾರಾತಿಶಯವುಂಟು. ಅದನ್ನು ಪರಿಗಣಿಸುವುದು ಅವಶ್ಯವೆಂದು ಮತ್ತೊಂದು ವಾದ. ರುದ್ರಟ, ರುಯ್ಯಕ, ವಿಶ್ವನಾಥ, ಪ್ರತಿಹಾರೇಂದು ರಾಜ, ವಿದ್ಯಾನಾಥ, ಅಪ್ಪಯ್ಯ ದೀಕ್ಷಿತ – ಮುಂತಾದ ಆಲಂಕಾರಿಕರು ಈ ಪ್ರಭೇದವನ್ನು ಸ್ವೀಕರಿಸಿದ್ದಾರೆ.

ಉಪಮೇಯದ ಆಧಿಕ್ಯವನ್ನು ಪ್ರತಿಪಾದಿಸುವುದನ್ನು ಮಾತ್ರ ವ್ಯತಿರೇಕವೆಂದೊಪ್ಪುವ ಮಮ್ಮಟ ವ್ಯತಿರೇಕದ ಭೇದಗಳನ್ನು ಕುರಿತು ವಿವರವಾಗಿ ಚರ್ಚಿಸಿದ್ದಾನೆ. ಉಪಮೇಯದ ಉತ್ಕರ್ಷದ ಕಾರಣ ಮತ್ತು ಉಪಮಾನದ ಅಪಕರ್ಷಗಳಿಗೆ ಕಾರಣವನ್ನು ಹೇಳುವುದು; ಉತ್ಕರ್ಷದ ಕಾರಣವನ್ನು ಹೇಳದಿರುವುದು; ಉಪಮಾನದ ಅಪಕರ್ಷದ ಕಾರಣವನ್ನು ಹೇಳದಿರುವುದು. ಎರಡನ್ನೂ ಹೇಳದಿರುವುದು ಎಂಬ ನಾಲ್ಕು ಭೇದಗಳ ಜೊತೆಗೆ ಶಬ್ದಸಾಮ್ಯ, ಅರ್ಥಸಾಮ್ಯ , ವ್ಯಂಗಸಾಮ್ಯಗಳ ಆಧಾರದ ಮೇಲೆ ಹನ್ನೆರಡು. ಶ್ಲೇಷಪೂರ್ವಕ , ಶ್ಲೇಷರಹಿತವೆಂದು ವಿಭಾಗಿಸಿದರೆ ಒಟ್ಟು ಇಪ್ಪತ್ನಾಲ್ಕು ಭೇದಗಳು ಸಾಧ್ಯವೆಂದು ಹೇಳುತ್ತಾನೆ.

ರುಯ್ಯಕನು ಕೇವಲ ಎರಡು ಭೇದಗಳನ್ನು ಹೇಳುತ್ತಾನೆ. ಉಪಮೇಯದ ಆಧಿಕ್ಯ ಪ್ರತಿಪಾದನೆ; ಉಪಮಾನದ ಆಧಿಕ್ಯ ಪ್ರತಿಪಾದನೆ. ಕುವಲಯಾನಂದಕಾರನು ಇವುಗಳ ಜೊತೆಗೆ ಅನುಭಯಪರ್ಯವಸಾಯಿ – ಉಪಮೇಯದ ಅಥವಾ ಉಪಮಾನದ ಆಧಿಕ್ಯವನ್ನು ಹೇಳದೆ ಕೇವಲ ಅವುಗಳ ಭೇದವನ್ನು ಹೇಳುವದೆಂಬ ಪ್ರಕಾರವನ್ನೂ ಅಂಗೀಕರಿಸುತ್ತಾನೆ. ಇದು ಸರಳವಾದುದೂ, ಸೂಕ್ತವಾದುದೂ ಆಗಿದೆಯೆನಿಸುತ್ತದೆ.

ಉದಾ :–

ಮಂಜು ಮಹಿಮಾಸ್ಪದಂ ಚಾರುವೃತ್ತಂ ಕಲಾ
ವ್ಯಂಜಂ ಸದಾನಭೋಗಂ ಕುವಲಯಪ್ರಿಯಂ
ರಂಜಿಸುವ ರಾಜನೆನ್ನವೊಲಾದೊಡಂ ಮಿತ್ರತೇಜ ಕಳವಳಿದು ಪಗೆಯ।
ಭಂಜನೆಗೆ ಸಿಲ್ಕಿ ಬಡತನವಟ್ಟು ಕಂದಿಪಳಿ
ವಂಜಗವರಿಯ ಪೊತ್ತನೆಂದು ಬಿಡದಮೃತಾರ್ಚಿ
ಯಂಜರೆದು ನಗುವನದರಿಂ – ಚಂದ್ರಹಾಸನಿವನಹನೆನೆ ಪೆಸರ್ವೆರೆದುದು ॥

ಇಲ್ಲಿ ಚಂದ್ರ ಹಾಗೂ ಚಂದ್ರಹಾಸರಲ್ಲಿ ತುಲನೆ ನಡೆದಿದೆ. ಮಂಜುಮಹಿಮಾಸ್ಪದತ್ವ (ಮಂಜುಳವಾದ ಮಹಿಮೆಯುಳ್ಳ, ತಂಪಾದ ಗುಣವುಳ್ಳ) ಚಾರುವೃತ್ತತ್ವ, ( ಒಳ್ಳೆಯ ನಡತೆಯುಳ್ಳ ದುಂಡಾಗಿರುವ ) ಕಲಾಪುಂಜತ್ವ ( ವಿವಿಧ ಕಲೆಗಳಿಂದ ಕೂಡಿದ, ಚಂದ್ರಕಳೆಗಳಿಂದ ತುಂಬಿದ) ಸದಾನಭೋಗತ್ವ (ದಾನಭೋಗಗಳಿಂದ ಕೂಡಿದ, ಸದಾಕಾಲವೂ ನಭೋಮಂಡಲದಲ್ಲಿ ಸಂಚರಿಸುವ ) ಕುವಲಯಪ್ರಿಯತ್ವ ( ಭೂಮಿಗೆ ಪ್ರಿಯನಾದ, ನೈದಿಲೆಗಳಿಗೆ ಪ್ರಿಯನಾದ ) ಗಳು ಅವರಿಬ್ಬರಿಗೂ ಸಮಾನ. ರಂಜಿಸುವ ಗುಣವುಳ್ಳ ಚಂದ್ರನೂ ರಾಜ; ಚಂದ್ರಹಾಸನೂ ರಾಜನು ಇವು ಅವರಿಬ್ಬರಲ್ಲಿರುವ ಸಾಮ್ಯಗಳಾಗಿವೆ. ಮಿತ್ರ( ಸೂರ್ಯ, ಸ್ನೇಹಿತ) ತೇಜದಿಂದ ಕಳೆಗುಂದುವುದು, ವೈರಿಯ ( ರಾಹುವಿನ ) ಭಂಜನೆಗೆ ಸಿಲುಕುವುದು , ಬಡತನ(ಕ್ಷೀಣತೆ) ಕ್ಕೆ ಅಳವಡುವುದು, ಪಳಿವನ್ನು (ಶಾಪ, ನಿಂದೆ) ಹೊಂದುವುದೇ ಮುಂತಾದವು ಉಪಮಾನವಾದ ಚಂದ್ರನಲ್ಲಿದ್ದು ಉಪಮಾನದ ಅಪಕರ್ಷಕ್ಕೆ ನಿಮಿತ್ತವಾಗಿವೆ. ಇಂಥ ದೋಷಗಳು ಚಂದ್ರಹಾಸನಲ್ಲಿಲ್ಲವಾದುದರಿಂದ ಉಪಮಾನವಾದ ಚಂದ್ರನಿಗಿಂತಲೂ ಉಪಮೇಯವಾದ ಚಂದ್ರಹಾಸನೇ ಶ್ರೇಷ್ಠ. ಅವನು ಚಂದ್ರನನ್ನು ಜರೆದು ನಗುವುದರಿಂದ ಚಂದ್ರಹಾಸನೆಂಬ ಹೆಸರು ಇವನಿಗೆ ಬಂತು – ಎಂದು ಕವಿಯು ಉಪಮೇಯದ ಆಧಿಕ್ಯವನ್ನು ನಿರೂಪಿಸುತ್ತಾನೆ. ಇಲ್ಲಿ ವ್ಯತಿರೇಕವು ಶ್ಲೇಷದ ನೆರವನ್ನು ಪಡೆದಿರುವುದನ್ನು ಗಮನಿಸಬಹುದು.

ಸುದತಿಯರಂಘ್ರಿಪಾದದೊಳೆ ಪಲ್ಲವಿಸಿರ್ದನುರಕ್ತತೆ ಪೆ
ರ್ಚಿದ ಸುಮನಶ್ಶಿಳೀ ಮುಖ ವಿಕಾರಮೆ ಈ ತರುರಾಜನೆಮ್ಮೊಳಿಂ।
ತಿದು ಸಮವಾಗಲಾಂ ಸಲೆಸಶೋಕನೆನಾದೆ ನಶೋಕನಾದುದಿಂ
ತಿದು ವಿಪರೀತಮೆಂದು ಪೊಗಳ್ದಂ ಪರಿಹಾಸಕನಂದಶೋಕಮಂ ॥

——ಜಗನ್ನಾಥ ವಿಜಯ – ೧೪ –೬೬.

ಇಲ್ಲಿ ಪರಿಹಾಸಕನು ತನಗೂ ಅಶೋಕ ವೃಕ್ಷಕ್ಕೂ ಇರುವ ಸಾಮ್ಯ ಹಾಗೂ ಭೇದಗಳನ್ನು ನಿರೂಪಿಸಿದ್ದಾನೆ. ಸುಂದರಿಯರ ಕಾಲಿನ ಒದೆತದಿಂದ ಅಶೋಕ ವೃಕ್ಷವು ಪಲ್ಲವಿಸುತ್ತದೆ. ಇವನೂ ಪಲ್ಲವಿಸುತ್ತಾನೆ. ( ರೋಮಾಂಚಗೊಳ್ಳುತ್ತಾನೆ.) ಅಶೋಕವೃಕ್ಷವು ಕೆಂಪು ಹೂಗಳಿಂದ ಕೂಡಿದೆ, ಇವನು ಪ್ರೇಮಾಸಕ್ತನಾಗಿದ್ದಾನೆ. (ಅನುರಕ್ತವೃತ್ತಿ), ಅಶೋಕದ ಹೂಗಳಿಗೆ ದುಂಬಿಗಳು ಮುತ್ತಿದ್ದರಿಂದ ಸುಮನಶ್ಶಿಳೀ ಮುಖ ವಿಕಾರಃ ಇವನಿಗೆ ಮನ್ಮಥನ ಹೂವಿನ ಬಾಣದ

ಹೊಡೆತದಿಂದ ಮುಖ ವಿಕಾರವಾಗಿದೆ. ಹೀಗೆ ಸುದತಿಯರ ಅಂಘ್ರಿಪಾದದೊಳ್ ಪಲ್ಲವಿಸಿರ್ದುದು, ಅನುರಕ್ತವೃತ್ತಿ ಸುಮನಶ್ರೀಳೀ ಮುಖ ವಿಕಾರಗಳೆಂಬ ಧರ್ಮಗಳು ಇಬ್ಬರಲ್ಲಿಯೂ ಸಮಾನ. ಆದರೆ ಪರಿಹಾಸಕನು ಸಶೋಕ ( ಶೋಕದಿಂದ ಕೂಡಿದವನು ) ವೃಕ್ಷವು ಅಶೋಕ (ಶೋಕರಹಿತ) ಎಂದು ಅಶೋಕ ವೃಕ್ಷವನ್ನೂ ಸ್ತುತಿಸಿದನೆಂದು ಕವಿಯು ಹೇಳುತ್ತಾನೆ. ಇಲ್ಲಿ ಉಪಮೇಯವಾದ ಪರಿಹಾಸಕನಿಗಿಂತಲೂ ಉಪಮಾನವಾದ ಅಶೋಕದಲ್ಲಿರುವ ಆಧಿಕ್ಯವನ್ನು ಕವಿಯು ಎತ್ತಿ ಹೇಳುತ್ತಾನಾದ್ದರಿಂದ ಇದು ಉಪಮಾನಾಧಿಕ್ಯವನ್ನು ಪ್ರತಿಪಾದಿಸುವ ವ್ಯತಿರೇಕವಾಗಿದೆ. ಇದನ್ನೇ ಉಪಮೇಯ ನ್ಯೂನತಾಪರ್ಯವಸಾಯಿ ವ್ಯತಿರೇಕವೆಂದು ಕುವಲಯಾನಂದದಲ್ಲಿ ಹೇಳಿದೆ.

ಮೇಲಿನ ಎರಡೂ ಉದಾಹರಣೆಗಳಲ್ಲಿ ಶ್ಲೇಷವು ವ್ಯತಿರೇಕವನ್ನು ಪೋಷಿಸಿದೆ. ಶ್ಲೇಷವಿಲ್ಲದೆಯೂ ವ್ಯತಿರೇಕವು ಸಂಭವಿಸಲು ಸಾಧ್ಯ.

ಉದಾ :–

ಅತನು ಶ್ರೀಕಾಂತಗೀಕಾಂತೆಯ ಮಿಗಿಲೆನೆ ಕಾರ್ಗಾಲದೊಳ್ ಹಂಸಿ ಲೀಲಾ
ಗತಿಯಂ ಹೇಮಂತದೊಳ್ಕೋಗಿಲೆ ಕಳರುತಿಯಂ ಗ್ರೀಷ್ಮದೊಳ್ ಕರ್ಣಿಕಾರಂ ।
ದ್ಯುತಿಯಂ ತನ್ನಂತ ಚೆಲ್ವಂ ತಳೆಯವೆನಿಸಿ ಲಕ್ಷ್ಮೀ ಮಹಾದೇವಿ ಧಾತ್ರೀ
ಪತಿಯ ಸರ್ವಾಂಗ ಸೌಂದರ್ಯದಿ ನೆರಗಿಸಿ ಸೌಭಾಗ್ಯ ಸಂಪನ್ನೆಯಾದಳ್ ॥

—— ಮ.ಪು.ಸಂ. ೨೪.

ಇಲ್ಲಿ ಲಕ್ಷ್ಮೀ ಮಹಾದೇವಿಯು ಶರೀರವಿಲ್ಲದ ಲಕ್ಷ್ಮಿಗಿಂತ ಹೆಚ್ಚು ; ಮಳೆಗಾಲದಲ್ಲಿ ಹಂಸವು ಲೀಲಾಗತಿಯನ್ನು , ಹೇಮಂತದಲ್ಲಿ ಕೋಗಿಲೆಯು ಕಲರವವನ್ನು , ಗ್ರೀಷ್ಮದಲ್ಲಿ ಕರ್ಣಿಕಾರವು ದ್ಯುತಿಯನ್ನು ಹೊಂದಲಾರವು. ಇವಳು ಅವುಗಳಿಗಿಂತ ಚೆಲ್ವಿನಲ್ಲಿ ಮಿಗಿಲೆನಿಸಿ, ಅರಸನನ್ನು ಸರ್ವಾಂಗ ಸೌಂದರ್ಯದಿಂದ ಮೆಚ್ಚಿಸಿ ಸೌಭಾಗ್ಯ ಸಂಪನ್ನೆಯಾದಳೆಂದು ಕವಿ ವರ್ಣಿಸಿದ್ದಾನೆ. ಉಪಮಾನಗಳಾದ ಲಕ್ಷ್ಮಿ , ಹಂಸ, ಕೋಗಿಲೆ, ಕರ್ಣಿಕಾರಗಳಲ್ಲಿರುವ ದೋಷಗಳನ್ನು ಎತ್ತಿತೋರುವ ಮೂಲಕ ಕವಿಯು ಉಪಮೇಯವು ದೋಷರಹಿತವಾದುದರಿಂದ ಶ್ರೇಷ್ಠವೆಂದು ನಿರೂಪಿಸಿದ್ದಾನೆ. ಇಲ್ಲಿ ಶ್ಲೇಷವಿಲ್ಲವೆಂಬುದನ್ನು ಗಮನಿಸಬೇಕು.

## ವ್ಯತಿರೇಕ ಮತ್ತು ಪ್ರತೀಪ .

**ಸಾಮ್ಯ** :– ಎರಡೂ ಅಲಂಕಾರಗಳಲ್ಲಿಯೂ ಉಪಮಾನಕ್ಕಿಂತ ಉಪಮೇಯವು ಶ್ರೇಷ್ಠವೆಂಬುದರ ಪ್ರತಿಪಾದನೆಯಿರುತ್ತದೆ.

**ವೈಷಮ್ಯ** :– (೧) ಪ್ರತೀಪದಲ್ಲಿ ಉಪಮಾನದ ನಿರರ್ಥಕತೆಯನ್ನು ಪ್ರತಿಪಾದಿಸುವ ಮೂಲಕ ಅಥವಾ ಉಪಮಾನವನ್ನು ಉಪಮೇಯವನ್ನಾಗಿಸುವ ಮೂಲಕ ಉಪಮೇಯದ ಆಧಿಕ್ಯವನ್ನು ಪ್ರತಿಪಾದಿಸಲಾಗುತ್ತದೆ. ಆದರೆ ವ್ಯತಿರೇಕದಲ್ಲಿ ಉಪಮೇಯದ ಉತ್ಕರ್ಷವನ್ನು ಹೇಳುವುದರ ಮೂಲಕ ಅಥವಾ ಉಪಮಾನದ ಅಪಕರ್ಷವನ್ನು ಹೇಳುವುದರ ಮೂಲಕ ಅಥವಾ

ಅವೆರಡನ್ನೂ ಹೇಳದೆ , ಉಪಮೇಯದ ಆಧಿಕ್ಯವನ್ನು ಪ್ರತಿಪಾದಿಸಲಾಗುತ್ತದೆ. ಅಂದರೆ ವ್ಯತಿರೇಕದಲ್ಲಿ ಉಪಮೇಯದ ಆಧಿಕ್ಯ ಸ್ಥಾಪನೆಯತ್ತ ಕವಿಯ ಲಕ್ಷ್ಯ ಕೇಂದ್ರೀಕೃತವಾಗಿರುತ್ತದೆ. ಆದರೆ ಪ್ರತೀಪದಲ್ಲಿ ಉಪಮಾನದ ತಿರಸ್ಕಾರವೇ ಮುಖ್ಯವಾಗುತ್ತದೆ.

(೨) ವ್ಯತಿರೇಕವು ಸಾಧರ್ಮ್ಯ – ವೈಧರ್ಮ್ಯಗಳೆರಡರಲ್ಲಿಯೂ ಸಾಧ್ಯ. ಆದರೆ ಪ್ರತೀಪವು ಸಾಧರ್ಮ್ಯದಲ್ಲಿ ಮಾತ್ರ ಸಾಧ್ಯ.

ಪ್ರತೀಪ ಮತ್ತು ವ್ಯತಿರೇಕಗಳೆರಡೂ ಉಪಮೇಯದ ಆಧಿಕ್ಯ ಪ್ರತಿಪಾದನೆಯ ಗುರಿಯಿಂದ ಹೊರಟ ಅಲಂಕಾರಗಳು. ಅವು ಗುರಿಯನ್ನು ಸಾಧಿಸುವ ದಾರಿಯಲ್ಲಿ ಸ್ವಲ್ಪ ಭೇದವಿದೆ. ಅಂದರೆ ವ್ಯತಿರೇಕದ ವಿಸ್ತಾರವಾದ ಪರಿಧಿಯು ಒಂದು ಅಂಶವನ್ನು ಪ್ರತೀಪ ಬಳಸಿಕೊಂಡಿದೆಯೆಂದರೆ ತಪ್ಪಲ್ಲ. ಜಗನ್ನಾಥನು ಪ್ರತೀಪವನ್ನು ಕುರಿತು ಮನನೀಯವಾದ ಮಾತುಗಳನ್ನಾಡಿದ್ದಾನೆ. ಅದರ ಐದನೆಯ ಪ್ರಭೇದವನ್ನು ವ್ಯತಿರೇಕದಲ್ಲಿ ಅಂತರ್ಗತ –ಗೊಳಿಸಬಹುದೆನ್ನುತ್ತಾನೆ. ಆಧುನಿಕ ಸಂದರ್ಭದಲ್ಲಿ ಪ್ರತೀಪದ ಎಲ್ಲ ಭೇದಗಳನ್ನೂ ವ್ಯತಿರೇಕದಲ್ಲಿ ಸೇರಿಸಬಹುದೆನಿಸುತ್ತದೆ.

**ಅನ್ಯ ಉದಾಹರಣೆಗಳು :**

ಅತುಳ ಮಧು ಪ್ರಕೀರ್ಣಮಯ ಪಂಕರುಹೋದ್ಭವನುಂ ರಜಸ್ಸಮಾ
ವೃತಧೃತಿಯುಂ ಜಡಪ್ರಕೃತಿಯುಂ ಚತುರಾಸ್ಯನೆನುತ್ತ ಮೇಳಿಪಂ
ಕ್ಷಿತಿಸುತ ಪಾವನೀಯ ಕುಲಜತ್ವದಿನುಜ್ವಲ ಚಿತ್ತದಿಂ ಸಮು
ನ್ನತ ಚತುರತ್ವದಿಂದೆಸೆದು ತತ್ಸುತನಾ ಮತಿವರ್ಧನಾಹ್ವಯಂ ||

—— ಕುಸುಮಾ – ೧– ೨೯

ಗಂಡನನೋರ್ವಳೂರ್ವಶಿಗೆ ಗಂಗೆಗೆ ಗೋಪಿಗೆ ಕೊಟ್ಟರೆಂದೊಡಾ
ಪೆಂಡಿರ ರೂಪುಮಂ ಸೊಬಗುಮಂ ಗುಣಮಂ ಪೆಸರ್ಗೊಳ್ವುದೇ ಮನಂ |
ಗೊಂಡಳನಂಗನಂ ರತಿಯೆನಲ್ ಚದುರೆತ್ತಣದಾಕೆಗೆಂದು ಕ
ಣ್ಗೊಂಡ ವಿಲಾಸದಿಂ ನಗುವುದಲ್ಲಿಯ ವಾರವಿಲಾಸಿನೀ ಜನಂ ||

—— ಮ.ಪು.ಸಂ –.೨೦.

ಜಗದಿತರ ವಸ್ತುಗಳ ಚೆಲುವ ಶಂಕಿಸುವಂಥ ಕೊರಲಕೊಂಕು
ಬೆಳ್ಳಿ ಬೆಳ್ಮಲರು ಬೆಳದಿಂಗಳೀ ಮೈಯ ಬಿಳುಪಿದಿರು ಮಂಕು
ಡೊಂಕು ಲೇಖೆಗಳೆಲ್ಲ ಚೆಲುವಿನಂಕೆಗೆ ಸಂದು ಬಿಂಕದೊಳಗೆ
ಮಿಕ್ಕೆಲ್ಲಾ ರೂಪಗಳ ನಗುತಲಿವೆ ನಿನ್ನ ಸಂಗಡಿಕೆಯೊಳಗೆ .

—— ಪು.ತಿ.ನ –'ಹಂಸದಮಯಂತಿ'

ಹಾರದೊಳಗಿನ ಮುತ್ತು
ಒಡೆದುಹೋದರು ಹತ್ತು
ಮತ್ತೆ ತರಬಹುದಂತೆ ಪೇಟೆಯಿಂದೆ
ಹೃದಯದೊಲವಿನ ಮುತ್ತು
ಕಳಚಿ ಬಿದ್ದರೆ ಬಿತ್ತು
ತಿರುಗಿ ಬರಲಾರದು ಕೇಳು ಅಂದೆ.

— ದಿನಕರ ದೇಸಾಯಿ 'ಹೂಗೊಂಚಲು'

ಬತ್ತುವವು ಮುಂದಾಗಿ ಕಡಲುಗಳು , ಎಲೆ ಚಲುವೆ ,
ಕರಗುವವು ಬಂಡೆಗಳು ಬಿಸಿಲಿನೊಳಗೆ
ಕರಗಲಾರದು ಚೂರು ಪ್ರೇಮದೊಳಗೆಲೆ ಚಲುವೆ .
ಬೆರೆದಿರಲು ಜೀವಕಳೆ ದೇಹದೊಳಗೆ .

— ಬಿ. ಎಂ. ಶ್ರೀ – ' ಇಂಗ್ಲೀಷ್ ಗೀತಗಳು ' .

ಮುತ್ತಿಗೂ ಮಿಗಿಲಾಗಿ ಹೂವಿಗೂ ಹಿರಿದಾಗಿ
ಬೆವರ್ಹನಿ ಬಾಸಿಂಗ ತುಳುಕುತಿರೆ
ನತ್ತನು ನಾಚಿಸಿ ಬೆವರಿನ ಹನಿಯೊಂದು
ಮೂಗುಬಟ್ಟಿನ ಅಂದ ಮಿನುಗುತಿರೆ.

— ದ. ರಾ. ಬೇಂದ್ರೆ –' ಸಖೀಗೀತ ' .

ಸರಿಯೆಂದೆನಲ್ಲೆ ? ಮಿಗಿಲೆನಬೇಕು ಇನಿಸು
ತಾರೆಗಳು ಒಂದೆ ಭಾವದಲಿ ಹೊಳೆಯುವವು
ಅರಿಯುವವು ಒಂದನೊಂದನನುಸರಿಸಿ ಬರುವ
ನೂರುಭಾವದ ನಿನ್ನ ಕಣ್ಣ ಹಿರಿಕಲಿವ .

— ಮಾಸ್ತಿ – 'ತಾವರೆ ' (ಪುಟ –೪೯)

# ೬. ದೃಷ್ಟಾಂತ.

**ಲಕ್ಷಣ:–** ಉಪಮೇಯ ವಾಕ್ಯ ಮತ್ತು ಉಪಮಾನ ವಾಕ್ಯಗಳಲ್ಲಿ ನಿರ್ದೇಶಿಸಲ್ಪಟ್ಟ ಭಿನ್ನ ಧರ್ಮಗಳಲ್ಲಿ ಬಿಂಬ – ಪ್ರತಿಬಿಂಬ ಭಾವವಿದ್ದರೆ ಅದು ದೃಷ್ಟಾಂತಾಲಂಕಾರ.

(**ಚೇದ್ ಬಿಂಬ – ಪ್ರತಿಬಿಂಬತ್ವಂ ದೃಷ್ಟಾಂತಸ್ತದಲಂಕೃತಿ :** – ಕುವಲಯಾನಂದ).

ದೃಷ್ಟಾಂತವೆಂಬ ಪದಕ್ಕೆ ಉದಾಹರಣೆಯೆಂಬ ಅರ್ಥವನ್ನು ಹೇಳಬಹುದು. ಇದು ಶಾಸ್ತ್ರಗಳಲ್ಲಿ ತುಂಬ ಪ್ರಸಿದ್ಧವಾದುದು. ತತ್ವಪ್ರತಿಪಾದನೆಗೆ ಹೊರಟಾಗ ಕೇಳುವವನಿಗೆ ಅರ್ಥವಾಗಲೆಂದು ಕೊಡುವ ಉದಾಹರಣೆಯನ್ನೇ ದೃಷ್ಟಾಂತವೆಂದೋ, ಉಪಮೆಯೆಂದೋ, ಸಾಮತಿಯೆಂದೋ , ಕರೆಯುವ ರೂಢಿಯಿದೆ. ಗೌತಮನ ನ್ಯಾಯದರ್ಶನದಲ್ಲಿ ಹದಿನಾರು ಪದಾರ್ಥಗಳನ್ನು ಹೇಳುವಾಗ ದೃಷ್ಟಾಂತವೂ ಸೇರಿದೆ. 'ಶಾಸ್ತ್ರಜ್ಞಾನವಿಲ್ಲದ ಲೌಕಿಕರು ಹಾಗೂ ಶಾಸ್ತ್ರವೇತ್ತರಾದ ಪರೀಕ್ಷಕರು ಸಮಾನವಾಗಿ ಗ್ರಹಿಸುವಂಥದು ದೃಷ್ಟಾಂತ. (**ಲೌಕಿಕ ಪರೀಕ್ಷಕಾಣಾಂ ಯಸ್ಮಿನ್ನರ್ಥೇ ಬುದ್ಧಿ ಸಾಮ್ಯಂ ದೃಷ್ಟಾಂತ :** – ನ್ಯಾಯ ಸೂತ್ರ ೧ – ೨೫) . ಇದರಿಂದ ಸಿದ್ಧಾಂತವು ಹೀಗಿದೆಯೆಂಬುದನ್ನು ತಿಳಿಯಲು ಸುಲಭವಾಗುತ್ತದೆಯೆಂದೂ ನ್ಯಾಯಭಾಷ್ಯದಲ್ಲಿ ಹೇಳಿದೆ. ಯೋಗ್ಯವಾದ ದೃಷ್ಟಾಂತವಿಲ್ಲದಿದ್ದರೆ ವಾದವು ತನ್ನ ಮೊನಚನ್ನು ಕಳೆದುಕೊಳ್ಳುತ್ತದೆ. ಈ ದೃಷ್ಟಿಯಿಂದ ದೃಷ್ಟಾಂತ – ಸಿದ್ಧಾಂತಗಳಿಗೆ ಅತ್ಯಂತ ಆತ್ಮೀಯವಾದ ಸಂಬಂಧವಿದೆ. ಅದಕ್ಕಾಗಿಯೇ ಇದನ್ನು ವಿವರಿಸುವಾಗ ಮಮ್ಮಟನು ' ನಿಶ್ಚಯವನ್ನು ತೋರುವಂಥದು ದೃಷ್ಟಾಂತ ' (**ದೃಷ್ಟೋಽಂತಃ ನಿಶ್ಚಯಃ ಯತ್ರ ಸದೃಷ್ಟಾಂತಃ** – ಕಾವ್ಯಪ್ರಕಾಶ) ಎಂದು ಹೇಳುತ್ತಾನೆ. ' ಅಂತ ' ಎಂಬ ಪದಕ್ಕೆ ' ನಿಶ್ಚಯ ' ಎಂಬ ಅರ್ಥವೂ ಇದೆಯೆಂಬುದನ್ನು ಗಮನಿಸಬೇಕು.

ಶಾಸ್ತ್ರಗಳಲ್ಲಿ, ತತ್ವವೇತ್ತರ ಪ್ರವಚನಗಳಲ್ಲಿ ದೃಷ್ಟಾಂತವು ಸುಪ್ರತಿಷ್ಠಿತವಾಗಿದ್ದರೂ ಅಲಂಕಾರ ಶಾಸ್ತ್ರದಲ್ಲಿ ಅಲಂಕಾರವೆಂದು ಮನ್ನಣೆ ಪಡೆಯಲು ಸಾಕಷ್ಟು ಕಾಯಬೇಕಾಯಿತು. ಪ್ರಾಚೀನರಾದ ಭಾಮಹ, ದಂಡಿಗಳು ದೃಷ್ಟಾಂತವನ್ನು ಹೇಳಿಲ್ಲ. ಇದನ್ನು ಪ್ರಥಮವಾಗಿ ಅಲಂಕಾರವೆಂದು ಗುರುತಿಸಿದವನು ಉದ್ಭಟ. ಬಿಂಬ – ಪ್ರತಿಬಿಂಬ ಭಾವವಿರುವಲ್ಲಿ ಹಾಗು ಔಪಮ್ಯ ಸೂಚಕ ಪದಗಳಿಲ್ಲದಿದ್ದಲ್ಲಿ ದೃಷ್ಟಾಂತವೆಂದು ಅವನು ಹೇಳುತ್ತಾನೆ. ( **ಇಷ್ಟಾರ್ಥಸ್ಯ ವಿಸ್ಪಷ್ಟ ಪ್ರತಿಬಿಂಬ ನಿದರ್ಶನಮ್ । ಯಥೈವಾದಿ ಪದೈಃ ಶೂನ್ಯಂ ಬುಧೈಃ ದೃಷ್ಟಾಂತ ಉಚ್ಯತೇ** – ಉದ್ಭಟ.) ಮಮ್ಮಟನ ಕಾಲಕ್ಕಾಗಲೇ ದೃಷ್ಟಾಂತದ ರೂಪ ಖಚಿತಗೊಂಡಿತ್ತೆಂದು ಕಾಣುತ್ತದೆ. ಅವನು ಬಿಂಬ – ಪ್ರತಿಬಿಂಬ ಭಾವವನ್ನು ದೃಷ್ಟಾಂತದಲ್ಲಿ ಹೇಳುವುದರ ಜೊತೆಗೆ ವೈಧರ್ಮ್ಯದ ಮೂಲಕವೂ ದೃಷ್ಟಾಂತವು ಸಾಧ್ಯವೆಂಬುದನ್ನು ತೋರಿಸುತ್ತಾನೆ. ಅನಂತರದ ಆಲಂಕಾರಿಕರು ಹೆಚ್ಚು ಕಡಿಮೆ ಮಮ್ಮಟನ ವಿವರಣೆಯನ್ನು ಒಪ್ಪಿಕೊಂಡರು. ಗಣನೀಯವಾದ ಯಾವ ಹೊಸ ಅಂಶವನ್ನೂ ಸೇರಿಸಲು ಹೋಗಲಿಲ್ಲ.

ಶಾಸ್ತ್ರಗಳಲ್ಲಿ ತತ್ವಬೋಧೆಗೆಂದು ಬಳಸುವ ದೃಷ್ಟಾಂತಕ್ಕೂ, ಕಾವ್ಯಗಳಲ್ಲಿ ಬಳಸುವ ದೃಷ್ಟಾಂತಕ್ಕೂ ಹೋಲಿಕೆಯಿದೆಯಾದರೂ ಅವುಗಳ ಉದ್ದೇಶ ಬೇರೆ. ಕಾವ್ಯಗಳಲ್ಲಿ ಸೌಂದರ್ಯಾಂಶಕ್ಕೆ ಪ್ರಾಶಸ್ತ್ಯ. ಆದ್ದರಿಂದ ಇಲ್ಲಿ ಸರಸವಾದ ದೃಷ್ಟಾಂತಗಳಿಗೆ ಅಗ್ರಸ್ಥಾನ. ಅದಕ್ಕೆ ಆಧಾರಭೂತವಾದ ತತ್ವ ಬಿಂಬ – ಪ್ರತಿಬಿಂಬ ಭಾವ. ಇದರ ಸ್ವರೂಪವನ್ನು ಈಗಾಗಲೇ ಗಮನಿಸಿದ್ದೇವೆ. ಎರಡು ವಾಕ್ಯಗಳಲ್ಲಿ ಭಿನ್ನ ಭಿನ್ನ ಧರ್ಮಗಳು ಭಿನ್ನ ಭಿನ್ನ ಪದಗಳಿಂದ ಉಕ್ತವಾಗಿದ್ದಾಗಲೂ ಅವುಗಳಲ್ಲಿ ಕಂಡುಬರುವ ಸಾದೃಶ್ಯ ಬಿಂಬ – ಪ್ರತಿಬಿಂಬ ಭಾವವಾಗಿರುತ್ತದೆ. ಉದಾ :– ''ಮುಖವು ಅರಳಿತು'' ''ಚಂದ್ರನು ಉದಯಿಸಿದನು'' ಈ ಎರಡು ವಾಕ್ಯಗಳಲ್ಲಿ ಉಕ್ತವಾದ ಧರ್ಮಗಳು ಬೇರೆ ಬೇರೆ. 'ಅರಳುವಿಕೆ' ಎಂಬುದು ಮುಖದಲ್ಲಿರುವ ಧರ್ಮ. 'ಉದಯಿಸುವಿಕೆ' ಚಂದ್ರನಲ್ಲಿರುವ ಧರ್ಮ. ಅವು ನಿಜಕ್ಕೂ ಬೇರೆಬೇರೆಯಾಗಿದ್ದರೂ ಅವುಗಳನ್ನು ಒಟ್ಟಾಗಿ ಇಟ್ಟಾಗ ಏನೋ ಒಂದು ವಿಧವಾದ ಸಾಮ್ಯ ಕಂಡು ಬರುತ್ತದೆ. ಈ ಸಾಮ್ಯವನ್ನೇ ಬಿಂಬ– ಪ್ರತಿಬಿಂಬ ಭಾವವೆಂದು ಗುರುತಿಸುತ್ತೇವೆ.

ದೃಷ್ಟಾಂತದಲ್ಲಿ ಎರಡು ವಸ್ತುಗಳನ್ನು ಎದುರು ಬದುರಾಗಿ ನಿಲ್ಲಿಸಿ ಅವುಗಳ ಧರ್ಮ ಸಾಮ್ಯದತ್ತ ಗಮನ ಸೆಳೆಯುವುದು ಸ್ವಾರಸ್ಯಕರವಾದುದು. ಕವಿಯು ಬೇರೆಬೇರೆ ವಸ್ತುಗಳಲ್ಲಿರುವ ಧರ್ಮಗಳನ್ನು ಬೊಟ್ಟು ಮಾಡಿ ತೋರಿಸಿ ಸುಮ್ಮನಾಗುತ್ತಾನೆ. ಅದನ್ನು ಗಮನಿಸಿದ ಸಹೃದಯನು ಅವುಗಳಲ್ಲಿ ಅಂತರ್ಗತವಾದ ಸಾಮ್ಯವನ್ನು ತಾನೇ ಊಹಿಸಿಕೊಳ್ಳಬೇಕು. ಅದು ಪರ್ಯಾಲೋಚನೆಯಿಂದ ತಿಳಿದು ಬರುವ ವಿಚಾರ. ಒಮ್ಮೊಮ್ಮೆ ಕವಿಯ ಮಾತು ಅಸಂಗತವೆನಿಸಿದರೂ ಆಶ್ಚರ್ಯವಲ್ಲ. ಇದನ್ನೇ ಔಪಮ್ಯವು ಗಮ್ಯವಾಗಿರುವದೆನ್ನುತ್ತಾರೆ. ಅದರ ಬದಲಿಗೆ ಕವಿಯೇ ವಾಚ್ಯವಾಗಿ ಹೇಳಿದರೆ ಅದು ದೃಷ್ಟಾಂತವೆನಿಸುವುದಿಲ್ಲ. ಅದು ಉದಾಹರಣವೆಂಬ ಅಲಂಕಾರವಾಗುತ್ತದೆ ಅಥವಾ ಉಪಮೆಯೇ ಆಗುತ್ತದೆ.

ದೃಷ್ಟಾಂತವನ್ನು ಕೊಡುವಾಗ ಸಾಧರ್ಮ್ಯವಿರುವವುಗಳನ್ನೇ ಕೊಡಬೇಕೆಂದೇನೂ ಇಲ್ಲ. ವೈಧರ್ಮ್ಯ ಮೂಲಕವಾಗಿಯೂ ಆಗಬಹುದು. ಉದಾ :– ''ನಿನ್ನನ್ನು ಕಂಡೊಡನೆ ವೈರಿಗಳು ಓಡುತ್ತಾರೆ. ಗಾಳಿಯಿಲ್ಲದಾಗ ಧೂಳು ಹಾರುವುದಿಲ್ಲ'' ಇಲ್ಲಿ ವೈಧರ್ಮ್ಯವಿದೆಯಾದರೂ ಅದು ನಿರೂಪಿಸುವ ಅಂಶವನ್ನು ಸಮರ್ಥಿಸುತ್ತದೆ. ಶಾಸ್ತ್ರದಲ್ಲಿಯೂ ಅನ್ವಯ –ವ್ಯತಿರೇಕಗಳೆಂಬ ವಿಭಾಗಗಳುಂಟು. ಅದನ್ನೇ ಕಾವ್ಯಗಳಲ್ಲಿಯೂ ಕಾಣಬಹುದು. ಮಾತಿನ ವಿಧಾನದ ಬದಲಾವಣೆಯಷ್ಟೇ. 'ಹೊಗೆಯಿದ್ದಲ್ಲಿ ಬೆಂಕಿ ಇರುತ್ತದೆ' ಎಂದೂ ಹೇಳಬಹುದು. 'ಬೆಂಕಿಯಿಲ್ಲದಿರುವಾಗ ಹೊಗೆಯಿಲ್ಲ' ಎಂದೂ ಹೇಳಬಹುದಷ್ಟೇ?

**ನಿಂದಿಸುವ ದುರ್ಜನರೆಂ**
**ಬೊಂದು ಭಯಂ ಬೆತ್ತು ಸುಕವಿರಚಿಸನೆ ಕೃತಿಯಂ।**
**ಮಂದೇಹರ ಭಯದಿಂದರ**
**ವಿಂದಸಖಂ ನಿಜಮಯೂಖಮಂ ಪಸರಿಸನೇ ॥**

— ರಾ.ವಿ–೧–೩೧.

ಇಲ್ಲಿ ಎರಡು ವಾಕ್ಯಗಳಿವೆ. **' ನಿಂದಿಸುವರ್ ದುರ್ಜನರೆಂಬೊಂದು ಭಯಂ ಬೆತ್ತು ಸುಕವಿರಚಿಸನೆ ಕೃತಿಯಂ '** ಎನ್ನುವುದು ಮೊದಲ ವಾಕ್ಯ. 'ದುರ್ಜನರು ನಿಂದಿಸುವರೆಂಬ ಭಯದಿಂದ ಸುಕವಿಯು ಕೃತಿಯನ್ನು ರಚಿಸುವುದಿಲ್ಲವೆ?' **'ಮಂದೇಹರ ಭಯದಿಂದರವಿಂದ ಸಖಂ ನಿಜಮಯೂಖಮಂ ಪಸರಿಸನೇ '** – ಗೂಗೆಗಳ ಭಯದಿಂದ ಸೂರ್ಯನು ತನ್ನ ಕಿರಣಗಳನ್ನು ಪಸರಿಸುವದಿಲ್ಲವೇ ? ಎಂಬುದು ಎರಡನೆಯ ವಾಕ್ಯ. ಮೊದಲ ವಾಕ್ಯದಲ್ಲಿ **'ಕೃತಿಯಂ ರಚಿಸನೆ '** ಎನ್ನುವುದು ಧರ್ಮವಾಗಿದ್ದರೆ, ಎರಡನೆಯ ವಾಕ್ಯದಲ್ಲಿ **'ಮಯೂಖಮಂ ಪಸರಿಸನೆ? '** ಎನ್ನುವುದು ಧರ್ಮ. ವಾಸ್ತವವಾಗಿ ಅವೆರಡೂ ಬೇರೆ ಬೇರೆ ಧರ್ಮಗಳಾಗಿದ್ದರೂ ಅವುಗಳಲ್ಲಿ ಸಾಮ್ಯವಿದೆಯಾದ್ದರಿಂದ ಔಪಮ್ಯ ಬೋಧೆಯಾಗುವದನ್ನು ಗಮನಿಸಬಹುದು.

ಇಲ್ಲಿ ಎರಡು ಧರ್ಮಗಳ ಸಾಮ್ಯಕ್ಕಷ್ಟೇ ದೃಷ್ಟಾಂತವು ಸಮಾಪ್ತಗೊಳ್ಳುವುದಿಲ್ಲ. ಉಪಮಾನ – ಉಪಮೇಯ ಮುಂತಾಗಿ ಎಲ್ಲ ವಸ್ತುಗಳಿಗೂ ಬಿಂಬ – ಪ್ರತಿಬಿಂಬ ಕಲ್ಪನೆಯಿದೆ. ಮೇಲಿನ ಉದಾಹರಣೆಯಲ್ಲಿ – ಸುಕವಿ –ರವಿ ; ದುರ್ಜನರು, ಮಂದೇಹರು, ಕೃತಿರಚನೆ – ಮಯೂಖಪ್ರಸಾರ. ಇದನ್ನೇ ಮಮ್ಮಟನು **' ಏತೇಷಾಂ ಸರ್ವೇಷಾಂ ಪ್ರತಿಬಿಂಬನಮ್ '** – ಈ ಎಲ್ಲವುಗಳ ಪ್ರತಿಬಿಂಬನವೆನ್ನುತ್ತಾನೆ. ಧರ್ಮದ ಪ್ರತಿಬಿಂಬನದಿಂದ ಈ ಎಲ್ಲವೂ ಸಾಧ್ಯವಾಗುವದೆಂಬ ಅಭಿಪ್ರಾಯ ಈ ಮಾತಿನಲ್ಲಿದೆ. ವಾಚ್ಯವಾಗಿ ಹೇಳುವುದಾಗಿದ್ದರೆ ಇವೆಲ್ಲವನ್ನೂ ಕವಿಯು ಹೇಳಬೇಕಾಗಿತ್ತು. ಅದು ನೀರಸವಾಗುತ್ತಿತ್ತು. ಬದಲಿಗೆ ಎಲ್ಲವನ್ನೂ ಗಮ್ಯವಾಗಿಸಿರುವುದರಿಂದ ಹುಟ್ಟುವ ಸೊಗಸು ಬೇರೆ.

ದೃಷ್ಟಾಂತವನ್ನು ಹೋಲುವ ಅಲಂಕಾರಗಳನ್ನು ಆಲಂಕಾರಿಕರು ಹೇಳಿದ್ದಾರೆ. ಪ್ರತಿವಸ್ತೂಪಮೆ ಹಾಗೂ ನಿದರ್ಶನಾಲಂಕಾರಗಳೂ ದೃಷ್ಟಾಂತವನ್ನು ನಿಕಟವಾಗಿ ಹೋಲುತ್ತವೆ. ದೃಷ್ಟಾಂತದಂತೆ ಪ್ರತಿವಸ್ತೂಪಮೆಯಲ್ಲಿಯೂ ಎರಡು ವಾಕ್ಯಗಳಿರುತ್ತವೆ. ಅಷ್ಟೇ ಅಲ್ಲ. ಸಾಮ್ಯವೂ ಗಮ್ಯವಾಗಿರುತ್ತದೆ. ಅವುಗಳಲ್ಲಿ ವ್ಯತ್ಯಾಸವಿರುವುದು ಅವುಗಳಿಗೆ ಆಧಾರಭೂತವಾದ ತತ್ವಗಳಲ್ಲಿ. ಪ್ರತಿವಸ್ತೂಪಮೆಯು ವಸ್ತುಪ್ರತಿವಸ್ತುಭಾವವನ್ನು ಅವಲಂಬಿಸಿದ ಅಲಂಕಾರ. ಅಂದರೆ ಅಲ್ಲಿ ಒಂದೇ ಸಾಧಾರಣ ಧರ್ಮವು ಎರಡೂ ಕಡೆಗಳಲ್ಲಿರುತ್ತದೆ. ಅದನ್ನೇ ಕವಿಯು ಬೇರೆ ಶಬ್ದಗಳಿಂದ ಹೇಳಿರುತ್ತಾನೆ. ಕನ್ನಡದಲ್ಲಿ ಶಬ್ದ ಪುನರುಕ್ತಿಯೂ ಉಂಟು.

ಉದಾ :–

**ಹರಸೇವೆಗೈವ ಸುಕೃತಿಗೆ**
**ಸುರಸೇವೆಯನೊಲ್ದು ಮಾಳ್ಪವಂ ಸಮನೇ ಮಹಾ ।**
**ಗಿರಿಯಂ ಸೇವಿಪ ಸಿಂಹಕೆ**
**ಮೊರಡಿಯ ಸೇವಿಪ ಮೊಲಂ ಪಾಸಟಿಯೇ ॥**

——ಬ. ರಾ. – ವಿ. ೩೩೭

ಇಲ್ಲಿ ಮೊದಲ ವಾಕ್ಯದಲ್ಲಿ 'ಸಮನೇ ' ಎಂಬಲ್ಲಿ ಧರ್ಮೋಕ್ತಿಯಿದ್ದರೆ ಎರಡನೆಯ ವಾಕ್ಯದಲ್ಲಿ 'ಪಾಸಟಿಯೇ ' ಎಂಬ ಮಾತು ಬಂದಿದೆ. ಅವೆರಡೂ ಶಬ್ದಗಳು ಬೇರೆ ಬೇರೆಯಾಗಿದ್ದರೂ

ಅರ್ಥವೊಂದೇ. ಅಂದರೆ ಎರಡು ವಾಕ್ಯಗಳಲ್ಲಿರುವ ಸಾಧಾರಣ ಧರ್ಮವೊಂದೆ. ಇದು ವಸ್ತು ಪ್ರತಿವಸ್ತುಭಾವವಾಗುತ್ತದೆ. ಇದೇ ಅಂಶವನ್ನು ಪ್ರಧಾನವಾಗಿ ಪರಿಗಣಿಸಿದ ಆಲಂಕಾರಿಕರು ಅವೆರಡೂ ಅಲಂಕಾರಗಳು ಬೇರೆ ಬೇರೆಯೆನ್ನುತ್ತಾರೆ. ಆದರೆ ಜಗನ್ನಾಥನು ಈ ವಿಚಾರವನ್ನು ಚರ್ಚಿಸಿ ಅವುಗಳನ್ನು ಬೇರೆ ಬೇರೆ ಅಲಂಕಾರಗಳೆನ್ನುವುದಕ್ಕಿಂತ ಒಂದೇ ಅಲಂಕಾರದ ಪ್ರಭೇದಗಳು ಎಂದು ಹೇಳುವುದು ಸೂಕ್ತವೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾನೆ.

ಕೆಲವರು ಉದಾಹರಣವೆಂಬ ಅಲಂಕಾರವನ್ನು ಪ್ರಸ್ತಾಪಿಸುತ್ತಾರೆ. ಉಪಮಾವಾಚಕ ಶಬ್ದಗಳನ್ನು ಅಂದರೆ, ಅಂತೆ , ಹಾಗೆ , ಮುಂತಾದ ಶಬ್ದಗಳಿರುವಾಗ ದೃಷ್ಟಾಂತವೇ ಉದಾಹರಣವಾಗುತ್ತದೆ. ಹಾಗಾಗಿ ಅದನ್ನು ಪ್ರತ್ಯೇಕವಾದ ಅಲಂಕಾರವೆಂದು ಗುರುತಿಸಬೇಕಾದ ಅಗತ್ಯವಿಲ್ಲ. ದೃಷ್ಟಾಂತದ ಒಂದು ಪ್ರಭೇದವೆಂದೇ ಗಣಿಸಬಹುದು. ದೃಷ್ಟಾಂತ ಮತ್ತು ನಿದರ್ಶನೆಗಳಲ್ಲಿಯೂ ಸಾಕಷ್ಟು ಹೋಲಿಕೆಯಿದೆ. ವ್ಯತ್ಯಾಸವೂ ಇದೆ. ನಿದರ್ಶನೆಯು ಒಂದೇ ವಾಕ್ಯದಲ್ಲಿರುತ್ತದೆಯೆಂಬುದು ಪ್ರಮುಖ ಭೇದ.

ಅನ್ಯ ಉದಾಹರಣೆಗಳು:

ಮಂಜುಮುಸುಕಿದೊಡೇನು ಪರ್ವತ
ವಂಜುವುದೇ ಹಾಲಾಹಲವ ನೊಣ
ನೆಂಜಲಿಸುವುದೇ ವಡಬಶಿಖಿನೆನೆವುದೆ ತುಷಾರದಲಿ ।
ಕಂಜನಾಳದಿ ಕಟ್ಟುವಡೆವುದೆ
ಕುಂಜರನು ನರಶರದ ಜೋಡಿನ
ಜುಂಜುವಳೆಯಲಿ ಜಾಹ್ನವೀಧರ ಜಾರುವನೆಯೆಂದ ॥

— ಕುಮಾರ. –೬–೧೧.

ಅನ್ನೆಯದಿಂ ನಡೆವವರಂ
ನಿನ್ನಿಯಮಿಸುವ್ಯೆ ದ ಶಾಸ್ಯ ಪೆರನಾವಂನಿ ।
ನ್ನನ್ನಿಯಮಿಸುವಂ ಮುನ್ನೀರ್
ಬೆನ್ನೀರೆನೆ ಬೆರಸಲಣ್ಣ ತಣ್ಣೀರೊಳವೆ ॥

— ಪಂ. ರಾ. ಸಂ.–೪–೫೩

ಕವಿತಾ ಪ್ರೌಢನೆ ಸೋಲ್ವವೋಲ್ ಕೃತಿಯೊಳಜ್ಞಂ ಸೋಲ್ವನೇ ಚಂದ್ರಕಾಂ
ತವೊಸರ್ವಂತಿರೆ ಗೋರಿಕಲ್ಲೊಸರ್ಗುಮೆ ಬೆಳ್ದಿಂಗಳೊಳ್ ತುಂಬಿ ಪೀ ।
ರ್ದ ವೊಲೇಂ ಪೀರ್ದಪುದೇ ಕಡಂದುರುತೆ ನವ್ಯಾಮೋದಮಂ ಪೂಗಳೊಳ್
ನವಚೂತಂ ತಳಿರ್ವಂದದಿಂ ತಳಿರ್ಗುಮೆ ಸ್ಥಾಣೂತ್ಕರಂ ಚೈತ್ರದೊಳ್ ॥

— ಜಿ. ವಿ. –೫–೧೩

ಚಂದ್ರಸೂರ್ಯರ ನೆರವಿನಿಂದೆ ಬೆಳಗುವಳೀವ
ಸುಂಧರೆಗದೆಂದು ಬಹುದೋ ಸ್ವಯಂ ದೀಪಕತೆ
ಅವರಿವರ ನುಡಿಗಳನು ಕದ್ದು ಮರುನುಡಿಗೊಡುವ
ದೆಸೆಗಳೇ ನಿಮಗೆಂದು ಬಹುದು ಮೀಸಲು ನಿನದ !

— ಗೋಪಾಲಕೃಷ್ಣ ಅಡಿಗ –'ಭಾವತರಂಗ'.

ನೀನಿಲ್ಲದ ಮನೆಮನೆಯಲಿ ಏನಿದ್ದೂ ವ್ಯರ್ಥ ।
ಹಸಿದೊಡಲಿನ ಕಗ್ಗವಿಯಲಿ ಹಾಡೆಲ್ಲ ಅನರ್ಥ ॥

— ಕೆ. ಎಸ್. ನರಸಿಂಹಸ್ವಾಮಿ.

ಸೌಂದರ್ಯ ಬಾಂಧವ್ಯಗಳನು ಬರಿದೆನಲಹುದೆ?
ಹೊಂದಿಸವೆ ಕುಂದಿಸವೆ ಜೀವಿಗಳನವುಗಳ್ ?
ಸಿಂಧುಪೂರದಿ ಬಿದ್ದವರೊಳೊಬ್ಬರೊಬ್ಬರನು
ಅಂದಿಕೊಳಲದು ಬರಿದೆ ? ಮಂಕುತಿಮ್ಮ.

— ಡಿ. ವಿ. ಜಿ.

ಹಿಂಗಿದರೊಂದು ಬಾಳಿನ ಚಲುಮೆ
ತುಂಬಿಯೆ ಇರುವುದು ಬಾಳಿನ ನಲುಮೆ
ಬತ್ತಿದರೇನು ತಾಯೆದೆ ಹಾಲು ?
ಅಭಯವ ನೀಡಿದೆ ಕೆಚ್ಚಲ ಸಾಲು.

— ಕೆ. ಎಸ್. ನಿಸಾರಅಹಮ್ಮದ್.

# ೭. ದೀಪಕ

ಲಕ್ಷಣ :– ಪ್ರಸ್ತುತ ಮತ್ತು ಅಪ್ರಸ್ತುತ ವಸ್ತುಗಳಲ್ಲಿ ಒಂದೇ ಧರ್ಮವಿದೆಯೆಂದು ವರ್ಣಿಸಿದರೆ ಅದು ದೀಪಕ.

( ವದಂತಿ ವರ್ಣ್ಯಾವರ್ಣ್ಯಾನಾಂ ಧರ್ಮೈಕ್ಯಂ ದೀಪಕಂ ಬುಧಾಃ — ಕುವಲಯಾನಂದ)

'ದೀಪಕ' ಎಂಬ ಶಬ್ದಕ್ಕೆ ದೀಪವೆಂದು ಅರ್ಥ. ದೀಪನ ಅಥವಾ ಬೆಳಗುವ ಕ್ರಿಯೆಗೆ ಇಲ್ಲಿ ಪ್ರಾಧಾನ್ಯವಿರುವುದರಿಂದ ಇದನ್ನು ದೀಪಕವೆಂದು ಕರೆಯಲಾಗಿದೆ. (' **ದೀಪಯತಿ ಪ್ರಕಾಶಯತಿ ಇತಿ ದೀಪಕಃ** ') – ದೀಪನ ಮಾಡುತ್ತದೆ ಅಂದರೆ ಪ್ರಕಾಶಪಡಿಸುತ್ತದೆಯಾದ್ದರಿಂದ ದೀಪಕ ಎಂಬುದು ವಿವರಣೆ. ಇದಕ್ಕೆ ಮೂಲವಾದುದು ' ದೀಪಕ ನ್ಯಾಯ ' ಹೊಸ್ತಿಲ ಮೇಲಿಟ್ಟ ದೀಪವು ಮನೆಯ ಒಳಗೂ ಬೆಳಗುತ್ತದೆ; ಬೀದಿಯನ್ನೂ ಬೆಳಗುತ್ತದೆ. ದೀಪಕದಲ್ಲಿಯೂ ಅಷ್ಟೇ, ಪ್ರಸ್ತುತ ಅರ್ಥಾತ್ ವರ್ಣ್ಯ ಮತ್ತು ಅಪ್ರಸ್ತುತ ಅರ್ಥಾತ್ ಅವರ್ಣ್ಯಗಳೆರಡನ್ನೂ ಬೆಳಗುವ ಕೆಲಸ ನಡೆಯುತ್ತದೆ. ಅಂದರೆ ಒಂದೇ ಧರ್ಮವು ಪ್ರಸ್ತುತ, ಅಪ್ರಸ್ತುತಗಳೆಲ್ಲವಕ್ಕೂ ಸಂಬಂಧಪಟ್ಟಿದ್ದರೆ ಅದು ದೀಪಕವೆನಿಸಿಕೊಳ್ಳುತ್ತದೆ . ಇಲ್ಲಿ ಧರ್ಮವೆಂದರೆ ಗುಣ ಅಥವಾ ಕ್ರಿಯೆಯೆಂದು ತಿಳಿಯಬೇಕು. ಯಾವುದೋ ಒಂದು ಗುಣವು ಅಥವಾ ಕ್ರಿಯೆಯು ಹಲವಾರು ವಸ್ತುಗಳಲ್ಲಿ ಇದೆಯೆಂದೋ, ಇಲ್ಲವೆಂದೋ, ಹೇಳುವುದು ಇಲ್ಲಿ ಚಮತ್ಕಾರಕ್ಕೆ ಕಾರಣವಾಗುತ್ತದೆ. ಅನೇಕ ವಸ್ತುಗಳನ್ನು ಒಂದೆಡೆ ಸೇರಿಸಿ ಅವುಗಳಲ್ಲೆಲ್ಲ ನಿರ್ದಿಷ್ಟವಾದ ಯಾವುದೇ ಒಂದು ಧರ್ಮವಿದೆಯೆನ್ನುವಾಗ ಅಥವಾ ಇಲ್ಲವೆನ್ನುವಾಗ ಅವುಗಳಲ್ಲಿ ಉಪಮಾನೋಪಮೇಯ ಭಾವವು ಏರ್ಪಡುವುದು ಸ್ವಾಭಾವಿಕ. ಕವಿಯು ಪ್ರಾಮುಖ್ಯವಾಗಿ ವರ್ಣಿಸಲು ಹೊರಟ ವಸ್ತುವು ಉಪಮೇಯವಾಗುತ್ತದೆ; ಇನ್ನಿತರ ವಸ್ತುಗಳು ಉಪಮಾನಗಳೆನಿಸುತ್ತವೆ. ಇಲ್ಲಿ ಉಪಮಾವಾಚಕ ಪದವು ಇರುವುದಿಲ್ಲ. ಹಾಗಾಗಿ ಆ ವಸ್ತುಗಳಲ್ಲಿರುವ ಔಪಮ್ಯವನ್ನು ಗಮ್ಯವೆಂದು ಹೇಳಲಾಗಿದೆ. ಆದರೆ ಅವುಗಳಲ್ಲಿರುವ ಸಮಾನವಾದ ಧರ್ಮವಾವುದೆಂಬುದನ್ನು ಕವಿಯೇ ಹೇಳಿರುತ್ತಾನಾದ್ದರಿಂದ ಉಪಮಾವಾಚಕ ಪದವಿಲ್ಲದಿದ್ದರೂ ಸುಲಭವಾಗಿ ಔಪಮ್ಯವನ್ನು ಗ್ರಹಿಸಬಹುದು.

ಉದಾ :–

**ಗಿಳಿವರಿ ಮೆರೆಯದ ನಂದನ**
**ಮಳಿಶಿಶು ವಿಹರಿಸದ ಪೂಗಳಂ ಕಳರವದಿಂ |**
**ದೆಳೆಯಂಚೆಯಡಿಯಿಡದತ**
**ಣ್ಬೊಳಲರ್ಭಕನಾಡದಂಗಳಂ ಮಂಜುಳಮೇ ||**

ಇಲ್ಲಿ ಗಿಳಿಮರಿ ಮೆರೆಯದ ನಂದನ , ದುಂಬಿಗಳು ವಿಹರಿಸದ ಹೂಗಳು, ಕಳರವ ಮಾಡುತ್ತಿರುವ ಎಳೆಹಂಸಗಳು , ಸಂಚರಿಸದ ಕೊಳ, ಶಿಶುವು ಆಡದ ಅಂಗಳವು, ಮಂಜುಳವೇ?

(ಮಂಜುಳವಲ್ಲ) ಎಂದು ಕವಿಯು ಹೇಳುತ್ತಾನೆ. ಇಲ್ಲಿ ಪ್ರಸ್ತುತವಾದುದು 'ಅರ್ಭಕ ಆಡದ ಅಂಗಳ '. ಆದ್ದರಿಂದ ಅದನ್ನು ವರ್ಣ್ಯವೆಂದು ಅರ್ಥಾತ್ ಉಪಮೇಯವೆಂದು ತಿಳಿದರೆ, ಉಳಿದವುಗಳೆಲ್ಲ ಅಪ್ರಸ್ತುತಗಳು ಅಥವಾ ಉಪಮಾನಗಳೆಂದು ತಿಳಿಯಬೇಕಾಗುತ್ತದೆ. ಅವು ಪರಸ್ಪರ ಸಂಬಂಧವಿಲ್ಲದ ವಸ್ತುಗಳಾಗಿದ್ದರೂ ಅವುಗಳನ್ನು ಒಂದುಗೂಡಿಸುವ ಧರ್ಮ 'ಮಂಜುಳಮೇ ' ಎಂಬುವದರಿಂದ ಉಕ್ತವಾಗಿದೆ. ಹೀಗೆ ಒಂದೇ ಧರ್ಮವು ಅನೇಕ ವಸ್ತುಗಳಿಗೆ ಸಂಬಂಧಿಸಿರುವದನ್ನೇ 'ಬೆಳಗುವುದು' ಎಂದು ಹೇಳಲಾಗಿದೆ.

ದೀಪಕದಲ್ಲಿ ಅನೇಕ ವಸ್ತುಗಳಿಗೆ ಸಂಬಂಧಿಸಿದಂತೆ ಇರುವ ಧರ್ಮವನ್ನು ಒಮ್ಮೆ ಮಾತ್ರ ಹೇಳಬೇಕೆ ? ಹಾಗೇನೂ ನಿಯಮವಿಲ್ಲ. ಅನೇಕ ವಸ್ತುಗಳಿಗೆ ಸಂಬಂಧಿಸಿದಂತೆ ಒಂದೇ ಧರ್ಮವಿರುವಾಗ ಅದನ್ನು ಒಮ್ಮೆ ಮಾತ್ರ ಹೇಳಿದರೆ ಸಾಕು ಎಂಬುದು ಸಾಮಾನ್ಯವಾದ ನಿಯಮ. ಕವಿಯು ತನ್ನ ಇಚ್ಛೆಗೆ ತಕ್ಕಂತೆ ಅದನ್ನು ಬದಲಿಸಿಕೊಳ್ಳಲೂಬಹುದು. ಹೀಗೆ ಆ ಪುನರಾವೃತ್ತಿಯನ್ನೇ ಆಧಾರವಾಗಿಟ್ಟುಕೊಂಡು, ಅದನ್ನೇ ಒಂದು ಪ್ರತ್ಯೇಕ ಪ್ರಭೇದವಾಗಿ ಪರಿಗಣಿಸಿ 'ಆವೃತ್ತಿದೀಪಕ' ವೆಂದು ಕುವಲಯಾನಂದದಲ್ಲಿ ಹೇಳಿದ್ದಾರೆ. ಪದಾವೃತ್ತಿ, ಅರ್ಥಾವೃತ್ತಿ ಮತ್ತು ಉಭಯಾವೃತ್ತಿಯೆಂದು ಮೂರು ಪ್ರಕಾರಗಳನ್ನು ಕಲ್ಪಿಸಿದ್ದಾನೆ. ಪದಾವೃತ್ತಿಯೆಂದರೆ ಪದಗಳ ಪುನರಾವರ್ತನೆ. ಒಂದೇ ಪದವು ಪುನರಾವರ್ತನೆಗೊಂಡಿದ್ದರೂ ಅರ್ಥಗಳು ಬೇರೆ ಬೇರೆಯಾಗಿರುತ್ತವೆ.

ಉದಾ :– 'ಆಕಾಶದಲ್ಲಿ ಮೋಡ ಕವಿಯಿತು, ಪ್ರೇಮಿಯ ಮೊಗದ ಮೇಲೂ ಮೋಡ ಕವಿಯಿತು '. ಇಲ್ಲಿ ಪದದ ಪುನರಾವೃತ್ತಿ ಇದೆಯಾದರೂ ಅರ್ಥ ವ್ಯತ್ಯಾಸ ಇರುವುದನ್ನು ಗಮನಿಸಬೇಕು. ಹಾಗಿದ್ದರೂ ಅರ್ಥಗಳಲ್ಲಿ ಸಾಮ್ಯವಿದೆ. ಹಾಗಲ್ಲದಿದ್ದರೆ ಅದನ್ನು ದೀಪಕವೆಂದು ಕರೆಯುವುದು ಕಷ್ಟವಾಗುತ್ತದೆ. ಅರ್ಥಾವೃತ್ತಿಯೆಂದರೆ ಅರ್ಥ ಪುನರಾವರ್ತನೆ. ಇಲ್ಲಿ ಪದಗಳು ಬೇರೆ ಬೇರೆಯಾಗಿದ್ದರೂ ಅರ್ಥವು ಒಂದೇ ಆಗಿರುತ್ತದೆ.

ಉದಾ :– 'ಗಿಳಿಮರಿ ಮೆರೆಯದ ನಂದನ ಮಂಜುಳವೇ ? ಅರ್ಭಕನಾಡದ ಅಂಗಳ ಸೊಗಸೇ?' ಇಲ್ಲಿ ಪದಗಳು ಬೇರೆಬೇರೆಯಾಗಿದ್ದರೂ ಅರ್ಥ ಒಂದೇ. ಉಭಯಾವೃತ್ತಿಯೆಂದರೆ ಪದ ಮತ್ತು ಅರ್ಥಗಳೆರಡೂ ಪುನರಾವರ್ತಿಸುವುದು. ಉದಾ:–'' ಗಿಳಿಮರಿ ಮೆರೆಯದ ನಂದನ ಮಂಜುಳವೇ? ಅರ್ಭಕನಾಡದ ಅಂಗಳ ಮಂಜುಳವೇ? '' ಅಂದರಿಷ್ಟೇ – ಧರ್ಮವನ್ನು ಕವಿಯು ಒಂದೇ ಬಾರಿಯಾದರೂ ಹೇಳಬಹುದು. ಅನೇಕ ಬಾರಿಯಾದರೂ ಹೇಳಬಹುದು. ಅದು ಅವನ ಇಚ್ಛೆಗೆ ಸಂಬಂಧಿಸಿದ ವಿಚಾರ. ದೀಪಕದ ಸೊಗಸೇನಿದ್ದರೂ ಒಂದೇ ಧರ್ಮವು ಅನೇಕ ವಸ್ತುಗಳಿಗೆ ಸಂಬಂಧಿಸಿದಂತೆ ಇರುವುದರಲ್ಲಿದೆ.

**೨. ಕಾರಕ ದೀಪಕ :–** ಒಂದೇ ವಸ್ತುವಿಗೆ ಸಂಬಂಧಪಟ್ಟ ಹಲವಾರು ಕ್ರಿಯೆಗಳು ಕಾಲಕ್ರಮಾನುಸಾರಿಯಾಗಿ ವರ್ಣಿತವಾಗಿದ್ದರೆ, ಅದನ್ನು ಕಾರಕದೀಪಕವೆಂದು ಕರೆಯುತ್ತಾರೆ. ಕಾವ್ಯಪ್ರಕಾಶಕಾರನಾದ ಮಮ್ಮಟನು ಇದನ್ನು ಪ್ರಥಮವಾಗಿ ನಿರೂಪಿಸಿದವನು. ಅವನು ಒಂದೇ ಕಾರಕವು ಅನೇಕ ಕ್ರಿಯೆಗಳೊಂದಿಗೆ ಸಂಬಂಧಿಸಿದ್ದರೆ ದೀಪಕವೆಂದು ಕರೆಯುತ್ತಾನೆ. (ಸ್ವೈವ

೭೪ ಕ್ರಿಯಾಸು ಬಹ್ವೀಷು ಕಾರಕಸ್ಯೇತಿ ದೀಪಕಮ್) ಕಾರಕವೆಂಬುದು ವ್ಯಾಕರಣದ ಪಾರಿಭಾಷಿಕಪದ ವಾಕ್ಯದಲ್ಲಿನಾಮಪದ ಹಾಗೂ ಕ್ರಿಯಾಪದಗಳ ನಡುವಣ ಸಂಬಂಧವನ್ನೇ ಕಾರಕವೆಂದು ಕರೆಯುತ್ತಾರೆ. ಇಂಥ ಕಾರಕಗಳು ಆರು. ಕರ್ಮ, ಕರ್ತಾ, ಕರಣ, ಸಂಪ್ರದಾನ, ಅಪಾದಾನ, ಮತ್ತು ಅಧಿಕರಣ. ಇವುಗಳಲ್ಲಿ ಯಾವುದಾದರೊಂದಕ್ಕೆ ಸಂಬಂಧಿಸಿದ ಹಲವಾರು ಕ್ರಿಯೆಗಳ ವರ್ಣನೆಯನ್ನೇ ದೀಪಕವೆಂದು ಹೇಳಬಹುದು.

ಉದಾ :–

**ಪೊಗೆದುದು ಪೊತ್ತಿದತ್ತು ಕಿಡಿಯಿಟ್ಟುದು ನಾಲ್ದೆಸೆದೂರಿದತ್ತು ಬಾ**
**ನ್ಗೊಗೆದುದು ನಿಂದು ಪೊಂಬೆಳಗುಮಂ ಪರಪಿತ್ತದು ಧಂಧಗಿಲ್ ಧಗಿಲ್ ।**
**ಧಗಿಲೆನು ತಟ್ಟ ತಟ್ಟದುದು ಮುಟ್ಟಿತು ಸುಟ್ಟುದು ತಿಂದು ತೇಗಿದ**
**ತ್ತಗಿಯದೇ ನಿಂದ ಪೂಗಣೆಯನಂ ಪಣೆಗಣ್ಣುರಿ ಹಂಪೆಯಾಳ್ದನಾ ॥**

ಇಲ್ಲಿ ಕವಿಯು ಶಿವನ ಹಣೆಗಣ್ಣಿನ ಬೆಂಕಿಯು ಮನ್ಮಥನನ್ನು ಸುಟ್ಟ ಪರಿಯನ್ನು ಬಣ್ಣಿಸಿದ್ದಾನೆ. '**ಪಣೆಗಣ್ಣುರಿ**' ಎಂಬ ಒಂದೇ ಕಾರಕವು ಕಾಲಕ್ರಮಾನುಸಾರಿಯಾಗಿ ನಡೆವ ಹಲವಾರು ಕ್ರಿಯೆಗಳಿಗೆ ಸಂಬಂಧಿಸಿದೆ. ಕಾರಕವೆನ್ನುವುದರ ಬದಲು ವಸ್ತುವೆಂದಿಟ್ಟುಕೊಂಡರೆ ಈ ದೀಪಕದ ಸ್ವರೂಪ ಸರಳವಾಗಿ ಅರ್ಥವಾಗುತ್ತದೆ.

ದೀಪಕದಲ್ಲಿ ಔಪಮ್ಯವು ಗಮ್ಯವಾಗಿರಬೇಕೆಂಬುದನ್ನು ಬಹುತೇಕವಾಗಿ ಎಲ್ಲ ಆಲಂಕಾರಿಕರೂ ಹೇಳುತ್ತಾರೆ. ಉದ್ಭಟ, ವಾಮನ, ರುಯ್ಯಕ, ವಿದ್ಯಾಧರ, ವಿದ್ಯಾನಾಥ –ಮುಂತಾದವರು ಸ್ಪಷ್ಟವಾಗಿ ಹೇಳುತ್ತಾರೆ. ಭಾಮಹ, ದಂಡಿ, ರುದ್ರಟ, ಮಮ್ಮಟ, ಭೋಜ, ವಿಶ್ವನಾಥ – ಮುಂತಾದವರು ಸೂಚ್ಯವಾಗಿ ಹೇಳಿದ್ದಾರೆ. ಹಾಗಿರುವುದಾದರೆ ಕಾರಕ ದೀಪಕದಲ್ಲಿ ಔಪಮ್ಯವನ್ನು ಹೇಳುವುದು ಹೇಗೆ? ಇಲ್ಲಿ ಉಪಮಾನೋಪಮೇಯ ಭಾವವಿಲ್ಲ. ಔಪಮ್ಯವು ಗಮ್ಯವಾಗಿರಬೇಕೆನ್ನುವವರು ಕಾರಕ ದೀಪಕವನ್ನೊಪ್ಪುವುದು ಪರಸ್ಪರ ವಿರೋಧವೆಂದು ಜಗನ್ನಾಥ ಟೀಕಿಸುತ್ತಾನೆ. ಅದರ ಸಮಂಜಸತೆಯನ್ನು ಅಲ್ಲಗಳೆಯುವಂತಿಲ್ಲ. ಆದ್ದರಿಂದ ದೀಪಕದ ಮೊದಲನೆಯ ಪ್ರಕಾರಕ್ಕೆ ಮಾತ್ರ ಔಪಮ್ಯವು ಗಮ್ಯವಾಗಿರಬೇಕೆಂದು ಹೇಳಬೇಕಾಗುತ್ತದೆ. ಕಾರಕ ದೀಪಕವನ್ನು ದೀಪಕವೆಂದು ಕರೆಯುವುದು, ಅಲ್ಲಿ ದೀಪನ ಕ್ರಿಯೆಯಿದೆ ಎಂಬುದಕ್ಕಾಗಿ ಮಾತ್ರ. ಒಂದೇ ಕಾರಕವು ಅನೇಕ ಕ್ರಿಯೆಗಳನ್ನು ಬೆಳಗುತ್ತದೆಯಾಗಿ ಅದನ್ನು ದೀಪಕವೆನ್ನಬೇಕೇ ಹೊರತು ದೀಪಕದ ಇತರ ಲಕ್ಷಣಗಳನ್ನು ಅನ್ವಯಿಸುವಂತಿಲ್ಲ.

ದೀಪಕಕ್ಕೂ ತುಲ್ಯಯೋಗಿತೆಗೂ ಇರುವ ಸಂಬಂಧ ಗಾಢವಾದುದು. ಅವೆರಡರಲ್ಲಿಯೂ ಒಂದೇ ಧರ್ಮವು ಅನೇಕ ವಸ್ತುಗಳಿಗೆ ಸಂಬಂಧಿಸಿರುತ್ತದೆ. ಪ್ರಸ್ತುತ ಮತ್ತು ಅಪ್ರಸ್ತುತಗಳಿಗೆ ಒಂದೇ ಧರ್ಮದ ಸಂಬಂಧವಿದ್ದರೆ ದೀಪಕ; ಕೇವಲ ಪ್ರಸ್ತುತಗಳಿಗೆ ಅಥವಾ ಕೇವಲ ಅಪ್ರಸ್ತುತಗಳಿಗೆ ಒಂದೇ ಧರ್ಮದ ಸಂಬಂಧವನ್ನು ಹೇಳಿದ್ದರೆ ತುಲ್ಯಯೋಗಿತಾ ಅಥವಾ ಸಮಯೋಗ.

ಉದಾ :–

**ಅಂಬುಜಮಂ ವಿಯೋಗಿ ವದನಾಂಬುಜಮುಂ ಕಳೆಗುಂದೆ ಕೂಡೆದು**

**ಗ್ದಾಂಬುಧಿಯುಂ ಜನೋತ್ಸವ ಸುಧಾಂಬುಧಿಯುಂ ನೆಲವರ್ಚಿ ಕಾಂತಕಾಂ।**
**ತಾಂಬಕ ಕೈರವಂ ಧವಳ ಕೈರವಮುಂ ನಗೆಯೊಂದೇ ಬಂದುದಾ**
**ಲಂಬಿತ ರಾತ್ರಿ ರಮ್ಯ ರಮಣೀಮಣಿ ಕುಂಡಲ ಮಿಂದು ಮಂಡಲಂ॥**

—— ರಾ. ವಿ. ೧೩-೩೫

ಇದು ಚಂದ್ರೋದಯದ ವರ್ಣನೆ. ಇಲ್ಲಿ ಅಂಬುಜವೇ ಮೊದಲಾದವು ಪ್ರಸ್ತುತಗಳೇ ಆಗಿವೆ. ವರ್ಣ್ಯವಾದ ಎರಡೆರಡು ಪದಾರ್ಥಗಳಿಗೆ ಕಳೆಗುಂದುವುದು, ನೆಲವರ್ಚುವುದೇ, ಮುಂತಾಗಿ ಒಂದೊಂದೇ ಧರ್ಮಸಂಬಂಧವಿದೆ. ಆದ್ದರಿಂದ ಇದು ಪ್ರಸ್ತುತ ಕ್ರಿಯಾಯೋಗವಿರುವ ತುಲ್ಯಯೋಗಿತೆಯಾಗುತ್ತದೆ. ಅಂತೆಯೇ –

**ಬೆಲೆಯಿಂದಕ್ಕಮೆ ಕೃತಿ ಗಾ**
**ವಿಲಭುವನದ ಭಾಗ್ಯದಿಂದಕ್ಕುಂ ನೋಳ್ಪಂ।**
**ಬೆಲೆಗೊಟ್ಟು ತಾರ ಮಧುವಂ**
**ಮಲಯಾನಿಳನಂ ಮನೋಜನಂ ಕೌಮುದಿಯಂ॥**

—— ನೇಮಿ – ೧ – ೪೫.

ಇಲ್ಲಿ ಮಧು, ಮಲಯಾನಿಲ, ಮನೋಜ, ಕೌಮುದಿಗಳೆಲ್ಲ ಅಪ್ರಸ್ತುತವಸ್ತುಗಳು. ಇವೆಲ್ಲವುಗಳಿಗೆ 'ಬೆಲೆಗೊಟ್ಟುತಾರ' ಎಂಬ ಒಂದೇ ಧರ್ಮ ಸಂಬಂಧವಿದೆ. ಹಾಗಾಗಿ ಇದು ಅಪ್ರಸ್ತುತ ಕ್ರಿಯಾಯೋಗವಿರುವ ತುಲ್ಯಯೋಗಿತೆಯೆನಿಸುತ್ತದೆ.

ದೀಪಕ ಮತ್ತು ತುಲ್ಯಯೋಗಿತೆಗಳಲ್ಲಿರುವ ಭೇದವು ಸೂಕ್ಷ್ಮವಾದುದು. ಕವಿಯು ಕೇವಲ ಪ್ರಸ್ತುತ ಅಥವಾ ಅಪ್ರಸ್ತುತಗಳನ್ನು ಹೇಳಿದ್ದಾನೆಯೋ ಅಥವಾ ಅವೆರಡಕ್ಕೂ ಸಂಬಂಧಿಸುವಂತೆ ಒಂದೇ ಧರ್ಮವನ್ನು ಹೇಳಿದ್ದಾನೆಯೋ ಎನ್ನುವುದರ ಮೇಲಿಂದ ಅಲಂಕಾರವು ಯಾವುದೆಂಬುದನ್ನು ತೀರ್ಮಾನಿಸಬೇಕಾಗುತ್ತದೆ. ಅಷ್ಟಾಗಿಯೂ ಸ್ವಲ್ಪವೂ ಪ್ರಸ್ತುತಕ್ಕೆ ಸಂಬಂಧಿಸದ ಧರ್ಮಯೋಗದ ವರ್ಣನೆ ಸರಿಯೇ ? ಎಂಬ ಪ್ರಶ್ನೆಯೂ ಉಂಟು. ರಸಗಂಗಾಧರದಲ್ಲಿ ಜಗನ್ನಾಥನು ಈ ವಿಷಯದಲ್ಲಿ ಸಾಕಷ್ಟು ಚರ್ಚಿಸಿ ಅವೆರಡನ್ನು ಬೇರೆ ಬೇರೆ ಅಲಂಕಾರಗಳೆಂದು ಹೇಳುವುದರ ಬದಲು ಒಂದೇ ಅಲಂಕಾರದ ಭೇದಗಳೆಂದು ಗ್ರಹಿಸುವುದು ಸೂಕ್ತವೆಂಬ ಅಭಿಪ್ರಾಯವನ್ನು ಮುಂದಿಟ್ಟಿದ್ದಾನೆ. ಜಗನ್ನಾಥನು ತುಲ್ಯಯೋಗಿತೆಯಲ್ಲಿಯೇ ದೀಪಕವನ್ನೂ ಸೇರಿಸಬಹುದೆನ್ನುತ್ತಾನೆ. ( **ಏವಂ ಚ ಪ್ರಾಚೀನಾನಾಂ ತುಲ್ಯ ಯೋಗಿತಾತೋ ದೀಪಕಸ್ಯ ಪೃಥಗಲಂಕಾರ ಮಾಚಕ್ಷಾಣಾನಾಂ ದುರಾಗ್ರಹಮಾತ್ರ ಮಿತಿ ನವ್ಯಾಃ** –ಜಗನ್ನಾಥ) ಅದಕ್ಕೆ ಬದಲಾಗಿ ಅಲಂಕಾರ ಕೌಸ್ತುಭಕಾರನಾದ ವಿಶ್ವೇಶ್ವರ ಪಂಡಿತನು ದೀಪಕವನ್ನು ಭರತ ಮುನಿಯೇ ಹೇಳಿದ್ದಾನಾದ್ದರಿಂದ ಅಲ್ಲಿಯೇ ತುಲ್ಯಯೋಗಿತೆಯನ್ನು ಸೇರಿಸಬಹುದೆನ್ನುತ್ತಾನೆ. ಉಳಿದಂತೆ ಜಗನ್ನಾಥನ ಅಭಿಪ್ರಾಯವು ಅವನಿಗೆ ಸಮ್ಮತವೇ ಆಗಿದೆ. ನಾವೂ ಅದೇ ಮಾರ್ಗವನ್ನು ಅನುಸರಿಸಬಹುದು.

ಅನ್ಯ ಉದಾಹರಣೆಗಳು:

ರತ್ನ ಪರೀಕ್ಷಕನಾಂ ಕೃತಿ
ರತ್ನ ಪರೀಕ್ಷಕನೆಂದು ಫಣಿಪತಿಯ ಫಣಾ ।
ರತ್ನಮುಮಂ ರನ್ನನ ಕೃತಿ
ರತ್ನ ಮುಮಂ ಪರೀಕ್ಷಿಪಂಗೆಂಟೆರ್ದೆಯೇ ॥

— ಗದಾ. ೧–೧೪

ನೋಡಿ ಮರೀಚಿಕಾಜಲಮನಂ ಬುವಿದೆಂದೆಳಸುತ್ತ ಬಂದು ಕೈ
ನೀಡಿ ಕಲಂಕಿ ಪೊಕ್ಕು ತೆಗೆದಿಕ್ಕುತೆ ಪುಷ್ಕರಮಂ ನಿಜಾಸ್ಯದೊಳ್ ।
ಬಾಡಿಬಳಲ್ದು ಬಲ್ಪಿಳಿದು ಫೀಳಿಡುತಂಗದೊಳೆತ್ತಲುಂ ಪುಗುಳ್
ಮೂಡಿರೆ ಬಿಳ್ದುದರ್ಕ ಕರ ಕಲ್ಪಿತಸಂಜ್ವರನೊಂದು ಕುಂಜರಂ ॥

— ರಾ. ವಿ. ೫–೩೯

ವಿಕಸಿತ ಚಂಪಕಕ್ಕೆಳಸಿ ಬಂದುಣಲೊಲ್ಲದ ಚಂಚರೀಕನಾ
ಸಿಕ ಮನಶೇಷಮಂ ಬೆಳಗೆ ತಿಗ್ಮಕರಂ ದೆಸೆಗಾಣದಿರ್ಪ ಕೌ ।
ಶಿಕನಯನಂಗಳಂ ಸುಕವಿಕಾವ್ಯಮನಾಲಿಸಿ ಕಾಯ್ವ ದುರ್ಜನ
ಪ್ರಕರದ ಕರ್ಣಕೋಟರಮನೇಕೆಯೊ ಮಾಡಿದನಬ್ಜ ವಿಷ್ಟರಂ ॥

— ಪಂಪ. ರಾ. ೧–೩೧.

ತಾಯಿ ಜಿಂಕೆ ಓಡಿಯೋಡಿ
ಬಂದು ಮುದ್ದು ಮರಿಯ ಕೂಡಿ,
ಹಿಂದೆ ಹಿಂದೆ ತಿರುಗಿ ನೋಡಿ,
ದಿಟ್ಟಿಯಟ್ಟಿ, ಎರ್ದೆಯ ತೋಡಿ,
''ತಿರೆಯನಾಳ್ವನಕ್ಕೆ'' ಎಂದು
ಪರಕೆಗೈದು ಪೋದುದಂದು:

— ಕುವೆಂಪು 'ಸಬಕ್ತಗೀನ್'

ಹೆಮ್ಮಲೆಯ ಘನತೆಯನು ಬೆಳ್ಮುಗಿಲ ಲಘಿಮೆಯನು
ಬಾಂದಳದ ಬಿತ್ತರವ ದಿವದೆತ್ತರವನು
ಮಲರಿನುಲ್ಲಸಿಕೆಯನು ಜಲದ ಮಂಗಲವನ್ನು
ನಿನ್ನ ಹಿಡಿದೊಂದೆ ಹಿಡಿಯೊಳ್ ಹಿಡಿದೆನೆಂಬೆ.

— ಪು. ತಿ. ನ. 'ಹಂಸದಮಯಂತಿ'

# ೮. ರೂಪಕ.

**ಲಕ್ಷಣ :– ಉಪಮಾನ ಉಪಮೇಯಗಳ ಅಭೇದವೇ ರೂಪಕ.**

**( ತದ್ರೂಪಕಮಭೇದೋ ಯ ಉಪಮಾನೋಪಮೇಯಯೋಃ –ಕಾವ್ಯಪ್ರಕಾಶ.)**

ರೂಪಕವು ಅತ್ಯಂತ ಪ್ರಾಚೀನವಾದ ಅಲಂಕಾರ. ಭರತನು ತನ್ನ ನಾಟ್ಯಶಾಸ್ತ್ರದಲ್ಲಿ ರೂಪಕವನ್ನು ಹೆಸರಿಸುತ್ತಾನೆ. ಅನಂತರದ ಆಲಂಕಾರಿಕರೆಲ್ಲರೂ ರೂಪಕವನ್ನು ಕುರಿತು ವಿಚಾರ ಮಾಡುತ್ತಾರೆ. ಇದು ಕವಿಗಳಿಗೆ ಅತ್ಯಂತ ಪ್ರಿಯವಾದ ಅಲಂಕಾರವೂ ಹೌದು. ಕಾವ್ಯ ಹುಟ್ಟಿದಂದಿನಿಂದ ರೂಪಕಗಳನ್ನು ಸೃಷ್ಟಿಸುತ್ತಲೇ ನಡೆದಿದೆ. ಲೋಕಭಾಷೆಯು ಕಾವ್ಯ ಭಾಷೆಯಾಗುವುದಕ್ಕೆ ರೂಪಕವೇ ಅಸ್ತಿವಾರವಾಗಿದೆ. ಆ ದೃಷ್ಟಿಯಿಂದ ಅದನ್ನು ಕಾವ್ಯ ಭಾಷೆಯ ನೆಲಗಟ್ಟೆಂದು ಕರೆಯಬಹುದು. ಹಾಗಾಗಿಯೇ ಪ್ರಾಚೀನ ಆಲಂಕಾರಿಕರು ಪರಿಶ್ರಮದಿಂದ ಪರಿಶೋಧಿಸಿದ ಹಲವಾರು ಅಲಂಕಾರಗಳ ಛಾಯೆಯನ್ನು ಕೂಡ ಕಾಣಲಾರದ ಸ್ಥಿತಿಯೊದಗಿದರೂ ರೂಪಕದ ಸ್ಥಾನ ಅಬಾಧಿತ. ರೂಪಕಮುಕ್ತಕಾವ್ಯವು ಕಾವ್ಯವಾಗಿರುವುದಿಲ್ಲ ಅಂತೆಯೇ ಆಧುನಿಕ ಕವಿಗಳೂ ಅದನ್ನು ಧಾರಾಳವಾಗಿ ಬಳಸುತ್ತಾರೆ.

ರೂಪಕವನ್ನು ಕುರಿತು ಭಾರತೀಯರು ವಿವೇಚಿಸುವಂತೆ ಪಾಶ್ಚಾತ್ಯರೂ ವಿವೇಚಿಸಿದ್ದಾರೆ. ' ರೂಪಕ ' ನಿರ್ಮಾಣವೆಂದರೆ ಕವಿಪ್ರತಿಭೆಯ ಹೆಗ್ಗುರುತು – ಎಂದು ಅರಿಸ್ಟಾಟಲ್ ಘೋಷಿಸಿದ. ಅನಂತರದ ಕಾಲದಲ್ಲಿಯೂ ರೂಪಕದ ಬಗೆಗೆ ಅಲ್ಲಿ ಸಾಕಷ್ಟು ಚಿಂತನೆಗಳು ನಡೆದಿವೆ. ಪಾಶ್ಚಾತ್ಯರಲ್ಲಿ ರೂಪಕದ ಮಹತ್ವ, ಸ್ವರೂಪ, ಪರಿಣಾಮಗಳನ್ನು ಕುರಿತು ಚಿಂತನೆ ನಡೆದಿದೆ. ಅದನ್ನು ಗಮನಿಸಿದಾಗ ನಮ್ಮ ಆಲಂಕಾರಿಕರು ನಡೆಸಿದ ಚಿಂತನೆ ಕಡಿಮೆಯೇ. ''ಕಾವ್ಯ ನಿರ್ಮಿತಿಯಲ್ಲಿ 'ರೂಪಕ' ದಿಂದ ಸಾಧಿತವಾಗುವ ಪರಿಣಾಮ ಎಂಥದು ಎಂಬುದನ್ನಾಗಲಿ ' ಅಭಿವ್ಯಕ್ತಿಯ ' ದೃಷ್ಟಿಯಿಂದ ಅದಕ್ಕಿರುವ ವಿಶೇಷತೆಯನ್ನಾಗಲಿ ನಮ್ಮ ಆಲಂಕಾರಿಕರು ಗುರುತಿಸುವದಿಲ್ಲ'' ಎನ್ನುತ್ತಾರೆ ಡಾ|| ಜಿ.ಎಸ್. ಶಿವರುದ್ರಪ್ಪನವರು. ( ಕಾವ್ಯಾರ್ಥಚಿಂತನ ಪುಟ. ೧೦೦ ) ಈ ಮಾತು ಎಲ್ಲ ಅಲಂಕಾರಗಳಿಗೂ ಅನ್ವಯಿಸುವಂಥದೇ ಆಗಿದೆ. ಸ್ವರೂಪ, ಲಕ್ಷಣ, ಪ್ರಕಾರಗಳ ಬಗ್ಗೆ ಹೆಚ್ಚಿನವರು ಚಿಂತಿಸುತ್ತಾರೆ. ಅದರ ಪರಿಣಾಮದ ಬಗೆಗೆ ಅಲ್ಲೋ ಇಲ್ಲೋ ಸೂತ್ರಪ್ರಾಯವಾದ ಮಾತುಗಳು ಬಂದರೂ ಅವು ಗಮನ ಸೆಳೆಯುವಂತಿರುವುದಿಲ್ಲ. ಹಾಗಿದ್ದರೂ ರೂಪಕದ ಕುರಿತು ಅವರು ನಡೆಸಿದ ಚಿಂತನೆಗಳಿಗೆ ತನ್ನದೇ ಆದ ಮಹತ್ವವಿದೆಯೆಂಬುದನ್ನು ಅಲ್ಲಗಳೆಯುವಂತಿಲ್ಲ.

ರೂಪಕದ ಮೂಲವಿರುವದು ಭಾಷಾಪ್ರಯೋಗದಲ್ಲಿ. ಭಾಷೆಯನ್ನು ಸಶಕ್ತಗೊಳಿಸಬೇಕೆಂಬ ಹಂಬಲವು ಮಾನವನ ಸಹಜ ಪ್ರವೃತ್ತಿ. ಅಂತರಂಗದ ಭಾವಗಳನ್ನು ಅತ್ಯಂತ ಪರಿಣಾಮಕಾರಿಯಾಗಿ ಅಭಿವ್ಯಕ್ತಗೊಳಿಸುವ ಹಂಬಲವನ್ನು ಹೊತ್ತಾಗ ಶಬ್ದಾರ್ಥ ಸಂಬಂಧದ ನಿಯಮಗಳನ್ನು ಗಾಳಿಗೆ ತೂರಿ ಹಳೆಯ ಶಬ್ದಕ್ಕೆ ಹೊಸ ಅರ್ಥದ ಕಸಿಮಾಡುವ ಪ್ರಯತ್ನವನ್ನೇ ಲಕ್ಷಣಾವೃತ್ತಿಯೆಂದು ಪ್ರಾಚೀನರು ಗುರುತಿಸಿದರು. ಭಾಷೆಯಲ್ಲಿ ಶಬ್ದಕ್ಕೆ

ಅಭಿಧಾವೃತ್ತಿಗಿಂತ ಇದು ಬೇರೆಯಾದುದು.
ರೂಢವಾದ ಅರ್ಥವನ್ನು ಮಾತ್ರ ಕೊಡುವ
ಉದಾ:– '' ನಮ್ಮಮನೆಯ ಮೇಲೆ ಬಸ್ ಹೋಗುತ್ತದೆ ''. ಇಲ್ಲಿ ಮೇಲೆ ಎಂಬ ಶಬ್ದವನ್ನು
ಗಮನಿಸಿ. ಅದರ ರೂಢವಾದ ಅರ್ಥವನ್ನು ಗ್ರಹಿಸಿದರೆ ಇಡೀ ವಾಕ್ಯವು ಅಸಂಬದ್ಧವಾಗುತ್ತದೆ.
ಆಗ ಮೇಲೆ ಎಂಬ ಪದಕ್ಕೆ ' ತೀರ ಹತ್ತಿರ ' ಎಂಬ ರೂಢವಲ್ಲದ ಅರ್ಥವನ್ನು ಗ್ರಹಿಸಬೇಕು.
ಅದು ಲಕ್ಷಣಾವೃತ್ತಿಯಿಂದ ಪಡೆದ ಅರ್ಥ. ಅದಕ್ಕೆ ಲಕ್ಷ್ಯಾರ್ಥವೆಂದು ಹೆಸರು. ಈ
ಲಕ್ಷಣಾವೃತ್ತಿಯ ಸ್ವರೂಪದ ಕುರಿತು ಸಾಕಷ್ಟು ವಿವೇಚನೆ ನಡೆದಿದೆ.

ಲಕ್ಷಣಾವೃತ್ತಿಯ ಅನಂತ ಭೇದಗಳಲ್ಲಿ ಒಂದು 'ಗುಣವೃತ್ತಿ'. ಇಲ್ಲಿಯೂ ಶಬ್ದಾರ್ಥ ಸಂಬಂಧದ ಸಾಮಾನ್ಯ ನಿಯಮವನ್ನು ಅತಿಕ್ರಮಿಸಲಾಗುತ್ತದೆ. ಉದಾ:–'ಪುರುಷಸಿಂಹ' ಈ ಶಬ್ದಕ್ಕೆ ಪುರುಷನೇ ಸಿಂಹವೆಂಬುದು ಅರ್ಥ. ಆದರೆ ಪುರುಷನು ಸಿಂಹವಾಗುವದಾದರೂ ಹೇಗೆ? ಅದಕ್ಕೆ ಸಮಾನವಾದ ಗುಣಗಳ ಯೋಗ ಕಾರಣ. ಸಿಂಹದಲ್ಲಿರುವ ಶೌರ್ಯ, ಕ್ರೌರ್ಯಾದಿ ಗುಣಗಳು ಪುರುಷನಲ್ಲಿಯೂ ಕಾಣುತ್ತವೆಯಾದ್ದರಿಂದ, ಗುಣಸಾಮ್ಯದ ಕಾರಣದಿಂದ ಅಭೇದಾರೋಪವು ಸಾಧ್ಯವಾಗಿದೆ. ಇದನ್ನೇ ಗುಣವೃತ್ತಿ ಗೌಣೀಪ್ರಯೋಗ, ಉಪಚಾರ, –ಇತ್ಯಾದಿಯಾಗಿ ಕರೆಯುತ್ತಾರೆ. ಸಮಾನವಾದ ಗುಣಗಳ ಯೋಗವಿರುವದರಿಂದ ಒಂದು ವಸ್ತುವಿನ ಮೇಲೆ ಇನ್ನೊಂದು ವಸ್ತುವನ್ನು ಆರೋಪಿಸಿ, ಅವೆರಡನ್ನೂ ಒಂದೇ ಎಂದು ನಿರೂಪಿಸಲಾಗುತ್ತದೆ.

ಈ ತೆರನಾದ ಗೌಣೀಲಕ್ಷಣೆಯು ಎರಡು ಪ್ರಕಾರದ್ದು. ಸಾರೋಪಾ ಮತ್ತು ಸಾಧ್ಯವಸಾನಾ. ಸಾರೋಪಾಲಕ್ಷಣೆಯಲ್ಲಿ ಎರಡೂ ವಸ್ತುಗಳನ್ನು ಹೆಸರಿಸಿರಲಾಗುತ್ತದೆ. ಉದಾ: 'ಪುರುಷಸಿಂಹ' ಇಲ್ಲಿ ವಿಷಯ ವಿಷಯಿಗಳೆರಡರ ಉಲ್ಲೇಖವೂ ಇದೆ. ಹಾಗಲ್ಲದೆ ' ಸಿಂಹ!, ಎಂದು ಪುರುಷನನ್ನು ಕಂಡಾಗ ಉದ್ಗರಿಸಿದರೆ ಅದು ಸಾಧ್ಯವಸಾನಾ ಎಂಬ ಭೇದವಾಗುತ್ತದೆ. ಇಲ್ಲಿ ಅಭೇದಾರೋಪದ ತುಟ್ಟತುದಿಯನ್ನು ಕಾಣಬಹುದು. ಅದು ನಿಶ್ಚಯದ ಸ್ಥಿತಿ. ಇದು ಅತಿಶಯೋಕ್ತಿ ಎಂಬ ಅಲಂಕಾರದ ಮೂಲ. ಗೌಣೀಸಾರೋಪಾ ಲಕ್ಷಣೆಯು ರೂಪಕಾಲಂಕಾರದ ಮೂಲ.

ಗೌಣೀಸಾರೋಪಾಲಕ್ಷಣೆಯು ರೂಪಕಾಲಂಕಾರಕ್ಕೆ ಮೂಲವೆಂಬುದನ್ನು ಗುರುತಿಸಿದರೂ ಅದೇ ರೂಪಕವೆಂದು ಹೇಳಲಾಗುವುದಿಲ್ಲ. ಗುಣವೃತ್ತಿಯನ್ನು ಆಶ್ರಯಿಸಿದ ಅಲಂಕಾರವೆಂದು ಅದನ್ನು ಕರೆಯಲಾಗಿದೆ. ಗುಣವೃತ್ತಿಯ ಪ್ರಯೋಗದ ಉದ್ದೇಶ ಸೀಮಿತವಾದದ್ದು. ರೂಪಕದ ಗುರಿ ವಿಸ್ತೃತವಾದದ್ದು. ಸೌಂದರ್ಯನಿರ್ಮಾಣದ ಉದ್ದೇಶದಿಂದ ಕವಿಯು ಬಳಸುವ ರೂಪಕಗಳನ್ನೆಲ್ಲ ಗೌಣೀಸಾರೋಪಾದವರ್ಗಕ್ಕೆ ಸೇರಿಸುವದರಿಂದುಂಟಾಗುವ ಗೊಂದಲವನ್ನು ನಿವಾರಿಸುವುದಕ್ಕಾಗಿ ಅದನ್ನು ಬೇರೆಯೇ ಎಂದು ಗುರುತಿಸಿ ಅದನ್ನು ವಿವೇಚಿಸುವ ಪ್ರಯತ್ನ ನಡೆಯಿತು.

ಅಂತೆಯೆ ಲಕ್ಷಣಾವೃತ್ತಿಯನ್ನಾಶ್ರಯಿಸಿದ ಇತರ ಪ್ರಯೋಗಗಳನ್ನು 'ಸಮಾಧಿ' ಎಂಬ ಗುಣವೆಂದು ಸ್ವೀಕರಿಸಿದ್ದಾರೆ. ಗುಣ ಮತ್ತು ಅಲಂಕಾರಗಳಲ್ಲಿ ಗುಣವು ಆಂತರಿಕವಾದುದೆಂಬ

ಅಭಿಪ್ರಾಯವನ್ನು ಆಲಂಕಾರಿಕರು ವ್ಯಕ್ತಪಡಿಸುತ್ತಲೇ ಬಂದಿದ್ದಾರೆ. ಸಮಾಧಿಯನ್ನು ಅರ್ಥಗುಣವೆಂದು ಹೆಸರಿಸಿ ಅನ್ಯವಸ್ತುವಿನ ಧರ್ಮವನ್ನು ಆರೋಪಿಸುವುದೇ ಇದರ ಸಾರವೆನ್ನಲಾಗಿದೆ. ಉದಾ :– ಕುಮುದಗಳು ಕಣ್ಮುಚ್ಚಿದವು; ಕಮಲಗಳು ಕಣ್ತೆರೆದವು; ಇಂಥ ಪ್ರಯೋಗಗಳನ್ನು ಗುರುತಿಸಿ ಅವುಗಳನ್ನು ಸ್ವೀಕರಿಸಿದ ಆಲಂಕಾರಿಕರು ಅವುಗಳ ಪರಿಣಾಮದ ಬಗೆಗೆ ವಿಸ್ತರಿಸುತ್ತ ಹೋಗುವುದಿಲ್ಲ. ಅಂಥವಿಲ್ಲವಾದರೆ ಕಾವ್ಯತ್ವಕ್ಕೆ ಹಾನಿ ಬರುತ್ತದೆಯೆಂದು ಹೇಳುತ್ತಾರಷ್ಟೇ!

ರೂಪಕದ ಬಗೆಗೆ ಹೇಳುತ್ತ ಉಪಮೇಯ ಮತ್ತು ಉಪಮಾನಗಳು ಅಭಿನ್ನವೆಂದು ಪ್ರತಿಪಾದಿಸುವುದು ರೂಪಕವೆನ್ನಲಾಗಿದೆ. ಇನ್ನೂ ಸ್ಪಷ್ಟವಾಗಿ ಹೇಳುವುದಾದರೆ ಉಪಮಾನದ ರೂಪವನ್ನು ಉಪಮೇಯಕ್ಕೆ ಕೊಡುವುದು, ರೂಪಕವೆಂಬುದಕ್ಕೆ ರೂಪದ ಆರೋಪ ಅಥವಾ ರೂಪಣವೆಂದು ಅರ್ಥ. ಒಂದು ವಸ್ತುವಿನ ಮೇಲೆ ಇನ್ನೊಂದನ್ನು ಆರೋಪಿಸಿದಾಗ ಅವೆರಡೂ ಒಂದೇ ಎಂದು ತೋರುವುದು ರೂಪಕದ ಚಮತ್ಕಾರ. ಹಾಗಾಗಿ ರೂಪಕವೆಂದರೆ ರೂಪವನ್ನು ಧರಿಸುವುದು. ಅರ್ಥಾತ್ ಒಂದು ವಸ್ತುವಿಗೆ ಇನ್ನೊಂದರ ರೂಪವನ್ನು ಕೊಡುವುದು ಎಂದಾಗುತ್ತದೆ. ರೂಪಕವು ಅಭೇದ ಪ್ರಧಾನವಾದ ಅಲಂಕಾರ. ಎರಡು ವಸ್ತುಗಳ ಅತ್ಯಂತ ಸಾದೃಶವು ನಿಮಿತ್ತ. ಈ ಸಾದೃಶದ ಕಾರಣದಿಂದ ಭಿನ್ನ ವಸ್ತುಗಳನ್ನು ಒಂದೇ ಎಂದು ಕಲ್ಪಿಸುವುದು ರೂಪಕದಲ್ಲಿ ಚಮತ್ಕಾರದ ಅಂಶ. ಇದು ಎರಡು ವಸ್ತುಗಳ ಐಕ್ಯವನ್ನು ಸಾಧಿಸುವಲ್ಲಿ ಮಹತ್ವದ ಹೆಜ್ಜೆ. ಅಭೇದ ಪ್ರತಿಪಾದನೆಯಿದ್ದರೂ ಭೇದದ ಅರಿವು ಜಾಗ್ರತವಾಗಿರುತ್ತದೆ. ಉದಾ :– 'ಮುಖವೇ ಚಂದ್ರ' ಎಂದು ಕವಿಯು ಹೇಳುವಾಗ ಮುಖ ಮತ್ತು ಚಂದ್ರಗಳು ಬೇರೆ ಬೇರೆಯೆಂಬುದನ್ನು ತಿಳಿದಿರುತ್ತಾನೆ. ನಿಜವಾಗಿಯೂ ಒಂದನ್ನು ಇನ್ನೊಂದೆಂದು ತಿಳಿದರೆ ಅದು ಭ್ರಾಂತಿಯಾಗುತ್ತದೆ. ಇಲ್ಲಿ ಆ ಭ್ರಾಂತಿಯಿಲ್ಲ. ಅಂತೆಯೇ ಅವನು ಉಪಮೇಯವನ್ನು ಅಲ್ಲಗಳೆಯುವುದೂ ಇಲ್ಲ. ಭೇದವನ್ನು ಅಲ್ಲಗಳೆದರೆ ಅದು ಅಪಹ್ನುತಿಯಾಗುತ್ತದೆ. ಇಲ್ಲಿ ಭೇದವು ಅನಪಹ್ನುತ. –ಅಥವಾ ಮರೆಯಾಗದಿರುವುದು ಆಗಿರುತ್ತದೆ. ಅಂದರೆ ಇಲ್ಲಿನ ಅಭೇದಾರೋಪವು ಆಹಾರ್ಯವಾಗಿದೆ. ಭೇದವು ತಿಳಿದೂ ತಿಳಿದೂ ಅಭಿವ್ಯಕ್ತಿಯ ಸ್ವಾರಸ್ಯವನ್ನು ಹೆಚ್ಚಿಸುವ ಸಲುವಾಗಿ ಅಭೇದಾರೋಪ ನಡೆಯುತ್ತದೆ.

ಉಪಮೆಯಂತೆ ರೂಪಕವೂ ಸಾದೃಶ್ಯ ಮೂಲವಾದ ಅಲಂಕಾರವೆನ್ನುವ ವಿಷಯದಲ್ಲಿ ಅಭಿಪ್ರಾಯ ಭೇದವಿಲ್ಲ. ಧರ್ಮವಾಚಕಲುಪ್ತೋಪಮೆಯೆಂಬ ಪ್ರಕಾರವು ರೂಪಕವನ್ನು ನಿಕಟವಾಗಿ ಹೋಲುತ್ತದೆ. ಉದಾ :– 'ಅಲರ್ಗಣ್' ಆದ್ದರಿಂದ ಉಪಮೆಯೇ ತನ್ನ ಅಂಗಾಂಗಗಳನ್ನು ಕಳಚಿಕೊಂಡಾಗ ರೂಪಕವಾಯಿತೆಂದು ಹೇಳಬಹುದಲ್ಲವೇ? '**ಉಪಮೈವ ತಿರೋಭೂತಭೇದಾ ರೂಪಕಮಿಷ್ಯತೇ**' ಉಪಮೆಯೇ ಭೇದಗಳನ್ನು ಮರೆಮಾಡಿಕೊಂಡು ರೂಪಕವಾಗುತ್ತದೆ –ಎಂದು ದಂಡಿಯು ಹೇಳುತ್ತಾನೆ. ಹಾಗಾದರೆ ಅದನ್ನು ಪ್ರತ್ಯೇಕ ಅಲಂಕಾರವೆನ್ನುವುದರ ಬದಲು ಉಪಮೆಯಲ್ಲಿಯೇ ಸೇರಿಸಬಹುದಲ್ಲವೇ?

ರೂಪಕದಲ್ಲಿ ಸಾಮ್ಯ ನಿರೂಪಣೆಯಿದೆಯಾದರೂ ಅಲ್ಲಿ ಅಭೇದ ಪ್ರಾಧಾನ್ಯವಿರುತ್ತದೆ.

ರುಯ್ಯಕ, ರೂಪಕದ ಲಕ್ಷಣವನ್ನು ಹೇಳುವಾಗ ಈ ಮಾತನ್ನು ಸೇರಿಸುತ್ತಾನೆ. 'ಅಭೇದಪ್ರಾಧಾನ್ಯೇ' ಅಭೇದವು ಪ್ರಧಾನವಾಗಿರುವಾಗ, ಅಂದರೆ ರೂಪಕದ ಪ್ರಮುಖವಾದ ಗುರಿಯು ಅಭೇದವನ್ನು ಸಾಧಿಸುವದರಲ್ಲಿದೆ. ಉಪಮೆಯ ಗುರಿಯು ಸಾಮ್ಯವನ್ನು ಎತ್ತಿ ಹೇಳುವುದರಲ್ಲಿದೆ. ರೂಪಕವು ಏಕತೆಯನ್ನು ಸಾಧಿಸುವತ್ತ ಧಾವಿಸುತ್ತದೆ. ಆ ಅಭೇದಾರೋಪವೇ ಒಂದು 'ಮಾಂತ್ರಿಕರಚನೆ' ಎಂದು ಶಿವರುದ್ರಪ್ಪನವರನ್ನು ಅನುಸರಿಸಿ ಹೇಳಬಹುದು. ಭೇದಗಳು ಸಂಪೂರ್ಣವಾಗಿ ಮರೆಯಾಗಿ ಉಪಮಾನವೊಂದೇ ಇರುವ ಅತಿಶಯೋಕ್ತಿಯ ಒಮ್ಮುಖತೆ, ಭೇದಾಭೇದಗಳು ಸಮಾನವಾಗಿರುವ ಉಪಮೆಯ ಸಾದೃಶ್ಯ ಚಮತ್ಕಾರಗಳಿಗಿಂತ ವಿಭಿನ್ನವಾದ ಅನುಭವವನ್ನು ಇದು ನೀಡುತ್ತದೆ. ಹಾಗಾಗಿ ಉಪಮೆಯು ಅಂಗಾಂಗಗಳನ್ನು ಕಳೆದುಕೊಂಡು ರೂಪಕವಾಗುವುದಿಲ್ಲ. ಅದು ಅಂಗಾಂಗಗಳನ್ನು ಕಳೆದುಕೊಂಡಾಗಲೂ ಸಾದೃಶ್ಯದತ್ತವೇ ಗಮನ ಹರಿಸಿರುತ್ತದೆ. ರೂಪಕಕ್ಕೆ ಸ್ವತಂತ್ರವಾದ ಸ್ಥಾನವನ್ನು ಕೊಡುವುದು ಅವಶ್ಯವಾಗುತ್ತದೆ.

ರೂಪಕಾಲಂಕಾರದ ಪ್ರಕಾರಗಳನ್ನು ವಿಭಾಗಿಸುವಲ್ಲಿ ಕುವಲಯಾನಂದಕಾರನು ಅನುಸರಿಸುವ ಕ್ರಮವು ವಿಶಿಷ್ಟವಾದುದು. ಅವನು ರೂಪಕವನ್ನು ಅಭೇದರೂಪಕ ಮತ್ತು ತಾದ್ರೂಪ್ಯರೂಪಕವೆಂದು ವಿಭಾಗಿಸುತ್ತಾನೆ. ಅಭೇದರೂಪಕವು ಪ್ರಸಿದ್ಧವಾದ ಪ್ರಕಾರ. ಉಪಮಾನ ಉಪಮೇಯಗಳಲ್ಲಿ ಅಭೇದಾರೋಪವಿದ್ದರೆ ಇದು ಸಂಭವಿಸುತ್ತದೆ. ಇದು ಎಲ್ಲರೂ ಹೇಳಿದ ರೂಪಕದ ಸಾಮಾನ್ಯ ಲಕ್ಷಣಕ್ಕೆ ಅನುಸಾರಿಯಾಗಿದೆ. ತಾದ್ರೂಪ್ಯ ರೂಪಕದ ವಿಷಯವನ್ನು ಎತ್ತಿ ಹೇಳಿದವನು ಕುವಲಯಾನಂದಕಾರನೇ. ತಾದ್ರೂಪ್ಯವೆಂದರೆ 'ಅದರ ರೂಪವನ್ನು ಹೊಂದಿರುವುದು' 'ಅದರಂತಿರುವುದು' ಎಂದು ಅರ್ಥ. ಹಾಗೆಯೇ ಒಂದೊಂದರಲ್ಲಿಯೂ ಅಧಿಕ, ನ್ಯೂನ, ಮತ್ತು ಅನುಭಯ ಗಳೆಂದು ಮೂರು ಭೇದಗಳು. ಹೀಗೆ ರೂಪಕವು ಆರು ವಿಧವೆಂದು ಅವನ ಮತ. ಅವುಗಳಲ್ಲಿ ಕೆಲವು ಮಹತ್ವದ ಪ್ರಕಾರಗಳನ್ನು ಗಮನಿಸೋಣ –

ಅರಸಾಗಲೊಡಂ ಮಯ್ಮರೆ
ದು ರಾಜ್ಯಸುಖ ಸನ್ನಿಪಾತ ನಿದ್ರೆಯ ಕೈಕೊಂ।
ಡಿರುಳುಂ ಪಗಲುಂ ಜಾಡ್ಯದೆ
ಮರವಟ್ಟೆಳ್ಚರುವರಲ್ಲಮೆಂತುಂ ಭೂಪರ್॥

ಇಲ್ಲಿ 'ಅರಸರಾದೊಡನೆ ಮೈಮರೆತು ರಾಜ್ಯ ಸುಖವೆಂಬ ಸನ್ನಿಪಾತ – ನಿದ್ರೆಯನ್ನು ಕೈಗೊಂಡು ಹಗಲಿರುಳೂ ಜಾಡ್ಯದಲ್ಲಿ ಮರವಟ್ಟು ಭೂಪರು ಎಚ್ಚರ ತಪ್ಪುತ್ತಾರೆ'. ಎಂದು ಕವಿಯು ಹೇಳುತ್ತಾನೆ. ರಾಜ್ಯಸುಖವನ್ನು ಸನ್ನಿಪಾತ ನಿದ್ರೆಯೆಂದು ಕರೆಯಲಾಗಿದೆ. ಅವೆರಡರಲ್ಲಿ ಅಭೇದವನ್ನು ಹೇಳಿರುವುದರಿಂದ ಇದು ಅಭೇದ ರೂಪಕವಾಗುತ್ತದೆ. ಉಪಮಾನೋಪಮೇಯಗಳು ಅಭಿನ್ನವೆಂಬುದನ್ನು ಕವಿ ಸೊಗಸಾಗಿ ನಿರೂಪಿಸಿದ್ದಾನೆ.

**ಕಿಡಿಸಲ್ ಪಂಕಜ ದುರ್ಗರ್ನೇಂ ನೆರೆಯದೂ ನೇತ್ರೋತ್ಪಲಾನಂದಮಂ**
**ಪಡೆಯಲ್ ಸಾಲದೊ ಮನ್ಮಥಂಗೆ ಜಯಮಂ ಮಾಣೇಯದೋ ಸಾಲದೇಂ**
**ಗಡಮೀಕಾಂತೆಯ ವಕ್ತ್ರ ಚಂದ್ರನೆಲೆ ತಾನೇನೆಂದು ಚಂದ್ರಂ ನಭ**
**ಕ್ಕಡರ್ದಗಂಗೆಲ್ಲದೆ ತನ್ನೊಳುಳ್ಳಮೃತವಂ ಬಿಂಬಾಧರಸ್ಥಾಮೃತಂ ||**

ಇಲ್ಲಿ ಪಂಕಜದ ಗರ್ವವನ್ನು ಮುರಿಯುವುದು, ನೇತ್ರೋತ್ಪಲಗಳಿಗೆ ಆನಂದವನ್ನು ತರುವುದು, ಮನ್ಮಥನಿಗೆ ಜಯವನ್ನುಂಟು ಮಾಡುವುದು ಮುಂತಾದ ಕಾರ್ಯಗಳೆಲ್ಲ ಚಂದ್ರನಿಂದಲೂ ಆಗುತ್ತದೆ. ವಕ್ತ್ರಚಂದ್ರನಿಂದಲೂ ಆಗುತ್ತದೆ. ಚಂದ್ರನಲ್ಲಿ ಅಮೃತವಿರುವಂತೆ ವಕ್ತ್ರಚಂದ್ರನಲ್ಲಿಯೂ ಬಿಂಬಾಧರಸ್ಥವಾದ ಅಮೃತವಿದೆ. ಹೀಗಾಗಿ ಚಂದ್ರನು ಆಕಾಶಕ್ಕೆ ಅಡರಿದನೆಂದು ಕವಿಯು ಹೇಳುತ್ತಾನೆ. ಚಂದ್ರನಿಂದ ಆಗತಕ್ಕ ಕಾರ್ಯಗಳೆಲ್ಲವನ್ನೂ ಮಾಡುವವನಾದರೂ ಪ್ರಸಿದ್ಧ ಚಂದ್ರನಿಂದ ಈ ಚಂದ್ರನು ಬೇರೆ. ಅವನು ಚಂದ್ರನಾದರೆ ಇಲ್ಲಿರುವವನು ವಕ್ತ್ರಚಂದ್ರ. ಇವನು ಅವನಂತೆಯೇ ಇದ್ದಾನೆಯೇ ಹೊರತು ಅವನೇ ಇವನಲ್ಲ. ಅದೇ ಇದು ಎಂದರೆ ಅಭೇದವಾಗುತ್ತದೆ. ಅದರಂತೆ ಇದು ಎಂದರೆ ತಾದ್ರೂಪ್ಯವಾಗುತ್ತದೆ. ಇಲ್ಲಿರುವುದು ಅನುಭಯ ತಾದ್ರೂಪ್ಯರೂಪಕ. ಮುಖ ಚಂದ್ರನು ಚಂದ್ರನಿಗಿಂತ ಹೆಚ್ಚೂ ಅಲ್ಲ, ಕಡಿಮೆಯೂ ಅಲ್ಲ.

**ಶ್ರೀ ವಧುವಿನಂಬಕಚಕೋರಕಂ ಪೊರೆಯೆ ಭ**
**ಕ್ತಾವಳಿಯ ಹೃತ್ಕುಮುದಕೋರಕಂ ಬಿರಿಯೆ ಜಗ**
**ತೀವಲಯದಮಲ ಸೌಭಾಗ್ಯರತ್ನಾಕರಂ ಪೆರ್ಚನಿಂ ಮೇರೆವರಿಯೇ |**
**ಆವಗಂ ಸರಸ ಕರುಣಾಮೃತದ ಕಲೆಗಳಿಂ**
**ತೀವಿದೆಳನಗೆಯ ಬೆಳ್ದಿಂಗಳಂ ಪಸರಿಸುವ**
**ದೇವಪುರ ನಿಲಯ ಲಕ್ಷ್ಮೀರಮಣ ನಾಸ್ಯ ಚಂದ್ರಾನಂದ ವೆಮಗೀಯಲಿ ||**

ಇಲ್ಲಿ ಎರಡು ಚಂದ್ರರ ಪ್ರಸ್ತಾಪವಿದೆ; ಪ್ರಸಿದ್ಧ ಚಂದ್ರ ಮತ್ತು ಆಸ್ಯಚಂದ್ರ. ಚಕೋರಗಳನ್ನು ಪೊರೆಯುವುದು, ಕುಮುದಗಳನ್ನು ಅರಳಿಸುವುದು, ಸಮುದ್ರವನ್ನು ಉಕ್ಕೇರಿಸುವುದು ಚಂದ್ರನ ಕಾರ್ಯಗಳಾದರೆ, ಲಕ್ಷ್ಮಿಯ ನೇತ್ರಗಳೆಂಬ ಚಕೋರಗಳನ್ನು ಪೊರೆಯುವುದು, ಭಕ್ತರ ಹೃದಯಗಳೆಂಬ ಕುಮುದಕೋರಕಗಳನ್ನು ಅರಳಿಸುವುದು, ಜಗತ್ತಿನ ನಿರ್ಮಲವಾದ ಸೌಭಾಗ್ಯವೆಂಬ ಸಮುದ್ರವನ್ನು ಉಕ್ಕೇರಿಸುವುದು, ಆಸ್ಯ ಚಂದ್ರನ ಕಾರ್ಯಗಳಾಗಿವೆ. ಚಂದ್ರನಲ್ಲಿ ಅಮೃತ ಕಲೆಗಳಿರುವಂತೆ ಆಸ್ಯ ಚಂದ್ರನಲ್ಲಿಯೂ ಕರುಣಾಮೃತದ ಕಲೆಗಳಿವೆ. ಪ್ರಸಿದ್ಧ ಚಂದ್ರನು ಸದಾಕಾಲವೂ ಬೆಳದಿಂಗಳನ್ನು ಬೀರಲಾರ. ಆದರೆ ಆಸ್ಯಚಂದ್ರನು ಹಾಗಲ್ಲ. ಎಳನಗೆಯೆಂಬ ಬೆಳದಿಂಗಳನ್ನು ಸದಾ ಕಾಲವೂ ಪಸರಿಸುತ್ತಿರುತ್ತಾನೆ. ಯಾವಾಗಲೂ ಕಲಾಪರಿಪೂರ್ಣನಾಗಿ ನಗೆಯೆಂಬ ಬೆಳ್ದಿಂಗಳನ್ನು ಬೀರುತ್ತಿರುವುದು ಆಸ್ಯ ಚಂದ್ರನಲ್ಲಿರುವ ಅಧಿಕ ಗುಣ. ಹೀಗೆ ಗುಣಾತಿಶಯವನ್ನು ಹೇಳಿದ್ದರಿಂದ ಇದು **ಅಧಿಕ ತಾದ್ರೂಪ್ಯ ರೂಪಕವಾಗುತ್ತದೆ.**

೮೨

**ವದನ ಚತುಷ್ಕಮಿಲ್ಲದ ರಜೋಗುಣಮಿಲ್ಲದ ಪದ್ಮಪೀಠವಿಲ್ಲ**
**ಲ್ಲದ ಕಳಹಂಸವಿಲ್ಲದ ಕಮಂಡಲವಿಲ್ಲದ ಪಾಶರಜ್ಜುವಿ।**
**ಲ್ಲದ ವಿಮಳಾಕ್ಷ ಮಾಲಿಕೆಯು ಮಿಲ್ಲದ ಪೂರ್ವ ವಿರಿಂಚಿ ಧರ್ಮ ಕೋ**
**ಲ್ಲದ ವಿದನಯಯುಕ್ತ ದಾನಪತಿ ಪೇಳ್ದಪೆನಾಂ ನಿನಗೊಂದು ಕಾರ್ಯಮಂ॥**

ಇಲ್ಲಿ 'ಅಪೂರ್ವ ವಿರಿಂಚ ' ಹಿಂದಿಲ್ಲದ ಬ್ರಹ್ಮನೆಂದು ಹೇಳಿದ್ದರೂ ಪ್ರಸಿದ್ಧಬ್ರಹ್ಮನಿಗಿರುವ ಅಸಾಧಾರಣವಾದ ಲಕ್ಷಣಗಳಿಲ್ಲ. ನಾಲ್ಕು ಮುಖದ ಜೋಗುಣ, ಪದ್ಮಪೀಠ, ಮುಂತಾದವುಗಳು ಆ ಬ್ರಹ್ಮನಿಗಿವೆ. ಈ ಬ್ರಹ್ಮನಿಗಿಲ್ಲ. ಹೀಗಾಗಿ ಇದು ನ್ಯೂನತಾದ್ರೂಪ್ಯ ರೂಪಕವಾಗುತ್ತದೆ.

ಅಭೇದರೂಪಕ ಮತ್ತು ತಾದ್ರೂಪ್ಯ ರೂಪಕಗಳೆರಡೂ ಸಾಮ್ಯವನ್ನೇ ಆಶ್ರಯಿಸಿವೆಯಾದರೂ, ಅವುಗಳಲ್ಲಿ ಸ್ಪಷ್ಟವಾದ ಭೇದವಿರುವುದನ್ನು ಗುರುತಿಸಬಹುದಾಗಿದೆ. ಪ್ರಸಿದ್ಧವಾದ ಉಪಮಾನ ಮತ್ತು ಉಪಮೇಯಗಳನ್ನು ಅಭಿನ್ನವೆಂದು ವರ್ಣಿಸುವುದು ಅಭೇದರೂಪಕವಾದರೆ, ಅದರಂತೆ ಇರುವ ಮತ್ತೊಂದು ಎಂಬುದರ ಮೂಲಕ ಅಭಿನ್ನತೆಯನ್ನು ಆರೋಪಿಸುವುದು ತಾದ್ರೂಪ್ಯವಾಗುತ್ತದೆ. ಉದಾ:– ' ಮುಖವೇ ಚಂದ್ರ ' ಎಂದರೆ ಅಭೇದ. 'ಮುಖವೆಂಬ ಮತ್ತೊಬ್ಬ ಚಂದ್ರ ' ಎಂದರೆ ತಾದ್ರೂಪ್ಯವಾಗುತ್ತದೆ. ತಾದ್ರೂಪ್ಯ ರೂಪಕವು ಉಪಮೆ, ಉತ್ಪ್ರೇಕ್ಷೆಗಳ ನೆರವನ್ನು ಪಡೆದಿದೆ. ಅಲಂಕಾರಾಂತರದ ಛಾಯೆಯಿಂದ ರೂಪಕವು ಪರಿಪುಷ್ಟವಾಗುವುದೆಂಬ ಅಂಶವನ್ನು ಕುಂತಕನು ತನ್ನ ವಕ್ರೋಕ್ತಿ ಜೀವಿತದಲ್ಲಿ ಚರ್ಚಿಸಿದ್ದಾನೆ. ಕುವಲಯಾನಂದಕಾರನು ಆ ಅಂಶವನ್ನು ಸ್ವೀಕರಿಸಿ ಅದನ್ನೇ ಒಂದು ಪ್ರಭೇದವನ್ನಾಗಿ ಹೇಳಿರಬಹುದಾಗಿದೆ. ಹೇಗಿದ್ದರೂ ತಾದ್ರೂಪ್ಯರೂಪಕವೆಂಬ ಪ್ರಭೇದದ ಕಲ್ಪನೆಗೆ ಕುವಲಯಾನಂದಕಾರನಿಗೆ ನಾವು ಋಣಿಗಳಾಗಿರಬೇಕಾಗಿದೆ.

ರೂಪಕವನ್ನು ಸಾಂಗ, ನಿರಂಗ ಮತ್ತು ಪರಂಪರಿತವೆಂದು ವಿಭಾಗಿಸುವುದು ಮತ್ತೊಂದು ಕ್ರಮ. ಕಾವ್ಯಪ್ರಕಾಶಕಾರನಾದ ಮಮ್ಮಟನೇ ಮೊದಲಾದವರು ಈ ಕ್ರಮವನ್ನು ಅನುಸರಿಸಿದ್ದಾರೆ. **ಸಾಂಗ** ವೆಂದರೆ ಅಂಗಗಳಿಂದ ಕೂಡಿದ್ದು. ಇದಕ್ಕೆ ಸಾವಯವ ಎಂದು ಮತ್ತೊಂದು ಹೆಸರು. ಅನೇಕ ರೂಪಕಗಳಿದ್ದು ಅವುಗಳಲ್ಲಿ ಅಂಗಾಂಗಿ ಭಾವವಿದ್ದರೆ ಅದನ್ನು ಸಾಂಗರೂಪಕವೆಂದು ಕರೆಯುತ್ತಾರೆ. ಇಲ್ಲಿ ಒಂದು ರೂಪಕವು ಪ್ರಧಾನವಾಗಿರುತ್ತದೆ. ಇತರ ರೂಪಕಗಳು ಅದರ ಅಂಗ ಅಥವಾ ಅವಯವಗಳಾಗಿರುತ್ತವೆ. ಅಂಗಾಂಗಗಳು ಸೇರಿ ಸಮಗ್ರವಾದ ಶಿಲ್ಪವು ನಿರ್ಮಾಣಗೊಳ್ಳುವ ಪ್ರಕ್ರಿಯೆ ಚಮತ್ಕಾರಿಯಾದುದು. ಸಾಂಗರೂಪಕವು **ಸಮಸ್ತ ವಸ್ತು ವಿಷಯ** ಮತ್ತು **ಏಕದೇಶವಿವರ್ತಿ** ಎಂದು ಎರಡು ಬಗೆಯದಾಗಿದೆ. ಸಮಸ್ತವಸ್ತುವಿಷಯವು ವಾಚ್ಯ. ಕವಿಯು ಅಂಗ ರೂಪಕಗಳನ್ನೂ, ಅಂಗೀರೂಪಕವನ್ನೂ ವಾಚ್ಯವಾಗಿಸಿರುತ್ತಾನೆ.

ಉದಾ :–

**ಮೊರೆವ ತುಂಬಿಯ ಗಾಯಕರ ನಯ**
**ಸರದ ಕೋಕಿಲ ಪಾಠಕರ ಬಂ–**
**ಧುರದ ಗಿಳಿಗಳ ಪಂಡಿತರ ಮಾಮರದ ಕರಿಘಟೆಯ।**
**ಅರಳಿದಂಬುಜಸತ್ತಿಗೆಯುಮಂ**

**ಜರಿಯ ಕುಸುಮದ ಚಾಮರದ ಚಾ**
**ತುರ ವಸಂತ ನೃಪಾಲ ನಡೆದನು ಪಾಂಡುವಿನ ಮೇಲೆ ॥**

— ಕುಮಾರ.ಆದಿ. ೫-೭.

ಇಲ್ಲಿ '**ವಸಂತನೃಪಾಲ**' ಎಂಬುದು ಪ್ರಧಾನರೂಪಕ ಅಥವಾ ಅಂಗೀರೂಪಕ. ವಸಂತನನ್ನೇ ನೃಪಾಲನೆಂದು ಕವಿಯು ಹೇಳಿದ್ದಾನೆ. ತುಂಬಿಗಳೇ ಗಾಯಕರು, ಕೋಗಿಲೆಗಳೇ ಪಾಠಕರು–ಮುಂತಾದವು ಅಂಗರೂಪಕಗಳು. ರಾಜನ ಪರಿವಾರದಲ್ಲಿರುವವರನ್ನೆಲ್ಲ ವಸಂತನೃಪಾಲನಲ್ಲಿ ಕವಿಯು ಕಾಣಲು ಯತ್ನಿಸಿದ್ದಾನೆ. ಹೀಗೆ ಇಲ್ಲಿರುವ ರೂಪಕಗಳೆಲ್ಲ ಶಬ್ದೋಪಾತ್ತವಾಗಿರುವದರಿಂದ ಇದು ಸಮಸ್ತವಸ್ತುವಿಷಯವೆನಿಸುತ್ತದೆ.

**ಏಕದೇಶವಿವರ್ತಿ** ಎಂದರೆ ಒಂದು ಪ್ರದೇಶವನ್ನು ಮಾತ್ರ ಆವರಿಸುವಂಥದ್ದು. ಈ ಪ್ರಭೇದದಲ್ಲಿ ಕೆಲವು ರೂಪಕಗಳನ್ನು ಕವಿಯು ವಾಚ್ಯವಾಗಿ ಹೇಳಿದ್ದರೆ ಇನ್ನು ಕೆಲವನ್ನು ನಾವು ಅರ್ಥದ ಬಲದಿಂದ ಊಹಿಸಿಕೊಳ್ಳಬೇಕಾಗುತ್ತದೆ.

ಉದಾ :–

**ಅನುಜನದ್ಭುತ ಶೋಕರಸದಲಿ**
**ಕೊನರಿತರಸನ ಮೋಹಕುರುಕುಲ**
**ವನಪರಶು ಕುಳ್ಳಿರ್ದನೊಯ್ಯನೆ ಮಾನಿನಿಯ ಮಲಗಿ ॥**

— ಕುಮಾರ. ಅರಣ್ಯ. ೨೧ – ೩೫.

ಇಲ್ಲಿ 'ಶೋಕರಸದಲ್ಲಿ ಕೊನರಿತರಸನ ಮೋಹ' ಎಂಬುದನ್ನು ಗಮನಿಸಿ 'ರಸ' ಎಂಬ ಪದವು ಶ್ಲಿಷ್ಟಪದ. ಅದಕ್ಕೆ 'ನೀರು' ಎಂಬ ಅರ್ಥವೂ ಉಂಟು. 'ಶೋಕವೆಂಬ ಜಲದಲ್ಲಿ; ಅರಸನ ಮೋಹವು ಚಿಗುರಿತು'. ಇಲ್ಲಿ ಮೋಹವನ್ನು 'ಸಸ್ಯ' ವೆಂದು ಕವಿಯು ಕರೆದಿಲ್ಲ. ಆದರೆ ಅರ್ಥದ ಬಲದಿಂದ ನಾವೇ ಊಹಿಸಿಕೊಳ್ಳಬಹುದು. ಇಂಥವನ್ನು **ಏಕದೇಶವಿವರ್ತಿ** ಯೆಂದು ಹೇಳಬಹುದು.

ನಿರಂಗ ಅಥವಾ ನಿರವಯವಿಯು ಹೆಸರೇ ಸೂಚಿಸುವಂತೆ ಅವಯವರಹಿತವಾಗಿರುತ್ತದೆ. ಅಂದರೆ ರೂಪಕವು ಸ್ವತಂತ್ರವಾಗಿರುತ್ತದೆ. ಅದು ಬೇರೆ ರೂಪಕಗಳನ್ನು ಅವಲಂಬಿಸುವುದಿಲ್ಲ. ಇದು ಶುದ್ಧ, ಮತ್ತು ಮಾಲಾ, ಎಂಬ ಎರಡು ಪ್ರಭೇದಗಳನ್ನು ಹೊಂದಿದೆ.

ಉದಾ :–

**ಈಸುದಿನವೆಮ್ಮಣ್ಣನಾಜ್ಞೆಯ**
**ಪಾಶದಲಿ ಸಿಲುಕಿರ್ದ ಸಿಂಹದ**
**ಕೂಸನಂ ಕೆಣಕುವವೊಲೀ ಕುರುಕೀಚಕಾದಿಗಳು ॥**

— ಕುಮಾರ, ವಿರಾಟ.

ಇಲ್ಲಿ 'ಆಜ್ಞೆಯಪಾಶದಲ್ಲಿ' ಎಂಬುದನ್ನು ಗಮನಿಸಿ. ಇದೊಂದು ಸ್ವತಂತ್ರವಾದ

ರೂಪಕ. ಅದು ಬೇರಾವುದನ್ನೂ ಆಶ್ರಯಿಸಿಲ್ಲ. ಹೀಗೆ ಒಂದೇ ರೂಪಕವಿದ್ದರೆ ಅದು ಶುದ್ಧ ನಿರಂಗ ರೂಪಕವೆನಿಸಿಕೊಳ್ಳುತ್ತದೆ. ಹಾಗಲ್ಲದೆ ಇಂಥ ಹಲವಾರು ರೂಪಕಗಳು ಮಾಲೆಗಟ್ಟಿದ್ದರೆ ಅದಕ್ಕೆ ಮಾಲಾರೂಪಕ ವೆಂದು ಹೆಸರು.

ಸಿರಿಗಧಿದೇವಿ ಶಾರದೆಯ ಸತ್ಕಳೆ ಸ್ಮೆಪಿನ ಜನ್ಮಭೂಮಿಸ
ಚ್ಚರಿತದ ಸೀಮೆ ಸತ್ಕದ ತವರ್ಮನೆ ಪೆರ್ಮೆಗಡರ್ಪುಸಿದ್ಧಿಗಾ ।
ಗರಮತುಲೋತ್ಸವಕ್ಕೆ ನೆಲೆಚೆಲ್ವಿನ ಕೋಶಮನೂನ ಮಂಗಳೋ
ತ್ಕರ ನಿಧಿಗೌರಿ ರಂಜಿಸಿದಳಂಕದೊಳಿಂದು ಕಲಾವತಂಸ ನಾ ॥

ಇಲ್ಲಿ ಪಾರ್ವತಿಯನ್ನು ಕವಿಯು ಹಲವಾರು ರೂಪಕಗಳಿಂದ ವರ್ಣಿಸಿದ್ದಾನೆ. ಸಿರಿಗಧಿದೇವಿ, ಶಾರದೆಯ ಸತ್ಕಳೆ ಇತ್ಯಾದಿ. ಹಾಗಿದ್ದರೂ ಈ ರೂಪಕಗಳೆಲ್ಲ ಸ್ವತಂತ್ರವಾಗಿವೆ. ಅವು ಒಂದೊಂದೂ ಪ್ರತ್ಯೇಕ ಘಟಕಗಳೇ ಆಗಿವೆ. ಹೀಗೆ ಒಂದು ಉಪಮೇಯವನ್ನು ಅನೇಕ ಉಪಮಾನಗಳಿಗೆ ಅಭಿನ್ನವೆಂದು ಪ್ರತಿಪಾದಿಸುವುದು ಸ್ವಾರಸ್ಯವನ್ನುಂಟು ಮಾಡುತ್ತದೆ. ಹಾಗಾಗಿ ಇದನ್ನು ಮಾಲಾ ರೂಪಕವೆಂದು ಕರೆಯಲಾಗಿದೆ.

ಒಂದು ರೂಪಕವು ಮತ್ತೊಂದು ರೂಪಕಕ್ಕೆ ಕಾರಣವಾದರೆ ಅದು ಪರಂಪರಿತರೂಪಕ. ಇಲ್ಲಿ ಎರಡು ರೂಪಕಗಳಿದ್ದು ಅವು ಕಾರ್ಯ ಕಾರಣಭಾವ ಸಂಬಂಧವನ್ನು ಹೊಂದಿರುತ್ತವೆ. ಅಂದರೆ ಒಂದು ಕಾರಣರೂಪಕವಾಗಿದ್ದರೆ ಮತ್ತೊಂದು ಕಾರ್ಯರೂಪಕವಾಗಿರುತ್ತದೆ. ಕಾರ್ಯರೂಪಕವನ್ನು ತಿಳಿಯಲು ಕಾರಣರೂಪಕದ ಜ್ಞಾನವು ಅವಶ್ಯವಾಗುತ್ತದೆ. ಉದಾ:- 'ದುರಿತಕುಲಗಿರಿವಜ್ರದಂಡನು' ವೇದವ್ಯಾಸನು ದುರಿತಕುಲಗಿರಿ ವಜ್ರದಂಡನೆಂದು ಕವಿ ಕರೆದಿದ್ದಾರೆ. ಇಲ್ಲಿ ಎರಡು ರೂಪಕಗಳಿವೆ. ದುರಿತವೇ ಕುಲಗಿರಿ. ವ್ಯಾಸನೇ ಅದನ್ನು ಭಂಜಿಸುವ ವಜ್ರದಂಡ. ವ್ಯಾಸನನ್ನು ಸುಮ್ಮನೆ 'ವಜ್ರದಂಡ'ನೆಂದು ಕರೆದರೆ ಅದು ಅಪಾರ್ಥಕವಾದೀತು. ಆದರೆ ದುರಿತವನ್ನೇ ಕುಲಗಿರಿಯೆಂದು ಮೊದಲು ಕಲ್ಪಿಸಿ ಅನಂತರ ವ್ಯಾಸನನ್ನು ವಜ್ರದಂಡನೆಂದು ಕರೆದರೆ ಅರ್ಥಪೂರ್ಣವಾಗುತ್ತದೆ. ಆದ್ದರಿಂದ 'ದುರಿತ ಕುಲಗಿರಿ' ಯೆಂಬುದು ಕಾರಣರೂಪಕವಾದರೆ ವ್ಯಾಸನೇ ವಜ್ರದಂಡವೆಂಬುದು ಕಾರ್ಯರೂಪಕ. ಹೀಗೆ ಒಂದು ರೂಪಕದ ಸಿದ್ಧಿಗೆ ಇನ್ನೊಂದು ಅವಶ್ಯವೆಂಬಂತಿರುವಾಗ ಪರಂಪರಿತ.

ಉದಾ :-

ಸನಕಾದ್ಯರ್ಕಳ ಮಾನಸಾಂಬುಜಮರಾಳಂ ನೀನೆ ವೇದಾಂತನಂ
ದನಕೇಳೀರಸಲೋಲದಿವ್ಯಶುಕರಾಜಂನೀನೆನಾದಾಂತ ಕಾಂ ।
ಚನ ಹರ್ಮ್ಯಾಂತರ ಭಾಸಮಾನ ಮಣಿದೀಪಂನೀನೆ ಶೈವಾಗಮಾ
ಘನಭೋಳಿ ಮಧ್ಯ ಮನೋಜ್ಞ ಬಾಲಮಿಹಿರಂ ನೀನೇ ಭವಾನೀಧವಾ ॥

ಇಲ್ಲಿ ಭವಾನೀಧವನನ್ನು ಮರಾಳ, ದಿವ್ಯ ಶುಕರಾಜ, ಮಣಿದೀಪ, ಬಾಲಮಿಹಿರ, ಎಂದೆಲ್ಲ ರೂಪಿಸಲಾಗಿದೆ. ಇವೆಲ್ಲ ಕಾರ್ಯರೂಪಕಗಳು. ಇವು ಸಿದ್ಧಿಸಬೇಕಾದರೆ ಕಾರಣರೂಪಕಗಳ ನೆರವು ಅವಶ್ಯ. ಅಂತೆಯೇ ಸನಕಾದಿಗಳು ಮಾನಸಾಂಬುಜ,

ವೇದಾಂತನಂದನ, ನಾದಾಂತಕಾಂಚನಹರ್ಮ್ಯ, ಶೈವಾಗಮಘನನಭ ಮುಂತಾದವು ಕಾರಣರೂಪಕಗಳಾಗಿವೆ. ಅಂದರೆ ಸನಕಾದಿಗಳ ಮನಸ್ಸು ಎಂಬುದೇ ಕಮಲ. ಆ ಕಮಲದಲ್ಲಿ ವಿಹರಿಸುವ ಹಂಸ; ವೇದಾಂತವೆಂಬುದೇ ನಂದನ; ಅಲ್ಲಿ ಕೇಳಿರಸಲೋಲನಾದ ದಿವ್ಯಶುಕ ನೀನು –ಹೀಗೆ ಅರ್ಥೈಸಬೇಕಾಗುತ್ತದೆ. ಪರಂಪರಿತ ರೂಪಕದಲ್ಲಿ ಶ್ಲಿಷ್ಟ ಪದಗಳ ನೆರವನ್ನು ಪಡೆಯುವುದುಂಟು. ಉದಾ :– 'ವಿದ್ವನ್ಮಾನಸಹಂಸ' ಇಲ್ಲಿ 'ಮಾನಸ' ಎಂಬ ಪದ ಶ್ಲಿಷ್ಟ. ಇದಕ್ಕೆ ಮನಸ್ಸು ಎಂತಲೂ ಮಾನಸ ಸರೋವರ ಎಂತಲೂ ಅರ್ಥವಿದೆ. 'ವಿದ್ವಾಂಸರ ಮನಸ್ಸು ಎಂಬ ಮಾನಸ ಸರೋವರದಲ್ಲಿ ವಿಹರಿಸುವ ಹಂಸ' ಎಂದು ಅರ್ಥವಾಗುತ್ತದೆ. ಅಂಥವುಗಳನ್ನು ಶ್ಲಿಷ್ಟ ಪರಂಪರಿತ ರೂಪಕವೆಂದು ಕರೆಯುತ್ತಾರೆ.

ಸಾಂಗ ಮತ್ತು ಪರಂಪರಿತ ರೂಪಕಗಳು ನಿಕಟವಾಗಿ ಹೋಲುತ್ತವೆ. ಎರಡರಲ್ಲಿಯೂ ಅನೇಕ ರೂಪಕಗಳಿರುತ್ತವೆಯಾದ್ದರಿಂದ ಒಂದನ್ನು ಇನ್ನೊಂದೆಂದು ತಿಳಿಯುವ ಸಾಧ್ಯತೆ ಇದೆ. ಆದರೆ ಸ್ವಲ್ಪ ವಿಚಾರಿಸಿದರೆ ಅವುಗಳಿಗಿರುವ ಭೇದವು ಸ್ಪಷ್ಟವಾಗಿದೆ. ಸಾಂಗ ರೂಪಕಕ್ಕೆ ಅಂಗಾಂಗ ಭಾವವು ಜೀವಾಳ. ಪ್ರಧಾನವಾದ ರೂಪಕವನ್ನು ಇತರ ರೂಪಕಗಳ ನೆರವಿಲ್ಲದೆಯೂ ತಿಳಿಯಬಹುದು. ಉದಾ :– 'ವಸಂತನೃಪಾಲ' ನೆಂಬ ರೂಪಕವನ್ನು ಗ್ರಹಿಸಲು ಇತರ ರೂಪಕಗಳ ನೆರವು ಬೇಕಿಲ್ಲ. ಅವುಗಳ ಕೆಲಸವೇನಿದ್ದರೂ ಪ್ರಧಾನ ರೂಪಕದ ಚೆಲುವನ್ನು ಹೆಚ್ಚಿಸುವುದು. ಆದರೆ ಪರಂಪರಿತ ರೂಪಕದಲ್ಲಿ ಹಾಗಲ್ಲ. ಕಾರ್ಯರೂಪಕದ ಸಿದ್ಧಿಗೆ ಕಾರಣ ರೂಪಕವು ಅವಶ್ಯ. ಇಲ್ಲವಾದರೆ ಅಪಾರ್ಥಕವಾಗುವ ಸಂಭವವುಂಟು. ಸ್ವಾರಸ್ಯವಂತೂ ಗ್ರಹಿಕೆಗೆ ಬರುವುದಿಲ್ಲ. ಅಂದರೆ ಕಾರ್ಯ – ಕಾರಣ ಭಾವವು ಪರಂಪರಿತ ರೂಪಕದ ಜೀವಾಳ. ಪರಂಪರಿತ ರೂಪಕದಲ್ಲಿ ಎರಡು ರೂಪಕಗಳು ಮಾತ್ರ ಇರುತ್ತವೆಯಾದರೆ, ಸಾಂಗ ರೂಪಕದಲ್ಲಿ ಎರಡು ರೂಪಕಗಳೂ ಇರಬಹುದು, ಅದಕ್ಕಿಂತ ಹೆಚ್ಚೂ ಇರಬಹುದು.

ರೂಪಕಾಲಂಕಾರದ ವಿವೇಚನೆಯಲ್ಲಿ ಈ ವರೆಗೆ ಇದು ಸಾದೃಶ್ಯಮೂಲವಾದ ಅಲಂಕಾರವೆಂಬುದನ್ನೇ ಗಮನಿಸಿದ್ದೇವೆ. ಹೆಚ್ಚಿನವರು ಇದೇ ಅಭಿಪ್ರಾಯವನ್ನು ವ್ಯಕ್ತಗೊಳಿಸಿದ್ದಾರೆ. ಗೌಣೀಸಾರೋಪಾಲಕ್ಷಣೆಯು ಮಾತ್ರ ರೂಪಕವನ್ನು ಹಡೆಯಬಲ್ಲುದೆಂಬ ಅಭಿಪ್ರಾಯ ಹೆಚ್ಚಿನವರಲ್ಲಿದೆ. ಇದಕ್ಕೆ ಅಪವಾದವೆಂದರೆ ಶೋಭಾಕರಮಿತ್ರ. ಅವನು ತನ್ನ ಅಲಂಕಾರ ರತ್ನಾಕರದಲ್ಲಿ 'ಆರೋಪವನ್ನೇ' ರೂಪಕವೆಂದು ಕರೆದು ಭಿನ್ನವಸ್ತುಗಳನ್ನು ಸಾಮಾನಾಧಿಕರಣ್ಯದಿಂದ ನಿರ್ದೇಶಿಸುವುದೇ ಆರೋಪ. ಇಲ್ಲಿ ಸಾದೃಶ್ಯ ಸಂಬಂಧವು ಮಾತ್ರ ಇರಬೇಕೆಂದಿಲ್ಲ. ಇತರ ಸಂಬಂಧಗಳು ಅಂದರೆ ಕಾರ್ಯ– ಕಾರಣಾದಿ ಸಂಬಂಧಗಳೂ ಕೂಡ ರೂಪಕವಾಗಬಹುದೆನ್ನುತ್ತಾನೆ. ಉದಾ :– 'ತುಪ್ಪವೇ ಆಯುಸ್ಸು' ಇಲ್ಲಿ ತುಪ್ಪವು ಕಾರಣ, ಆಯುಸ್ಸು ಕಾರ್ಯ. ತುಪ್ಪದಿಂದ ಆಯಸ್ಸು ವರ್ಧಿಸುವುದೆಂಬುದು ತಾತ್ಪರ್ಯ. ಆದರೆ ಶೋಭಾಕರನ ಅಭಿಪ್ರಾಯವನ್ನು ಜಗನ್ನಾಥನು ಖಂಡಿಸಿ ಸಾದೃಶ್ಯ ಮೂಲಕವಾದ ರೂಪಕವನ್ನು ಮಾತ್ರ ಒಪ್ಪುವುದು ಪ್ರಾಚೀನ ಪರಂಪರೆಯೆಂದೂ, ಆ ಪರಂಪರೆಗೆ ವಿರುದ್ಧವಾಗಿ ಹೋಗುವುದು ಸರಿಯಲ್ಲವೆಂದೂ ವಾದಿಸಿದ್ದಾನೆ. ಹಾಗೆ ಮಾಡಿದರೆ ಸ್ಮರಣವೇ ಮುಂತಾದ ಅಲಂಕಾರಗಳಲ್ಲಿ ಚಿಂತೆ ಮುಂತಾದವುಗಳಿಂದ ಹುಟ್ಟುವ ಸ್ಮರಣೆಯನ್ನು ಗ್ರಹಿಸಬೇಕಾಗುತ್ತದೆ.

ಅಂದರೆ ಅಲಂಕಾರಗಳ ವ್ಯವಸ್ಥೆಯೇ ಅವ್ಯವಸ್ಥೆಯಾಗುತ್ತದೆಯೆನ್ನುತ್ತಾನೆ. ಆಧುನಿಕ ಕಾವ್ಯದ ಸಂದರ್ಭದಲ್ಲಿ ಶೋಭಾಕರನ ವಿಚಾರಗಳು ಮಹತ್ವದ್ದಾಗಿವೆಯೆನಿಸುತ್ತದೆ. ರೂಪಕದ ಕ್ಷೇತ್ರವನ್ನು ಮತ್ತಿಷ್ಟು ವಿಸ್ತಾರಗೊಳಿಸುವುದಕ್ಕೆ ಅದು ನೆರವು ನೀಡುತ್ತದೆ. ಪ್ರಾಚೀನರಲ್ಲಿಯೇ 'ದುರ್ಗಾ ಮಾರ್ಗಣ ನೀಲಲೋಹಿತ' (ದುರ್ಗಗಳ ಅಮಾರ್ಗಣ) (ಹುಡುಕದಿರುವಿಕೆ) ಎಂಬ ದುರ್ಗೆಯ ಮಾರ್ಗಣ (ಅರಸುವಿಕೆ) ಮಾಡುವ ಶಿವದಂಥದನ್ನು ರೂಪಕವೆಂದು ಸ್ವೀಕರಿಸಿದ ಉದಾಹರಣೆಯುಂಟು. ಇಲ್ಲಿ ಸಾದೃಶ್ಯ ಸಂಬಂಧವನ್ನು ಹೇಳುವುದಾದರೂ ಹೇಗೆ? ಕೇವಲ ಶಬ್ದಸಾಮ್ಯವಿಲ್ಲವೇ? ಹೀಗಾಗಿ ಶೋಭಾಕರನ ಅಭಿಪ್ರಾಯವು ವಿಚಾರಾರ್ಹವೆನಿಸುತ್ತದೆ.

ರೂಪಕವು ಆಧುನಿಕ ಕವಿಗಳಿಗೆ ಅತ್ಯಂತ ಪ್ರಿಯವಾದ ಅಲಂಕಾರ. ಉಪಮೆ ರೂಪಕಗಳನ್ನು ಬಿಟ್ಟರೆ ಬೇರೆ ಅಲಂಕಾರಗಳೇ ಇಲ್ಲವೇನೋ ಎಂಬಂತೆ ಅವುಗಳ ಬಳಕೆಯು ನಡೆದಿದೆ. ರೂಪಕವಂತೂ ಕಾವ್ಯದ ಭಾಷೆಯೇ ಆಗಿದೆ. ಅದು, ರೂಪಕವು ಕೇವಲ ಅಲಂಕಾರವಲ್ಲವೆಂಬುದಕ್ಕೆ ಬಲವಾದ ಸಾಕ್ಷಿ.

**ಅನ್ಯ ಉದಾಹರಣೆಗಳು :**

ಸ್ವಾರ್ಥದ ವೇದಿಕೆಯಲಿ ನಿರ್ದಯತೆಯ
ಯಜ್ಞ ಕುಂಡ ಹೂಡಿ,
ವಿಷಯ ವಿಲಾಸದ ಬೆಂಕಿಯೊಟ್ಟಿದರು
ಭೋಗದಾಜ್ಯ ನೀಡಿ,
ಸುಲಿಗೆ ಯಾಗವನು ಯಜಿಸಿದರೀ ಭೂ
ಯಜ್ಞ ಶಾಲೆಯಲ್ಲಿ.

— ಗೋಪಾಲಕೃಷ್ಣ ಅಡಿಗ. 'ಸಮಗ್ರಕಾವ್ಯ' (ಪುಟ ೮೮).

ಜೋಕಾಲಿ ಕದನದಲಿ ಭಾವಗಳು ನೇತಾಡಿ
ಎದೆರಂಗ ಸೀಳಿ ಹೊರಗೆ ಚಿಮ್ಮುವ ತವಕ,
ಕಾಯಲಾರದು ತವಕಗಳಿಗೆ ಹುಟ್ಟುವ ತನಕ
ತಾಕಲಾಟದ ಮನವು ಕಾಲಕರ್ಮದ ಉದಕ.

— ಜಿ. ಕೆ. ರವೀಂದ್ರಕುಮಾರ್ (ಪ್ಯಾಂಜಿಯಾ. ಪುಟ–೯).

' ನಿನ್ನ ನೆನಪು.
ಸೊಯ್ಯನೇ ಸರಿಯುವ ಸಾಪು ಮೈ ಹೊಳೆಯಲ್ಲಿ
ಮೇಲೆದ್ದು ಹಾಳೆ ಸೀಳುವ ಚೂಪುಗಲ್ಲು '

— ಎನ್. ಎಸ್. ಲಕ್ಷ್ಮೀನಾರಾಯಣಭಟ್ಟ 'ಆಯ್ದ ಕವನಗಳು' (ಪುಟ ೬)

ನನ್ನವ್ವ ಫಲವತ್ತಾದ ಕಪ್ಪುನೆಲ
ಅಲ್ಲಿ ಹಸಿರುಪತ್ರದ ಹರವು, ಬಿಳಿಯ ಹೂಹಬ್ಬ;
ಸುಟ್ಟಷ್ಟು ಕಸುವು, ನೊಂದಷ್ಟು ಹೂಹಣ್ಣು!
ಮಕ್ಕಳೊದ್ದರೆ ಅವಳ ಅಂಗಾಂಗ ಪುಳಕ.

— ಪಿ. ಲಂಕೇಶ್ 'ತಲೆಮಾರು' ಪುಟ ೪೫.

# ೯. ಉತ್ಪ್ರೇಕ್ಷಾ.

ಲಕ್ಷಣ :– ಒಂದು ಪದಾರ್ಥವನ್ನು ಮತ್ತೊಂದು ಪದಾರ್ಥವನ್ನಾಗಿ ಸಂಭಾವನೆ ಮಾಡುವುದೇ ಉತ್ಪ್ರೇಕ್ಷೆ. ಅದು ವಸ್ತು, ಹೇತು, ಹಾಗೂ ಫಲರೂಪವಾಗಿರುತ್ತದೆ.

**(ಸಂಭಾವನಾಸ್ಯಾದುತ್ಪ್ರೇಕ್ಷಾ ವಸ್ತುಹೇತು ಫಲಾತ್ಮನಾ** – ಕುವಲಯಾನಂದ.)

**ಉತ್ಪ್ರೇಕ್ಷೆ** ಎಂಬ ಶಬ್ದ ' ಉತ್ + ಪ್ರ + ಈಕ್ಷಾ ' ದಿಂದ ಸಿದ್ಧಗೊಂಡಿದೆ. ಇದರ ಅರ್ಥವನ್ನು ಬಲಪೂರ್ವಕವಾಗಿ ನೋಡುವುದು ಅಥವಾ ಉತ್ಕಟ ರೂಪದಿಂದ ಉಪಮಾನವನ್ನು ನೋಡುವುದು ಎಂದಾಗುತ್ತದೆ. ( **ಉತ್ಕಟಾ ಪ್ರಕೃಷ್ಟಸ್ಯ ಉಪಮಾನಸ್ಯ ಈಕ್ಷಾಜ್ಞಾನಮುತ್ಪ್ರೇಕ್ಷಾ** –ಉದ್ಯೋತ ) ಕವಿ ಕಲ್ಪನೆಯ ಸ್ವಚ್ಛಂದ ವಿಹಾರದಿಂದ ಅತೀವ ರಮಣೀಯವಾದ ಈ ಅಲಂಕಾರವನ್ನು ಭಾಮಹನೇ ಹೇಳಿದ್ದಾನೆ. ಹಾಗಿದ್ದರೂ ಉತ್ಪ್ರೇಕ್ಷೆಯ ಲಕ್ಷಣದಲ್ಲಿ ' ಸಂಭಾವನೆ' ಯೆಂಬ ಪದವನ್ನು ಸೇರಿಸಿದವನು ಉದ್ಭಟ. ಅಲ್ಲಿಂದ ಮುಂದೆ ಸಂಭಾವನಾ ಎಂಬ ಪದವು ಉತ್ಪ್ರೇಕ್ಷೆಯ ಲಕ್ಷಣಕ್ಕೆ ಅನಿವಾರ್ಯವೆನಿಸಿತು. ಆದ್ದರಿಂದ ಸಂಭಾವನೆಯೆಂದರೇನೆಂಬುದನ್ನು ತಿಳಿದುಕೊಳ್ಳುವುದು ಅವಶ್ಯ.

ಸಂಭಾವನೆಯೆನ್ನುವುದು ಒಂದು ವಿಧವಾದ ಜ್ಞಾನ. ಇದು ಸಂಶಯ ಮತ್ತು ನಿಶ್ಚಯಗಳ ನಡುವಿನದು. ಸಂಶಯದಲ್ಲಿ ಅನೇಕ ವಿಕಲ್ಪಗಳಿದ್ದು ಯಾವುದರ ಕಡೆಗೂ ಒಲವಿಲ್ಲದ ಸ್ಥಿತಿಯಿರುತ್ತದೆ. ಮಬ್ಬುಗತ್ತಲೆಯಲ್ಲಿ ತೂಗಾಡುವ ಹಗ್ಗವೊಂದನ್ನು ಕಂಡಾಗ ಇದು ಹಗ್ಗವೋ? ಹಾವೋ? ಎಂಬ ಸಂಶಯ ಹುಟ್ಟುತ್ತದೆ. ಸಂಶಯಾತ್ಮಕ ಜ್ಞಾನವು ಚತುಷ್ಕೋಟಿಕವೆಂದು ತಾರ್ಕಿಕರ ಅಭಿಪ್ರಾಯ. ಅಂದರೆ ಇದು ಹಗ್ಗವಿರಬಹುದು ; ಹಾವು ಇರಬಹುದು; ಹಗ್ಗವಲ್ಲದಿರಬಹುದು; ಹಾವಲ್ಲದಿರಬಹುದು; ಇವುಗಳಲ್ಲಿ ಯಾವುದಾದರೂ ಒಂದು ಹೌದೆಂಬುದು ದೃಢಪಟ್ಟರೆ ಅದು ನಿಶ್ಚಯ. ಇದು ಹಗ್ಗವೇ ಹೌದು, ಎಂದಾಗ ನಿಶ್ಚಯ. ಹಗ್ಗವನ್ನು ಹಾವು ಎಂದು ನಿರ್ಧರಿಸಿದರೆ ಅದು ನಿಶ್ಚಯವೇ ಆದರೂ ತಪ್ಪಾಗಿರುವುದರಿಂದ ವಿಪರ್ಯಯವೆಂದು ಹೇಳಲಾಗುತ್ತದೆ. ಈ ಸಂಶಯ–ನಿಶ್ಚಯಗಳ ನಡುವಿನದು ಊಹೆ. ಸಂಶಯಾತ್ಮಕ ಜ್ಞಾನದಲ್ಲಿನ ಯಾವುದಾದರೊಂದು ವಿಕಲ್ಪದತ್ತ ನಮ್ಮ ಒಲವು ಹೆಚ್ಚಾದರೆ ಅದು ಊಹೆಯೆನಿಸಿಕೊಳ್ಳುತ್ತದೆ. ( **ಉತ್ಕಟೈಕ ಕೋಟಿಕಃ ಸಂಶಯಃ ಊಹಃ** ) ಉದಾ :– ಇದು ಬಹುಶಃ ಹಗ್ಗವೇ ಇರಬೇಕು. ಈ ಊಹೆಯನ್ನು ಆಲಂಕಾರಿಕರು ' ಸಂಭಾವನೆಯೆಂದು ' ಕರೆದಿದ್ದಾರೆ. ಉಪಮೇಯವನ್ನು ಕಂಡು ಉಪಮಾನವೆಂದು ಊಹಿಸುವುದೇ ಈ ಸಂಭಾವನೆ. ಇದು ಸಮ್ಯಕ್ ಭಾವನೆ ಇರುವುದನ್ನು ಇದ್ದುದಕ್ಕಿಂತ ಚೆನ್ನಾಗಿದೆಯೆಂದು ತಿಳಿಯುವುದು.

ಊಹೆಯೇ ಸಂಭಾವನೆಯಾದರೂ ಅದಕ್ಕೂ ಇದಕ್ಕೂ ಇರುವ ಭೇದವು ಸ್ಪಷ್ಟ. ಊಹೆಯು ಯಥಾರ್ಥಜ್ಞಾನದ ಪ್ರಾಪ್ತಿಗೆ ಹವಣಿಸುವಂಥದು. ಆದರೆ ಸಂಭಾವನೆಯು ಅಂಥ ಗುರಿಯನ್ನು ಹೊಂದಿಲ್ಲ. ಅಲ್ಲಿ ನಿಜವಾದ ಸಂಶಯವೂ ಇಲ್ಲ, ಜ್ಞಾನದ ದೃಷ್ಟಿಯಿಂದಲೇ ಹೇಳುವುದಾದರೆ

ಅದು ವಿಪರ್ಯದತ್ತ ಒಲಿದಿದೆ. ಉಪಮೇಯವನ್ನು ಉಪಮಾನವನ್ನಾಗಿ ಭಾವಿಸುವುದು ಅಥವಾ ಕಲ್ಪಿಸುವುದು ಯಥಾರ್ಥಜ್ಞಾನವಾಗಲಾರದಷ್ಟೇ? ಹಾಗಿದ್ದರೂ ಅದರ ಉದ್ದೇಶ ವಸ್ತುವನ್ನು ಮೇಲೆತ್ತುವುದೇ ಆಗಿದೆ. ಅದು ಕವಿಗೂ ತಿಳಿದದ್ದೇ, ಹಾಗಾಗಿ ಅದು ಆಹಾರ್ಯವೆನಿಸಿದೆ. ಈ ಎಲ್ಲ ಅರ್ಥಗಳನ್ನು ಸಮಾವೇಶಗೊಳಿಸಲು ಊಹೆಯೆಂಬ ಪ್ರಸಿದ್ಧವಾದ ಪದಕ್ಕಿಂತಲೂ ಸಂಭಾವನೆಯೆಂಬ ಪದವು ಅನುಕೂಲಕರವಾಗಿದೆ.

ಉತ್ಪ್ರೇಕ್ಷೆಯು ಸಾದೃಶ್ಯ ಮೂಲವಾದ ಅಲಂಕಾರ. ಇಲ್ಲಿ ಪ್ರಾಧಾನ್ಯವಿರುವುದು ಅಭೇದಕ್ಕೆ. ಹಾಗಾಗಿ ಇದು ರೂಪಕ ಅತಿಶಯೋಕ್ತಿಗಳ ಜೊತೆಗೇ ನಿಲ್ಲುತ್ತದೆ. ಉತ್ಪ್ರೇಕ್ಷೆಯನ್ನು ವಿವೇಚಿಸುವಾಗ ರುಯ್ಯಕನು ಅಧ್ಯವಸಾಯವೆಂಬ ತತ್ತ್ವವನ್ನು ಹೇಳುತ್ತಾನೆ. ವಿಷಯ ಅಥವಾ ಉಪಮೇಯದ ನಿಗರಣವು ಅಧ್ಯವಸಾಯ. ಸಾಧ್ಯವಸಾನಾಲಕ್ಷಣೆಯು ಇದಕ್ಕೆ ಮೂಲ. ಉದಾ :– ಮುಖವನ್ನು ನೋಡಿ 'ಆಹಾ ಚಂದ್ರ!' ಎಂದಾಗ ಉಪಮೇಯವು ಮರೆಯಾಗಿ ಉಪಮಾನ ಮಾತ್ರ ಉಳಿದಿರುತ್ತದೆ. ಈ ಅಧ್ಯವಸಾಯವು ಎರಡು ಪ್ರಕಾರವೆಂದು ರುಯ್ಯಕ ಹೇಳುತ್ತಾನೆ. ಸಿದ್ಧ ಮತ್ತು ಸಾಧ್ಯ – ಎಂದು. ಸಿದ್ಧ ಅಧ್ಯವಸಾಯವು ಅತಿಶಯೋಕ್ತಿಗೆ ಮೂಲವಾದರೆ ಸಾಧ್ಯ – ಅಧ್ಯವಸಾಯವು – ಅಂದರೆ ಅಧ್ಯವಸಾಯದ ಸಾಧನೆಯ ಹಂತವು ಉತ್ಪ್ರೇಕ್ಷೆಗೆ ಮೂಲವೆಂದೂ ಅವನ ಅಭಿಪ್ರಾಯ. (ಅಧ್ಯವಸಾಯೇ ವ್ಯಾಪಾರಪ್ರಾಧಾನ್ಯೇ ಉತ್ಪ್ರೇಕ್ಷಾ – ರುಯ್ಯಕ.) ಉತ್ಪ್ರೇಕ್ಷೆಯು ಅತಿಶಯೋಕ್ತಿಯ ಅಂಶವನ್ನು ಸೇರಿಸಿಕೊಳ್ಳಬೇಕಾದುದು ಅವಶ್ಯವೆಂಬುದನ್ನು ಭಾಮಹನೇ ಹೇಳಿದ್ದಾನೆ.

ಉತ್ಪ್ರೇಕ್ಷೆಯಲ್ಲಿ ಇತರ ಸಾದೃಶ್ಯ ಮೂಲವಾದ ಅಲಂಕಾರಗಳಂತೆ ಸಾದೃಶ್ಯ ಪ್ರತೀತಿಯು ಇದೆಯಾದರೂ ಅದಕ್ಕೆ ಪ್ರಾಧಾನ್ಯವಿಲ್ಲ. ಉಪಮಾನೋಪಮೇಯಗಳ ಸಾಮ್ಯವನ್ನು ಹೇಳುವುದು ಕವಿಯ ಗುರಿಯಲ್ಲ. ಕೆಲವೊಮ್ಮೆ ಸಾದೃಶ್ಯವು ಕಂಡೂ ಕಾಣದಂತೆಯೂ ಇರಬಹುದು. ಅಥವಾ ಪರ್ಯಾಲೋಚಿಸಿದಾಗ ಕಿಂಚಿತ್ ಸಾಮ್ಯವು ಕಂಡು ಬರಬಹುದು. ಕವಿಗೆ ಅಷ್ಟು ಸಾಕು. ಅವನು ಕಲ್ಪನೆಯ ಕುದುರೆಯನ್ನು ಹಾರಿಸಿ ಬಿಡುತ್ತಾನೆ. ಈ ಕವಿ ಕಲ್ಪನೆಯೇ ಇಲ್ಲಿ ಚಮತ್ಕಾರಕ್ಕೆ ಕಾರಣವಾಗಿರುತ್ತದೆ. ಅದಲ್ಲದ ವಸ್ತುವನ್ನು ಅದು ಎಂದು ಕಲ್ಪಿಸಿ ಸಂತೋಷವನ್ನು ಹುಟ್ಟಿಸುತ್ತಾನೆ. ಇಲ್ಲದ ಗುಣ ಕ್ರಿಯೆಗಳನ್ನು ಕಲ್ಪಿಸುತ್ತಾನೆ. ಅಚೇತನವನ್ನು ಚೇತನವನ್ನಾಗಿಸುತ್ತಾನೆ. ಮುಂಜಾನೆಯ ಮಂಜು ನಿಸರ್ಗದ ಕಣ್ಣೀರೂ ಆಗಬಹುದು; ಆನಂದಬಾಷ್ಪವೂ ಆಗಬಹುದು. ಹೀಗೆ ಕವಿಯ ಕಲ್ಪನೆ ಅರ್ಥಾತ್ ಸಂಭಾವನೆಯೇ ಉತ್ಪ್ರೇಕ್ಷೆಯ ಜೀವಾಳ.

ಉತ್ಪ್ರೇಕ್ಷೆಯ ಪ್ರಕಾರಗಳನ್ನು ಕುರಿತು ಬೇರೆ ಬೇರೆಯವರು ಬೇರೆ ಬೇರೆಯಾಗಿ ಹೇಳಿದ್ದಾರೆ. ಅವುಗಳಲ್ಲಿ ಕುವಲಯಾನಂದಕಾರನು ಅನುಸರಿಸಿರುವ ಕ್ರಮವು ಸುಕರವೆಂದು ಭಾವಿಸಿ ಅದನ್ನೇ ಗಮನಿಸಬಹುದು. ಕುವಲಯಾನಂದದ ಪ್ರಕಾರ – ಉತ್ಪ್ರೇಕ್ಷೆಯು ಮೂರು ವಿಧವಾದುದು. ವಸ್ತು, ಹೇತು, ಹಾಗೂ ಫಲ. ವಸ್ತೂತ್ಪ್ರೇಕ್ಷೆಯನ್ನೇ ಸ್ವರೂಪೋತ್ಪ್ರೇಕ್ಷೆಯೆಂದೂ ಕರೆಯುತ್ತಾರೆ.

**ವಸ್ತೂತ್ಪ್ರೇಕ್ಷೆ ಅಥವಾ ಸ್ವರೂಪೋತ್ಪ್ರೇಕ್ಷೆ :–**

ಒಂದು ವಸ್ತುವನ್ನು ಇನ್ನೊಂದು ವಸ್ತುವನ್ನಾಗಿ ಕಲ್ಪಿಸಿ ವರ್ಣಿಸುವುದು

ವಸ್ತೂತ್ಪ್ರೇಕ್ಷೆಯೆನಿಸುತ್ತದೆ. ಇಲ್ಲಿ ವಸ್ತುವೆಂದರೆ ಜಾತಿ ಗುಣ, ಕ್ರಿಯೆ, ಮತ್ತು ದ್ರವ್ಯಗಳಲ್ಲಿ ಯಾವುದೂ ಆಗಬಹುದು. ಒಂದು ವಸ್ತುವಿನಲ್ಲಿ ಇಲ್ಲದಿರುವ ಜಾತಿ, ಗುಣ ಕ್ರಿಯೆ, ಮತ್ತು ದ್ರವ್ಯಗಳನ್ನು ಇದೆಯೆಂದು ಹೇಳುವುದು ಈ ಪ್ರಕಾರಕ್ಕೆ ಸೇರುತ್ತದೆ. ಇದನ್ನು ಪುನಃ ಉಕ್ತವಿಷಯಾ ಮತ್ತು ಅನುಕ್ತವಿಷಯಾ ಎಂದು ಎರಡಾಗಿ ವಿಭಾಗಿಸಲಾಗಿದೆ. ಉಕ್ತ ವಿಷಯವೆಂದರೆ ಉಪಮೇಯವನ್ನು ಹೇಳಿ ಅನಂತರ ಅದನ್ನು ಉಪಮಾನ ರೂಪದಲ್ಲಿ ಸಂಭಾವನೆ ಮಾಡುವುದು. ಅನುಕ್ತವಿಷಯವೆಂದರೆ ಉತ್ಪ್ರೇಕ್ಷೆಯ ವಿಷಯವನ್ನು ಹೇಳದೆ ಕೇವಲ ಉಪಮಾನ ರೂಪದ ಸಂಭಾವನೆಯನ್ನು ಮಾತ್ರ ನಿವೇದಿಸುವುದು. ಉದಾ :– 'ಕತ್ತಲೆಯನ್ನು ಮೈಗೆಲ್ಲಾ ಬಳಿಯುತ್ತಿದ್ದಾರೆಯೋ ಎಂಬಂತೆ; ಆಕಾಶವು ಕಾಡಿಗೆಯ ಮಳೆಯನ್ನು ಸುರಿಸುತ್ತಿದೆಯೋ ಎಂಬಂತೆ. ('ಲಿಂಪತೀವತಮೋಽಂಗಾನಿವರ್ಷತೀವಾಂಜನಂ ನಭಃ') ಇಲ್ಲಿ ಕತ್ತಲೆಯು ವರ್ಣ್ಯವಿಷಯವಾಗಿದ್ದರೂ ಕವಿಯು ಅದನ್ನು ಸ್ಪಷ್ಟವಾಗಿ ಹೇಳಿಲ್ಲ. ಉಕ್ತವಿಷಯಕ್ಕೆ –

**ಪೊಳೆವಿಂದೂ ಪಲ ರುಚಿಗಳ್**
**ಬಳಸಿ ನೃಪಾತ್ಮಜನನಂಗ ಜನ್ಮವ ಬೆಸದಿಂ।**
**ಬೆಳಪ ಶಶಿ ಕಾಪುವೇಳ್ದೊಡೆ**
**ಬಳಸಿದ ಬೆಳ್ದಿಂಗಳಂತಿರೆಂ ತೊಳಗಿದವೋ ||**

ಇಲ್ಲಿ ರಾಜಕುಮಾರನನ್ನು ಆವರಿಸಿರುವ ಚಂದ್ರಕಾಂತ ಮಣಿಯ ಕಾಂತಿಯು ಮನ್ಮಥನ ಆಜ್ಞೆಯಂತೆ ಚಂದ್ರನು ರಾಜಪುತ್ರನಿಗೆ ಕಾವಲಿಟ್ಟ ಬೆಳದಿಂಗಳೋ ಎನ್ನುವಂತೆ ಬೆಳಗುತ್ತಿತ್ತು – ಎಂದು ಕವಿಯು ವರ್ಣಿಸುತ್ತಾನೆ. ಚಂದ್ರಕಾಂತ ಮಣಿ ಹಾಗೂ ಬೆಳದಿಂಗಳಲ್ಲಿರುವ ಧವಳ ಪ್ರಕಾಶವೆಂಬ ಸಾಮ್ಯವು ಈ ಸಂಭಾವನೆಗೆ ನಿಮಿತ್ತವಾಗಿದೆ. ಇಲ್ಲಿ ಚಂದ್ರಕಾಂತಮಣಿ ಹಾಗೂ ಬೆಳದಿಂಗಳ ನಡುವೆ ಇರುವ ಸಾದೃಶ್ಯವನ್ನು ಎತ್ತಿ ಹೇಳುವುದು ಕವಿ ವಿವಕ್ಷೆಯಲ್ಲ. ಪದ್ಯದ ಸೊಗಸಿಗೆ ಅದು ಕಾರಣವೂ ಅಲ್ಲ. ಸ್ವಾರಸ್ಯವಿರುವುದು ಕವಿಯ ಕಲ್ಪನೆ ಅಥವಾ ಸಂಭಾವನೆಯಲ್ಲಿ. ಕವಿಯು ಚಂದ್ರಕಾಂತ ಮಣಿಯ ಪ್ರಕಾಶವನ್ನು ಬೆಳದಿಂಗಳೆಂಬುದಾಗಿ ಕಲ್ಪಿಸಿದ್ದಾನಾದ್ದರಿಂದ ಉಪಮೇಯ ಉಪಮಾನಗಳನ್ನು ಸ್ಪಷ್ಟವಾಗಿ ಹೇಳಿದಂತಾಯಿತು. ಈ ರೀತಿಯಲ್ಲಿ ವಿಷಯವನ್ನು ವಾಚ್ಯವಾಗಿ ಹೇಳಿದ್ದರೆ ಅದು ಉಕ್ತನಿಮಿತ್ತವೆನಿಸಿಕೊಳ್ಳುತ್ತದೆ. ಚಂದ್ರಕಾಂತಮಣಿಯ ಬೆಳಗೆಂಬ ವಸ್ತುವನ್ನು ಬೆಳದಿಂಗಳಾಗಿ ಕಲ್ಪಿಸಿದ್ದರಿಂದ ವಸ್ತೂತ್ಪ್ರೇಕ್ಷೆಯಾಗುತ್ತದೆ.

## ಹೇತೂತ್ಪ್ರೇಕ್ಷೆ :–

ಹೇತುವೆಂದರೆ ಕಾರಣ. ಕವಿಯು ಕಲ್ಪಿತವಾದ ಕಾರಣವೊಂದನ್ನು ನಿರೂಪಿಸಿ ಘಟನೆಯನ್ನು ವಿವರಿಸಿದ್ದರೆ ಅದು ಹೇತೂತ್ಪ್ರೇಕ್ಷೆ. ಕವಿಯು ನೀಡುವ ಕಾರಣವು ನಿಜವಾದ ಕಾರಣವಾಗಿದ್ದರೆ ಸ್ವಾರಸ್ಯವಿಲ್ಲ. ಕಲ್ಪಿತವಾಗಿದ್ದರೆ ಸ್ವಾರಸ್ಯ. ಹೇತೂತ್ಪ್ರೇಕ್ಷೆಯನ್ನು ಸಿದ್ಧವಿಷಯ ಮತ್ತು ಅಸಿದ್ಧ ವಿಷಯವೆಂದು ವಿಭಾಗಿಸುತ್ತಾರೆ. ಸಿದ್ಧ ವಿಷಯದಲ್ಲಿ ಕಲ್ಪಿತ ಕಾರಣವು ಸಂಭವನೀಯವೆನ್ನುವಂತಿರುತ್ತದೆ. ಉದಾ:– 'ನೆಲದ ಮೇಲೆ ನಡೆದುದರಿಂದ ನಿನ್ನ ಕಾಲುಗಳು ಕೆಂಪಾದುವೆಂಬುದು ನಿಶ್ಚಿತ' ಇಲ್ಲಿ ನಾಯಿಕೆಯ ಕಾಲುಗಳು ಸ್ವಾಭಾವಿಕವಾಗಿಯೇ ಕೆಂಪಾಗಿವೆ.

ಆದರೆ ಕವಿಯು, ಮೃದು ಚರಣಗಳು ಕಠಿಣವಾದ ನೆಲದ ಮೇಲೆ ನಡೆದ ಕಾರಣದಿಂದ ಕೆಂಪಾದವೆಂದು ಕಲ್ಪಿಸುತ್ತಾನೆ. ಇದು ಸಂಭವನೀಯವಾದುದು. ಹೀಗಲ್ಲದೆ ಕವಿಯ ಕಲ್ಪನೆಯ ಆಧಾರವು ಅಸಂಭಾವ್ಯವಿದ್ದಾಗ ಅಸಿದ್ಧ ವಿಷಯವೆನ್ನುತ್ತಾರೆ. ಉದಾ :– ' ನಿನ್ನ ಮುಖದ ಕಾಂತಿಯನ್ನು ಹೊಂದುವ ಬಯಕೆಯಿಂದ ಚಂದ್ರನು ಕಮಲಗಳ ಮೇಲೆ ವೈರವನ್ನು ತೋರುತ್ತಿದ್ದಾನೆ' ಚಂದ್ರೋದಯವಾದಾಗ ಕಮಲಗಳು ಮುದುಡುವುದು ನಿಸರ್ಗನಿಯಮ. ಆದಕ್ಕೆ ಕವಿಯು ಮನೋಹರವಾದ ಬೇರೊಂದು ಕಾರಣವನ್ನು ಕಲ್ಪಿಸಿದ್ದಾನೆ. ಈ ಕಾರಣವು ಅಸಂಭಾವ್ಯವಾಗಿದೆ. ಹಾಗಿದ್ದರೂ ಚಮತ್ಕಾರಿಯಾಗಿದೆ. ಹೇತೂತ್ಪ್ರೇಕ್ಷೆಯ ಈ ಪ್ರಭೇದಗಳು ಸೂಕ್ಷ್ಮವಾಗಿವೆ. ಅವು ಉತ್ಪ್ರೇಕ್ಷೆಯ ವ್ಯಾಪ್ತಿಯನ್ನರಿಯಲು ಸಹಾಯಕಗಳಾದುದರಿಂದ ಗಮನಿಸಬೇಕಷ್ಟೇ!

**ತಳಿರ್ಗೊಯ್ವಳೆಯಳ ಚೆಂದುಟಿ**
**ದಳಿರಂ ತಳಿರ್ಗೆತ್ತು ಕರ್ದುಕಿದುದು ಪಿಕನೀಮಂ।**
**ಜುಳ ಪಲ್ಲವಮೆಲ್ಲಮನೀ**
**ಗಳೆ ಪರಿದಪಳೆಂಬ ಮುನಿಸಿನಿಂ ಕರ್ದುಕುವವೋಲ್॥**

ಇಲ್ಲಿ ತಳಿರುಗಳನ್ನು ಕೊಯ್ಯುತ್ತಿರುವ ತರುಣಿಯ ತುಟಿಗಳನ್ನು ತಳಿರೆಂದು ತಿಳಿದು ಕೋಗಿಲೆಯು ಕಚ್ಚಿತು. ಅದು ಸುಂದರವಾದ ತಳಿರುಗಳನ್ನೆಲ್ಲ ಇವಳು ಹರಿಯುತ್ತಾಳೆ ಎಂಬ ಮುನಿಸಿನಿಂದ ಕಚ್ಚಿದಂತಿತ್ತು ಎಂದು ಕವಿಯು ಹೇಳುತ್ತಾನೆ. ತನಗೆ ಸೇರಿದ ವಸ್ತುಗಳನ್ನು ಅಪಹರಿಸುವವರ ಮೇಲೆ ಮುನಿಸು ಸಹಜ. ಹಾಗೆಯೇ ಕೋಗಿಲೆಯು ಮುನಿಸಿನಿಂದ ಕಚ್ಚಿತೆಂಬ ಕವಿಯ ಕಲ್ಪನೆಯು ಸಂಭವನೀಯವೆಂದು ವಾದಿಸಿದರೆ ಇದು ಸಿದ್ಧ ವಿಷಯವಾಗುತ್ತದೆ. ಕವಿಯೇ ಸ್ಪಷ್ಟವಾಗಿ ತಳಿರೆಂಬ ಭ್ರಾಂತಿಯಿಂದ ಕಚ್ಚಿತೆಂದು ಹೇಳಿದ್ದರಿಂದ ಮುನಿಸು ಅಸಂಭವವಾಗುತ್ತದೆ. ಆಗ ಇದು ಅಸಿದ್ಧ ವಿಷಯವೆನಿಸುತ್ತದೆ. ತುಟಿಗಳನ್ನು ಕಚ್ಚುವುದಕ್ಕೆ ಕವಿಯು ಕಲ್ಪಿತವಾದ ಕಾರಣವೊಂದನ್ನು ಹೇಳಿರುವುದರಿಂದ ಇದು ಹೇತೂತ್ಪ್ರೇಕ್ಷೆ. ಈ ಉತ್ಪ್ರೇಕ್ಷೆಯು ಪದ್ಯದ ಮೊದಲರ್ಧದಲ್ಲಿರುವ ಭ್ರಾಂತಿಯೆಂಬ ಅಲಂಕಾರದಿಂದ ಪೋಷಣೆ ಪಡೆದಿದೆಯೆಂಬುದನ್ನು ಗಮನಿಸಬಹುದು.

## ಫಲೋತ್ಪ್ರೇಕ್ಷೆ :–

ಒಂದು ಪ್ರಕಾರದಿಂದಿರುವ ವಸ್ತುವನ್ನು ಕಲ್ಪಿತವಾದ ಫಲ ಅಥವಾ ಪ್ರಯೋಜನದ ಸಲುವಾಗಿ ಬೇರೊಂದು ಬಗೆಯಿಂದ ಇದೆಯೆಂದು ವರ್ಣಿಸಿದರೆ ಅದು ಫಲೋತ್ಪ್ರೇಕ್ಷೆಯಾಗುತ್ತದೆ. ಸಾಮಾನ್ಯವಾಗಿ ಕ್ರಿಯೆಯು ನಡೆಯುವುದು ಎರಡು ರೀತಿಯಲ್ಲಿ – ಕಾರಣದಿಂದ ಅಥವಾ ಪ್ರಯೋಜನಕ್ಕಾಗಿ. ಕಾರಣದಿಂದ ನಡೆಯುವುದನ್ನು ಹೇತೂತ್ಪ್ರೇಕ್ಷೆಯು ಹೇಳಿದರೆ, ನಿರ್ದಿಷ್ಟ ಪ್ರಯೋಜನಕ್ಕಾಗಿ ಅಥವಾ ಫಲಕ್ಕಾಗಿ ನಡೆವ ಕ್ರಿಯೆಯನ್ನು ಫಲೋತ್ಪ್ರೇಕ್ಷೆಯೆಂದು ಹೇಳುತ್ತಾರೆ. ಇದನ್ನು ಕೂಡ ಹಿಂದಿನಂತೆಯೇ ಸಿದ್ಧ ವಿಷಯ ಮತ್ತು ಅಸಿದ್ಧ ವಿಷಯವೆಂದು ವಿಭಾಗಿಸಲಾಗಿದೆಯೆಂಬುದನ್ನು ಗಮನಿಸಬಹುದು. ಆದರೆ ಈ ಭೇದಗಳಿಗೆ ಮಹತ್ವವನ್ನು ಕೊಡಬೇಕಾಗಿಲ್ಲ.

ಆ ಸೇನಾರಜದಿಂ ಪರಿ
ಧೂಸರಮಾದುದು ನಿಜಾಂಗಮಂ ತೊಳೆಯಲ್ಕೆಂ।
ದೋಸರಿಸದೆ ಪೊಕ್ಕಂತಿರೆ
ವಾಸರಕರನಪರವಾರಿನಿಧಿಯೊಳ್ ಪೊಕ್ಕಂ॥

ಇಲ್ಲಿ ಸೇನೆಯ ಧೂಳಿನಿಂದ ಮಲಿನವಾದ ತನ್ನ ಅಂಗಗಳನ್ನು ತೊಳೆದುಕೊಳ್ಳಲೋ ಎಂಬಂತೆ, ಸೂರ್ಯನು ಪಶ್ಚಿಮ ಸಮುದ್ರವನ್ನು ಪ್ರವೇಶಿಸಿದನು ಎಂದು ಕವಿಯು ವರ್ಣಿಸುತ್ತಾನೆ. ಇಲ್ಲಿ ಸೂರ್ಯನು ಸಮುದ್ರವನ್ನು ಪ್ರವೇಶಿಸುವುದು ಸಹಜವಾದ ಕ್ರಿಯೆ. ಈ ಕ್ರಿಯೆಗೆ ಕವಿಯು ನಿಜಾಂಗವನ್ನು ತೊಳೆಯುವುದೆಂಬ ಫಲವನ್ನು ಕಲ್ಪಿಸಿದ್ದಾನೆ. ಆದ್ದರಿಂದ ಇದು ಫಲೋತ್ಪ್ರೇಕ್ಷೆ.

## ಹೇತೂತ್ಪ್ರೇಕ್ಷೆ – ಫಲೋತ್ಪ್ರೇಕ್ಷೆ.

ಹೇತು ಮತ್ತು ಫಲಗಳಿಗೆ ಸಂಬಂಧಿಸಿದ ಉತ್ಪ್ರೇಕ್ಷೆಗಳಲ್ಲಿ ಯಾವುದು ಯಾವ ಪ್ರಕಾರಕ್ಕೆ ಸೇರಿದ್ದೆಂಬುದನ್ನು ಗುರುತಿಸುವಲ್ಲಿ ಸ್ವಲ್ಪ ಗೊಂದಲವಾಗುತ್ತದೆ. ಎರಡರಲ್ಲಿಯೂ ಕ್ರಿಯೆಯನ್ನು ಹೇಳಿರುವುದು ಈ ಗೊಂದಲಕ್ಕೆ ಕಾರಣ. ಆದರೆ ಹೇತು ಮತ್ತು ಫಲಗಳ ವ್ಯತ್ಯಾಸವನ್ನು ತಿಳಿದರೆ ಗೊಂದಲಕ್ಕೆ ಅವಕಾಶವಿಲ್ಲ. ಹೇತುವು ಕಾರ್ಯಕ್ಕೆ ನಿಯತವಾಗಿ ಪೂರ್ವವರ್ತಿಯಾಗಿರುತ್ತದೆ. ಕಾರಣವು ಮೊದಲು: ಕಾರ್ಯವು ಅನಂತರ. ಫಲ ಅಥವಾ ಪ್ರಯೋಜನವು ಕ್ರಿಯೆಯು ನಡೆದ ಮೇಲೆ ದೊರೆಯುವಂಥದು. ಕ್ರಿಯೆಯೊಂದಕ್ಕೆ ಕಾರಣವನ್ನು ಹೇಳಿದಾಗ ಹೇತೂತ್ಪ್ರೇಕ್ಷೆಯಾಗುತ್ತದೆ. ಕ್ರಿಯೆಯ ಗುರಿ ಅಥವಾ ಫಲವನ್ನು ಹೇಳಿದರೆ ಫಲೋತ್ಪ್ರೇಕ್ಷೆಯಾಗುತ್ತದೆ. ಉದಾ :– ಕೋಗಿಲೆಯು ಎಳೆಯಳ ತುಟಿಯನ್ನು ಕಚ್ಚುವುದು ಕ್ರಿಯೆ. ಅದಕ್ಕೆ ಮುನಿಸು ಕಾರಣ. ಸೂರ್ಯನು ಸಾಗರವನ್ನು ಪ್ರವೇಶಿಸುವುದು ಕ್ರಿಯೆ. – ಮೈತೊಳೆದುಕೊಳ್ಳುವುದು ಗುರಿ. ತೃತೀಯಾಂತ ಅಥವಾ ಪಂಚಮ್ಯಂತ್ಯಗಳು ಹೇತುವನ್ನು ಹೇಳುತ್ತವೆ. ಚತುರ್ಥ್ಯಂತ ಅಥವಾ ಆ ಅರ್ಥದ ಪ್ರತ್ಯಯಗಳು ಫಲವನ್ನು ಹೇಳುತ್ತವೆ.

## ಉತ್ಪ್ರೇಕ್ಷಾ ವಾಚಕಗಳು : –

ಉತ್ಪ್ರೇಕ್ಷಾ ವಾಚಕ ಪದಗಳು ಅನೇಕ. ಕೆಲವು ಮುಖ್ಯವಾದವುಗಳೆಂದರೆ ಅಂತೆ, ಅಂತೆವೋಲ್, ಎನೆ, ಎನಲ್, ಅಂದಂ, ಮಾಳ್ಕೆ, ಎಂಬಂತಿರೆ, ಎಂಬಿನೆಗಂ, ಎನಿಸಿ –ಇತ್ಯಾದಿ.

ಉದಾ :–

ಹೃದಯದೊಳಗಿಟ್ಟುಕೊಂಡುದೊ
ಪದೆಪಿಂ ಕಾಮಿನಿಯನೆನೆ ಮಣಿಸ್ತಂಭ ಸಮೂ।
ಹದೊಳೆಲ್ಲ ಮೆಯ್ದೆ ಮಾರ್ತೊಳ
ಗಿದುದಾಗಳ್ ರೂಪು ಚಿತ್ರರಥ ನಂದನೆಯಾ॥

ಇಲ್ಲಿ ಚಿತ್ರರಥನಂದನೆಯ ಪ್ರತಿಬಿಂಬವು ಮಣಿಸ್ತಂಭಗಳ ಸಮೂಹದಲ್ಲಿ ಪ್ರತಿಬಿಂಬಿತವಾಗಿರಲು ಕಾಮಿನಿಯನ್ನು ಹೃದಯದೊಳಗೆ ಇಟ್ಟುಕೊಂಡಿದೆಯೋ ಎನೋ ಎಂಬಂತೆ ಕಂಡಿತು ಎನ್ನುತ್ತಾನೆ ಕವಿ. ಇಲ್ಲಿ ಎನೆ ಎಂಬ ಶಬ್ದವು ಉತ್ಪ್ರೇಕ್ಷಾವಾಚಕವಾಗಿದೆ. ಇದು ವಸ್ತೂತ್ಪ್ರೇಕ್ಷೆ.

ರಮಣೀರತ್ನಮನಾಗಳು
ಮೆವೆಯಿಕ್ಕದೆ ನೋಳ್ಪ ಬಯಕೆಯಿಂ ಪಡೆದರೊತಾ।
ಮೆವೆಯಿಕ್ಕದ ಕಣ್ಗಳನೆನ
ಲೆಮೆಯಿಕ್ಕದೆ ನೋಡುತಿರ್ದುದ ಬಲಾನೀಕಂ॥

ಇಲ್ಲಿ ರಮಣೀ ರತ್ನವನ್ನು ಎವೆಯಿಕ್ಕದೆ ನೋಡುವ ಬಯಕೆಯಿಂದ ಎವೆಯಿಕ್ಕದ ಕಣ್ಣುಗಳನ್ನು ಪಡೆದರೋ ಎಂಬಂತೆ ಸ್ತ್ರೀಯರ ಸಮೂಹವು ಎವೆಯಿಕ್ಕದ ಕಣ್ಣುಗಳಿಂದ ನೋಡುತ್ತಿದ್ದರು ಎನ್ನಲಾಗಿದೆ. ಇಲ್ಲಿ ಎನಲ್ ಎಂಬ ಪದವು ಉತ್ಪ್ರೇಕ್ಷಾವಾಚಕವಾಗಿದೆ. ಇದು ಹೇತೂತ್ಪ್ರೇಕ್ಷೆ.

ಕೂಡಿ ಮಣಿಭೂಷಣ ಧ್ವನಿ
ಗಾಡುವ ಸೋಗೆಗಳ ಪರೆದ ಪೀಲಿಯ ಕಣ್ಣಿಂ।
ಮಾಡಮ ಕನ್ಯಕೆಯಂ ನಡೆ
ನೋಡಲ್ ಕಣ್ದೆರೆದುದೆಂಬಿನಂ ಸೊಗಯಿಸುಗುಂ॥

ಇಲ್ಲಿ ಮಣಿಭೂಷಣ ಧ್ವನಿಗಳನ್ನು ಕೇಳಿ ಕುಣಿದಾಡುವ ನವಿಲುಗಳ ಹಿರಿದ ಹೀಲಿಯ ಕಣ್ಣುಗಳು ಕನ್ಯೆಯನ್ನು ನೋಡಲು ಮನೆಯ ಮಾಡು ಕಣ್ದೆರೆದುದೋ ಎಂಬಂತೆ ಸೊಗಸಾಗಿತ್ತು ಎನ್ನಲಾಗಿದೆ. ಇಲ್ಲಿ ಎಂಬಿನಂ ಎಂಬುದು ಉತ್ಪ್ರೇಕ್ಷಾವಾಚಕ.

ಚಂಡಪರಾಕ್ರಮರ್ ದನುಜನಾಯಕರು ರಣರಂಗದಿಂ ಪ್ರಭಾ
ಮಂಡಲ ಮುಖ್ಯನಾಯಕರೊಳೊರ್ವನೋರ್ವರಿದಿರ್ಚುವಂದಮಂ।
ಕಂಡು ಕೃಪಾಳು ಮಾಣಿಸುವೆನಿಂದಿನ ಯುದ್ಧಮನೆಂಬ ಮಾಳ್ಕೆಯಿಂ
ಚಂಡಮರೀಚಿ ಪಶ್ಚಿಮಪಯೋನಿಧಿಯೊಳೊಯ್ಯನೆ ಮೆಯ್ಯನಿಕ್ಕಿದಂ॥

ಮಹಾಪರಾಕ್ರಮಿಗಳಾದ ದನುಜನಾಯಕರು ಮತ್ತು ರಣಾಸಕ್ತರಾದ ಪ್ರಭಾ ಮಂಡಲನೇ ಮೊದಲಾದ ಮುಖ್ಯ ನಾಯಕರು ಒಬ್ಬರೊಬ್ಬರೊಡನೆ ಹೋರಾಡುತ್ತಿರುವ ಪರಿಯನ್ನು ಕಂಡು ಕೃಪಾಳುವಾದ ಸೂರ್ಯನು, ಇಂದಿನ ಯುದ್ಧವನ್ನು ನಿಲ್ಲಿಸುತ್ತೇನೆಂದು ತಿಳಿದೋ ಎಂಬಂತೆ ಪಶ್ಚಿಮ ಸಮುದ್ರವನ್ನಿಳಿದನು – ಎಂದು ಹೇಳಿದೆ. ಇಲ್ಲಿ ಮಾಳ್ಕೆಯಿಂ ಎಂಬುದು ಉತ್ಪ್ರೇಕ್ಷಾ ವಾಚಕ.

ಇವುಗಳಲ್ಲಿ 'ಅಂತೆ' 'ಅಂತೆವೋಲ್' 'ವೊಲು' 'ಮಾಳ್ಕೆ' ಮುಂತಾದ ಪದಗಳನ್ನು ಉಪಮೆಯಲ್ಲಿಯೂ ಕಾಣಬಹುದು. ಸಂಸ್ಕೃತದಲ್ಲಿಯೂ 'ಇವ' ಎಂಬ ಪದವು ಉಪಮಾವಾಚಕವಾಗಿಯೂ ಬಳಕೆಗೊಳ್ಳುತ್ತದೆ. ಹಾಗಾಗಿ ಇಂಥ ಪದಗಳ ಬಳಕೆಯಿರುವಾಗ

ಅಲಂಕಾರವಾವುದೆಂದು ತೀರ್ಮಾನಿಸುವುದು ಗೊಂದಲಕರವಾಗುತ್ತದೆ. ಇಂಥ ಸಮಯದಲ್ಲಿ ಆಯಾ ಅಲಂಕಾರಗಳ ಮುಖ್ಯವಾದ ತತ್ತ್ವವನ್ನು ಮನಸ್ಸಿಗೆ ತಂದುಕೊಳ್ಳಬೇಕಾಗುತ್ತದೆ. ಉಪಮೆಯ ಸ್ವಾರಸ್ಯವಿರುವುದು ಎರಡು ವಸ್ತುಗಳ ಸುಂದರ ಸಾದೃಶ್ಯದತ್ತ ಗಮನ ಸೆಳೆಯುವುದರಲ್ಲಿ. ಉತ್ಪ್ರೇಕ್ಷೆಯ ಸ್ವಾರಸ್ಯವಿರುವುದು ಕವಿಕಲ್ಪನೆ ಅರ್ಥಾತ್ ಸಂಭಾವನೆಯಲ್ಲಿ. ಅದನ್ನು ಗಮನಿಸಿ ತೀರ್ಮಾನಿಸಬೇಕಾಗುತ್ತದೆ. ಇನ್ನೊಂದು ಸಾಮಾನ್ಯವಾದ ಸಂಗತಿಯೆಂದರೆ ಉಪಮಾನವು ಲೋಕಪ್ರಸಿದ್ಧವಾಗಿದ್ದರೆ, ಉಪಮೆ ಕವಿಕಲ್ಪಿತವಾಗಿದ್ದರೆ ಉತ್ಪ್ರೇಕ್ಷೆ. ಉದಾ:– " ಅವಳ ಮುಖವು ಚಂದ್ರನಂತಿದೆ ". ಎಂದಾಗ ಉಪಮೆ. ಅವಳ ಮುಖವು ಮತ್ತೊಬ್ಬ ಚಂದ್ರನಂತಿದೆ ಎಂದಾಗ ಉತ್ಪ್ರೇಕ್ಷೆ. ಯಾಕೆಂದರೆ ಈ ಮತ್ತೊಬ್ಬ ಚಂದ್ರ ಲೋಕಪ್ರಸಿದ್ಧನಲ್ಲ. ಕೇವಲ ಕವಿಯ ಕಲ್ಪನೆಯಲ್ಲಿ ಅವನ ಅಸ್ತಿತ್ವ. ಹಾಗಿದ್ದರೂ ಕಲ್ಪಿತೋಪಮೆಯನ್ನು ಒಪ್ಪಿಕೊಂಡಾಗ ಗೊಂದಲವು ತಪ್ಪುವುದಿಲ್ಲ.

ಉದಾ:–

**ಸ್ತನಾಭೋಗೇ ಪತನ್ ಭಾತಿ ಕಪೋಲಾತ್ಕುಟಿಲೋಽಲಕಃ ।**
**ಶಶಾಂಕ ಬಿಂಬತೋ ಮೇರೌಲಂಬಮಾನ ಇವೋರಗಃ ॥**

ಕಪೋಲದ ಮೇಲಿಂದ ಹಾಯ್ದು ವಿಸ್ತಾರವಾದ ಸ್ತನಗಳ ಮೇಲೆ ಬೀಳುತ್ತಿರುವ ಅವಳ ಮುಂಗುರುಳು ಚಂದ್ರಬಿಂಬದಿಂದ ಮೇರು ಪರ್ವತದ ಮೇಲೆ ತೂಗಾಡುವ ಸರ್ಪದಂತೆ ಭಾಸವಾಗುತ್ತದೆ. ಇಲ್ಲಿ ಸಾದೃಶ್ಯವೇ ಚಮತ್ಕಾರಿಯಾದುದೆಂದು ಜಗನ್ನಾಥ ಅಭಿಪ್ರಾಯ–ಪಡುತ್ತಾನೆ. ಶಶಾಂಕ ಬಿಂಬದಿಂದ ಮೇರು ಪರ್ವತದ ಮೇಲೆ ತೂಗಾಡುವ ಸರ್ಪದ ಕಲ್ಪನೆಯೇ ಅದ್ಭುತವೆಂದು ಹೇಳಲೂ ಸಾಧ್ಯ. ಆಗ ಅದು ಉತ್ಪ್ರೇಕ್ಷೆಯಾಗುತ್ತದೆ. ಇಂಥಲ್ಲಿ ಸಹೃದಯನ ವಿವೇಚನೆಗೇ ಪ್ರಾಶಸ್ತ್ಯವೆಂಬುದನ್ನು ಒಪ್ಪಬೇಕಾಗುತ್ತದೆ.

**ಅನ್ಯ ಉದಾಹರಣೆಗಳು:**

**ಉಡುಪತಿ ಪತಿ ಪಿಂತನೆ ಬಂ**
**ದಡಸಿ ಮುಸುಂಕಿರ್ದ ತಿಮಿರ ನೀಳಾಂಬರಮಂ ।**
**ಪಿಡಿಯೆ ಭಯಮುತ್ತವೊಲ್ ಬೆ**
**ಳ್ಪಡರ್ದುದು ವದನಕ್ಕೆ ಪೂರ್ವ ದಿಗ್ಬಂಧಕಿಯಾ ॥**

— ಲೀಲಾ.೧–೩೦.

**ಪ್ರತಿಕೂಲಾನಿಲನಿಂ ಪತಾಕೆ ಮುಗುಳೆಂಬಂತಾಗೆ ಕಯ್ಸನ್ನೆಯಿಂ**
**ಶ್ರುತಿಯಂ ಸಾರ್ತರೆ ಪೋಪುದಲ್ತು ನಯಮೆಂಬಂತಾಗಿ ಘಂಟಾರಣ ।**
**ತ್ಕೃತಿ ಸಾರ್ತಂದುದು ಪುಣ್ಯದೇವತೆಯ ಕಣ್ಣೀರೆಂಬಿನಂ ಮೇಘ ಸಂ**
**ಹತಿಯಿಂದಲ್ಲುಗೆ ಮುತ್ತು ಪುಷ್ಪಕ ವಿಮಾನಂ ದಂಡಕಾರಣ್ಯಮಂ ॥**

— ಪಂ.ರಾ.ಸಂ.೪–೪೨.

ಸ್ತನದ ನಿತಂಬದ ಬಿಣ್ಪಂ
ವನಜಭವಂ ತೂಗಿ ನೋಡಿ ನಡುವಂ ಪಿಡಿದಾ।
ತನ ಬೆರಳ ಪಜ್ಜೆ ಪತ್ತಿದು
ವೆನೆ ವಳಿಗಳ್ ಕಣ್ಗೆವಂದುವಾ ಕೋಮಳೆಯಾ ॥

— ಲೀಲಾ. ೩–೨೧.

ಈ ಮಣ್ಣಿನಲ್ಲಿ ಇನ್ನನಿತು ಬಣ್ಣದರಳಿಹವು ನೋಡಲೆಂದು
ಇನ್ನನಿತು ಹಣ್ಣು, ಕಣ್ ಸೆಳೆವ ಹೆಣ್ಣು ಹುದುಗಿಹವು ನೋಡಲೆಂದು,
ಅಪ್ಸರೆಯರಿಳಿದು ಬರುತಿಹರು ನೋಡು ಸುರಿ ಮಳೆಯ ಹನಿಗಳಾಗಿ
ಕಾರ್ಗಾಲ ಬಂತು ಕಾಶ್ಮೀರ ಶ್ರೀಗೆ ಶ್ರೀಗಂಧ ಸ್ನಾನವಾಗಿ.

— ಸಿದ್ಧಯ್ಯ ಪುರಾಣಿಕ.

ಅಲ್ಲೊಂದು ಇಲ್ಲೊಂದು ಬರೆದು ಚೆಲ್ಲಿದ ಚೂರು
ಕಾಗದಗಳೋ ಎನಲು ಆಗಸದಲಿ
ತುಂಬಿ ತೂರಾಡುತಿವೆ ತಿಳಿಮೋಡ ನೂರಾರು ;
ನೀಲದಾಳದ ಮೌನ ಧ್ಯಾನದಲ್ಲಿ.

— ಗೋಪಾಲಕೃಷ್ಣ ಅಡಿಗ.

ಉತ್ಪ್ರೇಕ್ಷಾ ವಾಚಕ ಶಬ್ದಗಳಿಲ್ಲದೆಯೂ ಉತ್ಪ್ರೇಕ್ಷೆಯಿರಬಹುದಾಗಿದೆ. ಅದನ್ನು ಗಮ್ಯೋತ್ಪ್ರೇಕ್ಷೆಯೆಂದು ಕರೆಯುತ್ತಾರೆ.

ಉದಾ :–

ಮಿಂಚಿನ ಬಳ್ಳಿಗೆ ಕಾಮನ ಬಿಲ್ಲಿಗೆ
ಜನಿಸಿದ ಹೂವೋ ಹಕ್ಕಿಯ ನೀನು ?
ಕಿಟ್ಟನ ಕೊಳಲಿನ ಕಣ್ಣೇನು ?

— ಕುವೆಂಪು.

ಇಲ್ಲಿ ಪ್ರಶ್ನೆಯಿರುವಂತೆ ಕಂಡರೂ ಸಂದೇಹಾಲಂಕಾರವೆನ್ನುವಂತಿಲ್ಲ. ಉತ್ಪ್ರೇಕ್ಷೆಯೆಂದು ತಿಳಿಯಬೇಕಾಗುತ್ತದೆ. ಇನ್ನೊಂದು ಉದಾಹರಣೆ :

ಯಾವ ದೇವ ಶಿಲ್ಪಿಯಿಂತು
ನಿನ್ನ ಕೊರೆದನು !
ಯಾವ ಬಣ್ಣಗಾರ ನಿಂತು ರಂಗನೆರೆದನು !
ಒಲವಿನೊಡೆಯ ಸೊಬಗಿನೊಡೆಯ

**ನೊಡನೆ ಕೂಡಿ ಸಂಚು ಮಾಡಿ**
**ನಿನ್ನ ಪಡೆದನೇ?**
**ಮಳೆಯ ಬಿಲ್ಲ ಕರಗಿಸಿಂತು**
**ನಿನ್ನ ಕಡೆದನೇ ?**

— ಕುವೆಂಪು 'ನವಿಲು'.

ಇಂಥಲ್ಲೆಲ್ಲ ಕವಿಯ ಕಲ್ಪನೆಯೇ ಚಮತ್ಕಾರಜನಕವಾದುದರಿಂದ ಉತ್ಪ್ರೇಕ್ಷೆಯೆಂದು ತಿಳಿಯಬೇಕಾಗುತ್ತದೆ. ಆಧುನಿಕ ಕಾವ್ಯಗಳಲ್ಲಿ ಈ ತೆರನ ಉತ್ಪ್ರೇಕ್ಷೆಗಳು ಧಾರಾಳವಾಗಿ ಸಿಗುತ್ತವೆ.

# ೧೦. ಅತಿಶಯೋಕ್ತಿ.

ಲಕ್ಷಣ:– ಅಧ್ಯವಸಿತವು ಪ್ರಾಧಾನ್ಯವನ್ನು ಹೊಂದಿರುವುದು ಅತಿಶಯೋಕ್ತಿ.

( ಅಧ್ಯವಸಿತಪ್ರಾಧಾನ್ಯೇ ತ್ವತಿಶಯೋಕ್ತಿ: — ರುಯ್ಯಕ. )

ಅತಿಶಯೋಕ್ತಿಯೆಂಬ ಹೆಸರೇ ಸೂಚಿಸುವಂತೆ ಅತಿಶಯವಾದ ಉಕ್ತಿಯೇ ಅತಿಶಯೋಕ್ತಿ ಕುಂತಕನು ಹೇಳುವಂತೆ ಅದು ಎಲ್ಲ ಅಲಂಕಾರಗಳ ಜೀವಿತ . (ಸರ್ವಾಲಂಕಾರ ಜೀವಿತಮ್) ಈ ಅರ್ಥದಲ್ಲಿ ಎಲ್ಲ ಅಲಂಕಾರಗಳಲ್ಲಿಯೂ ಅತಿಶಯೋಕ್ತಿಯ ಛಾಯೆಯಾದರೂ ಇರಬೇಕಾಗುತ್ತದೆ. ಅದಕ್ಕೆ ಸ್ವಭಾವೋಕ್ತಿಯೊಂದನ್ನು ಅಪವಾದವೆಂದು ಹೇಳಬಹುದಷ್ಟೇ ? ಈ ದೃಷ್ಟಿಯಿಂದ ಅಲಂಕಾರಗಳೆಲ್ಲವನ್ನೂ ಸ್ವಭಾವೋಕ್ತಿ ಮತ್ತು ಅತಿಶಯೋಕ್ತಿಗಳೆಂದು ವಿಂಗಡಿಸಬಹುದು. ಕುಂತಕನು ಸ್ವಭಾವೋಕ್ತಿಯನ್ನು ಅಲಂಕಾರವಲ್ಲ; ಅಲಂಕಾರ್ಯವೆಂದು ಹೇಳುತ್ತಾನೆ . ಅವನ ಮತವನ್ನೊಪ್ಪಿದರೆ ಎಲ್ಲ ಅಲಂಕಾರಗಳೂ ಅತಿಶಯೋಕ್ತಿಯಿಂದ ಅನುಪ್ರಾಣಿತವಾಗಿವೆ. ಅದು ಕವಿಯ ಮಂತ್ರದಂಡ . ಅದರ ಬಳಕೆಯಿಂದ ಅತ್ಯಂತ ನಿಕೃಷ್ಟ ವಸ್ತುಗಳೂ ಸುಂದರವಾದ ಆಕಾರವನ್ನು ತಳೆಯುತ್ತವೆ . ಅವನ ಮಾತು ಚಮತ್ಕಾರಿಯೆನಿಸುತ್ತದೆ. ಅತಿಶಯೋಕ್ತಿಯನ್ನು ಒಂದು ಅಲಂಕಾರವಾಗಿ ಪರಿಗಣಿಸುವಾಗ ಈ ಅಂಶಗಳನ್ನು ಹಿನ್ನೆಲೆಯಲ್ಲಿರಿಸಿಕೊಂಡು ಅದರ ವಿಶಾಲವಾದ ವ್ಯಾಪ್ತಿಗೆ ಸೀಮೆಯನ್ನು ಕಲ್ಪಿಸಬೇಕಾಗುತ್ತದೆ. ಇಲ್ಲವಾದರೆ ಅದು ನಮ್ಮ ತೆಕ್ಕೆಗೊಗ್ಗುವುದಿಲ್ಲ . ಅಂದರಿಷ್ಟೇ ಅತಿಶಯೋಕ್ತಿಯು ಅಲಂಕಾರಗಳಲ್ಲಿ ಒಂದೆಂದು ಪರಿಗಣಿಸಲ್ಪಡುವಾಗ ಸಂಕುಚಿತವಾದ ಕ್ಷೇತ್ರವನ್ನು ಮಾತ್ರ ಆವರಿಸಿದೆ .

ಅತಿಶಯೋಕ್ತಿ ಅಲಂಕಾರಕ್ಕೆ ಮೂಲವಾದುದು ಸಾಧ್ಯವಸಾನಿಕಾಲಕ್ಷಣೆ. ಸಾರೋಪಾಲಕ್ಷಣೆಯು ರೂಪಕಾಲಂಕಾರಕ್ಕೆ ಮೂಲವಾದರೆ , ಸಾಧ್ಯವಸಾನಿಕಾಲಕ್ಷಣೆಯು ಅತಿಶಯೋಕ್ತಿಯನ್ನು ಹುಟ್ಟುಹಾಕುತ್ತದೆ. ಸಾರೋಪಾದಲ್ಲಿ ವಿಷಯ ಮತ್ತು ವಿಷಯಿಗಳಲ್ಲಿ ಭೇದವಿದ್ದರೂ ಅಭೇದಾರೋಪವಿರುತ್ತದೆ. ಸಾಧ್ಯವಸಾನಾದಲ್ಲಿರುವುದು ಅಧ್ಯವಸಾಯ ಅಥವಾ ನಿಶ್ಚಯ. ಅತ್ಯಂತ ಸಾದೃಶ್ಯದ ಕಾರಣದಿಂದ ವಿಷಯವನ್ನು ವಿಷಯಿಯು ನುಂಗಿ ಹಾಕಿದರೆ ಅದು ಗೌಣೀಸಾಧ್ಯವಸಾನಾ ಎನಿಸುತ್ತದೆ. ಸಾದೃಶ್ಯೇತರ ಸಂಬಂಧವಿರುವ ಲಕ್ಷಣೆಯಲ್ಲಿಯೂ ವಿಷಯ ನಿಗರಣವಿದೆ . ಮುಖವನ್ನು ನೋಡಿ 'ಆಹಾ ಚಂದ್ರ' ಎಂದು ಉದ್ಗರಿಸುವುದು, ತುಪ್ಪವನ್ನು ಕಂಡು 'ಇದೋ ಆಯುಸ್ಸು' ಎನ್ನುವುದು – ಇವೆಲ್ಲ ವಿಷಯ ನಿಗರಣಕ್ಕೆ ಉದಾಹರಣೆಗಳು . ವಿಷಯ ನಿಗರಣವು ಎರಡು ವಿಧವಾಗಿ ನಡೆಯುತ್ತದೆ . ವಿಷಯವನ್ನು ಪೂರ್ತಿಯಾಗಿ ನುಂಗಿಹಾಕುವುದು ಅಥವಾ ಅದನ್ನು ಗೌಣವಾಗಿಸುವುದು .

**ವಿಷಯಸ್ಯಾನುಪದಾನೇಽಪ್ಯುಪಾದಾನೇಽಪಿ ಸೂರಯ: ।**
**ಅಧ: ಕರಣ ಮಾತ್ರೇಣ ನಿಗೀರ್ಣತ್ವಂ ಪ್ರಚಕ್ಷತೇ ॥**

ವಿಷಯವನ್ನು ಹೇಳಿರಲಿ ಅಥವಾ ಹೇಳದಿರಲಿ ಅದನ್ನು ಗೌಣವಾಗಿಸುವುದನ್ನೇ ನಿಗರಣ ಅಥವಾ ನಿಗೀರ್ಣತ್ವವೆಂದು ವಿದ್ವಾಂಸರು ಹೇಳುತ್ತಾರೆ. ಅಂದರೆ ಉಪಮೇಯವನ್ನು ಹೇಳಲಿ, ಹೇಳದಿರಲಿ, ಅದನ್ನು ಗೌಣವಾಗಿಸಿದರೆ ಅತಿಶಯೋಕ್ತಿಯಾಗುತ್ತದೆ.

ಭಾಮಹ, ದಂಡಿ, ಮೊದಲಾದ ಆಲಂಕಾರಿಕರು ಅತಿಶಯೋಕ್ತಿಯನ್ನು ಹೇಳಿದ್ದಾರಾದರೂ ಅದರ ಸ್ವರೂಪವು ಸ್ಪಷ್ಟವಾಗಿರಲಿಲ್ಲ. ಲೋಕಾತಿಕ್ರಾಂತ ಗೋಚರವಾದ ವರ್ಣನೆಯನ್ನೇ ಅವರು ಅತಿಶಯೋಕ್ತಿಯೆಂದು ಕರೆಯುತ್ತಾರೆ. ದಂಡಿಯೂ ಕೂಡ ಲೋಕನಿಯಮಗಳನ್ನು ಅತಿಕ್ರಮಿಸಿದ ವರ್ಣನೆಯನ್ನು ಅತಿಶಯೋಕ್ತಿಯೆಂದು ಕರೆಯುತ್ತಾನೆ. ಪ್ರಥಮವಾಗಿ ಇದರ ಸೀಮೆಯನ್ನು ನಿರ್ದಿಷ್ಟಗೊಳಿಸುವ ಪ್ರಯತ್ನವು ಉದ್ಭಟನಿಂದಾಯಿತು. ಅವನು ಭೇದದಲ್ಲಿ ಅಭೇದ, ಅಭೇದದಲ್ಲಿ ಭೇದ, ಸಂಭಾವ್ಯಮಾನಾರ್ಥ ನಿಬಂಧನ, ಕಾರ್ಯ– ಕಾರಣಗಳ ಪೌರ್ವಾಪರ್ಯ – ವಿಪರ್ಯಯಗಳೆಂಬ ಪ್ರಕಾರಗಳನ್ನು ಗೊತ್ತುಪಡಿಸಿದ. ಮಮ್ಮಟನು ಮತ್ತಷ್ಟು ಸ್ಪಷ್ಟವಾದ ಸೀಮೆಯನ್ನು ಕಲ್ಪಿಸಿದ. ವಿಷಯ ನಿಗರಣದ ಕಲ್ಪನೆಯನ್ನು ವಿಶದಗೊಳಿಸಿದವನು ಅವನು. ಅವನು ಸಾದೃಶ್ಯಕ್ಕೆ ಮಹತ್ವವನ್ನು ಕೊಟ್ಟ. ಮುಂದಿನ ಆಲಂಕಾರಿಕರು ಕೇವಲ ಅಧ್ಯವಸಾಯವನ್ನು ಅತಿಶಯೋಕ್ತಿಯೆಂದು ಗಣಿಸುತ್ತಾರೆ. ಈ ಅಧ್ಯವಸಾಯಕ್ಕೆ ಸಾಮ್ಯವು ಆಧಾರವಾಗಬೇಕಿಲ್ಲ. ಅಂದರೆ ಉಪಮಾನೋಪಮೇಯ ಭಾವವು ಅನಿವಾರ್ಯವೇನಲ್ಲ ಎಂದು ಸ್ಪಷ್ಟಪಡಿಸುತ್ತಾರೆ.

ಅತಿಶಯೋಕ್ತಿಗೆ ಮೂಲವಾದ ವಿಷಯ ನಿಗರಣವು ಐದು ವಿಧದಲ್ಲಿ ಸಂಭವಿಸುವುದೆಂದು ರುಯ್ಯಕ, ವಿಶ್ವನಾಥ ಮುಂತಾದವರು ಹೇಳುತ್ತಾರೆ. ಅವು (೧) ಭೇದವಿದ್ದರೂ ಅಭೇದವನ್ನು ಹೇಳುವುದು, (೨) ಅಭೇದದಲ್ಲಿ ಭೇದವನ್ನು ಹೇಳುವುದು, (೩) ಸಂಬಂಧವಿದ್ದರೂ ಅಸಂಬಂಧವನ್ನು ಹೇಳುವುದು, (೪) ಅಸಂಬಂಧವಿದ್ದರೂ ಸಂಬಂಧವನ್ನು ಹೇಳುವುದು ಮತ್ತು (೫) ಕಾರ್ಯ–ಕಾರಣಗಳ ಪೌರ್ವಾಪರ್ಯವನ್ನು ವ್ಯತ್ಯಸ್ತಗೊಳಿಸುವುದು. ಅವುಗಳನ್ನೇ ಕ್ರಮವಾಗಿ ರೂಪಕಾತಿಶಯೋಕ್ತಿ, ಭೇದಕಾತಿಶಯೋಕ್ತಿ, ಅಸಂಬಂಧಾತಿಶಯೋಕ್ತಿ, ಸಂಬಂಧಾತಿಶಯೋಕ್ತಿ, ಅತ್ಯಂತಾತಿಶಯೋಕ್ತಿ ಮತ್ತು ಅಕ್ರಮಾತಿಶಯೋಕ್ತಿಗಳೆಂದು ಕರೆಯಲಾಗಿದೆ. ಈ ಆರೂ ವಿಭಾಗಗಳನ್ನೂ ಗಮನಿಸೋಣ.

## ೧) ರೂಪಕಾತಿಶಯೋಕ್ತಿ: –

ಉಪಮಾನೋಪಮೇಯಗಳಲ್ಲಿ ಉಪಮೇಯವನ್ನು ಹೇಳದೆ ಕೇವಲ ಉಪಮಾನವನ್ನು ವರ್ಣಿಸಿ ಅವುಗಳ ಅಭೇದವನ್ನು ನಿರೂಪಿಸಿದ್ದರೆ ಅದು ರೂಪಕಾತಿಶಯೋಕ್ತಿ. (**ರೂಪಕಾತಿಶಯೋಕ್ತಿಃ ಸ್ಯಾತ್ ನಿಗೀರ್ಯಾಧ್ಯವಸಾನತಃ**) ಎರಡು ವಸ್ತುಗಳಿಗೆ ನಿಜವಾಗಿ ಭೇದವಿರುವಾಗಲೂ ಅಭೇದದ ಆರೋಪವು ರೂಪಕದ ರೀತಿ. ರೂಪಕದಲ್ಲಿ ಉಪಮೇಯವು ಶಬ್ದೋಪಾತ್ತವಾಗಿರುತ್ತದೆ. ಆದರೆ ಇಲ್ಲಿ ಅದು ಗಮ್ಯವಾಗಿರುತ್ತದೆ. ಅಂದರೆ ಉಪಮಾನ ವಸ್ತುಗಳಿಂದ ಉಪಮೇಯವನ್ನು ಊಹಿಸಿಕೊಳ್ಳಬೇಕು. ಅದನ್ನೇ ವಿಷಯ ನಿಗರಣವೆನ್ನಲಾಗಿದೆ. ಉಪಮೇಯವನ್ನು ಮರೆಸಿ ಅದನ್ನೇ ಉಪಮಾನವೆಂದು ನಿರೂಪಿಸಲಾಗುತ್ತದೆ. ಇದರ ಉದ್ದೇಶ ಅವುಗಳ ಅಭೇದದ ಅಧ್ಯವಸಾಯ. ಅತ್ಯಂತ ಸಾದೃಶ್ಯವು ನಿಮಿತ್ತ.

ಉದಾ :-

ತಳಿರೊಳ್ ತಾರಗೆ ಮೂಡಿದಂದು ತರದಿಂ ಪೊಂಬಾಳೆಗಿಂಬಾದಕೋ
ಮಳಭಾವಂ ಪೊರೆದಂದು ಮಾನೆತಲೆ ಸುಣ್ಪಂ ಪೆಂಪನಾಳ್ದಂದು ಪೊಂ।
ಬೆಳಗಂ ಕಂಬುಗಿದಂದು ಕನ್ನಡಿಗೆ ಕಣ್ಬಂದಂದು ಬಾಲೇಂದು ಪಿಂ
ಡಲಿದಾಳ್ವಂದಡಿಯಿಂದ ಮಾಮುಡಿವರಂ ಬಣ್ಣಿಪ್ಪುದಾ ಕಾಂತೆಯಂ ॥

ತಳಿರಿನಲ್ಲಿ ತಾರೆಗಳು ಮೂಡಿದರೆ, ಹೊಂಬಾಳೆಗೆ ಕೋಮಲತೆ ಸೇರಿದರೆ, ಆನೆಯ ಕುಂಭಸ್ಥಳಕ್ಕೆ ನುಣ್ಪು ಪೆಂಪುಗಳು ಸೇರಿದರೆ, ಶಂಖಕ್ಕೆ ಹೊಂಬೆಳಗು ಬಂದರೆ, ಕನ್ನಡಿಗೆ ಕಣ್ಣು ಮೂಡಿದರೆ, ಎಳೆಯ ಚಂದ್ರನನ್ನು ದುಂಬಿಗಳ ಹಿಂಡು ಸುತ್ತಿಕೊಂಡಿದ್ದರೆ ಆ ಕಾಂತೆಯನ್ನು ಅಡಿಯಿಂದ ಮುಡಿಯ ವರೆಗೆ ಬಣ್ಣಿಸಲು ಸಾಧ್ಯ – ಎಂದು ಕವಿಯ ಅಭಿಪ್ರಾಯ . ಇಲ್ಲಿ ಹೇಳಿರುವವು ಕೇವಲ ಉಪಮಾನಗಳು . – ಅವಳ ಕಾಲು ಮತ್ತು ತಳಿರುಗಳಲ್ಲಿ ಭೇದವಿಲ್ಲ; ಉಗುರು ಮತ್ತು ತಾರೆಗಳಲ್ಲಿ ಭೇದವಿಲ್ಲ . ಹೀಗೆ ತೊಡೆ , ಸ್ತನ , ಕುತ್ತಿಗೆ , ಕೆನ್ನೆ, ಹಣೆ, ಮುಂಗುರುಳು ಮುಂತಾದ ಉಪಮೇಯಗಳನ್ನು ನಾವು ಊಹಿಸಿಕೊಳ್ಳಬೇಕು. ಇದಕ್ಕೆ ಉಪಮಾನ–ಉಪಮೇಯಗಳಲ್ಲಿರುವ ಅಭೇದ ಕಾರಣ. ಉಪಮಾನವು ಉಪಮೇಯವನ್ನು ನುಂಗಿಹಾಕಿರುವುದಕ್ಕೆ ರೂಪಕಾತಿಶಯೋಕ್ತಿಯೆಂದು ಹೆಸರು .

## ೨) ಭೇದಕಾತಿಶಯೋಕ್ತಿ :-

ಎರಡು ವಸ್ತುಗಳಲ್ಲಿ ನಿಜವಾಗಿ ಭೇದವಿಲ್ಲದ್ದಿದ್ದರೂ ಭೇದವಿದೆಯೆಂದು ವರ್ಣಿಸುವುದು ಭೇದಕಾತಿಶಯೋಕ್ತಿ ( ಅಂದರೆ ವರ್ಣಿಸಲ್ಪಡುವ ವಸ್ತುವು ಲೋಕಸಾಮಾನ್ಯ ವಸ್ತುವೇ ಆಗಿದ್ದರೂ ವಿಲಕ್ಷಣವಾಗಿದೆಯೆಂದು ವರ್ಣಿಸುವುದು ಇಲ್ಲಿನ ರೀತಿ ) ( **ಭೇದಕಾತಿಶಯೋಕ್ತಿಸ್ತುತಸ್ಯೈವಾನ್ಯತ್ವ ವರ್ಣನಮ್** – ಕುವಲಯಾನಂದ )

ಇದು ಪೊಸ ರೀತಿ ನೋಡಿದು ನವೀನಮಲಂಕೃತಿ ನವ್ಯ ಭಾವಮಿಂ
ತಿದು ನವವೃತ್ತಿ ಲೇಸಿದು ರಸಸ್ಥಿತಿ ನೂತ್ನಮಿದಲ್ತೆ ನೂತನಂ।
ಪದರಚನಾವಿಲಾಸಮಿದು ಕಬ್ಬಮಪೂರ್ವಮಿದೆಂದು ಕಬ್ಬಿಗರ್
ಪದೆದೊಲವಿಂದೆ ಕೀರ್ತಿಸೆ ನಿಮಿರ್ಚುವೆನೀ ಸುಭಗ ಪ್ರಬಂಧಮಂ ॥

ಇಲ್ಲಿ ಕಾವ್ಯದಲ್ಲಿರುವ ರೀತಿ , ಅಲಂಕಾರ, ಭಾವ , ವೃತ್ತಿ , ರಸ , ಸ್ಥಿತಿ , ಪದರಚನಾವಿಲಾಸಗಳು, ಲೋಕಪ್ರಸಿದ್ಧವಾದವುಗಳೇ . ಆದರೂ ಅವುಗಳನ್ನು ಕವಿಯು 'ಪೊಸತು' 'ನವೀನ' ಮುಂತಾದ ಶಬ್ದಗಳಿಂದ ಲೋಕವಿಲಕ್ಷಣವಾದುದೆಂಬಂತೆ ಪ್ರತಿಪಾದಿಸಿದ್ದಾನೆ . ಹಾಗಾಗಿ ಇದು ಅಭೇದದಲ್ಲಿ ಭೇದ . ಈ ಪ್ರಭೇದವನ್ನು ಗಮನಿಸಿದರೆ ಇಲ್ಲಿ ಸಾದೃಶ್ಯ ಸಂಬಂಧವು ಮರೆಯಾದುದು ಕಂಡು ಬರುತ್ತದೆ . ಇದು ಪೊಸರೀತಿಯೆಂದಾಗ ಉಪಮಾನವಾವುದು? ಉಪಮೇಯವಾವುದು? ಅವೆರಡೂ ಒಂದೇ ಆಗಿವೆಯಲ್ಲವೇ? ಹಾಗಾಗಿ ಅತಿಶಯೋಕ್ತಿಯ ಪ್ರಭೇದಗಳೆಲ್ಲ ಸಾದೃಶ್ಯವನ್ನಾಧರಿಸಿವೆಯೆಂಬುದನ್ನು ಹೇಳುವಂತಿಲ್ಲ. ಆದರೆ

ಅಧ್ಯವಸಾಯವಿರುವುದನ್ನು ಗಮನಿಸಬಹುದು. ಲೋಕಸಾಮಾನ್ಯವನ್ನು ಮರೆಸಿ ಅದನ್ನೇ ಲೋಕವಿಲಕ್ಷಣವೆಂದು ಪ್ರತಿಪಾದಿಸುವಲ್ಲಿ ವಿಷಯ ನಿಗರಣವಿದೆಯೆಂಬುದನ್ನು ಕಾಣಬಹುದು.

## ೩. ಅಸಂಬಂಧಾತಿಶಯೋಕ್ತಿ:-

ನಿಜವಾಗಿ ಒಂದು ವಸ್ತುವಿನೊಡನೆ ಸಂಬಂಧವಿದ್ದರೂ ಸಂಬಂಧವಿಲ್ಲವೆಂದು ನಿರೂಪಿಸಿದರೆ ಅಸಂಬಂಧ. (**ಯೋಗೇऽಪಿ ಅಯೋಗೋ ಅಸಂಬಂಧಾತಿಶಯೋಕ್ತಿಃ**) ಸಂಬಂಧಗಳು ನೂರಾರು. ಅಂತೆಯೇ ಈ ಪ್ರಕಾರದಲ್ಲಿ ಸಾಧ್ಯತೆಗಳೂ ನೂರಾರು.

ಉದಾ :-

**ಉರಮಿಂಬಿಲ್ಲ ಪಯೋಧರದ್ವಯದ ಕೊರ್ಬಿಂಗಾಸ್ಯ ಮಿಂಬಿಲ್ಲ ಭಾ**
**ಸುರನೇತ್ರ ದ್ವಿತಯ ಪ್ರಚಾರತೆಗೆ ಬೆನ್ನಿಂಬಿಲ್ಲ ಧಮ್ಮಿಲ್ಲ ಬಂ ।**
**ಧುರ ಸೀಮಾವಳಯಕ್ಕೆ ನೋಡ ನಡುವಿಂಬಿಲ್ಲ ವೀಬಾಸೆಗೀ**
**ಗಿರಿಜಾ ಯೌವನ ಸಂಪದಕ್ಕೆ ತನುವೆಂತಿಪ್ಪುದೋ ರುದ್ರನಾ ॥**

ಇಲ್ಲಿ ಸ್ತನದ್ವಯಗಳ ಕೊಬ್ಬಿಗೆ ಉರದಲ್ಲಿ ಎಡೆಯಿಲ್ಲ; ಬೆಳಗುವ ಕಂಗಳ ವಿಸ್ತಾರಕ್ಕೆ ಮುಖದಲ್ಲಿ ಎಡೆಯಿಲ್ಲ; ಸುಂದರವಾದ ಹೆರಳಿನ ವಿಸ್ತಾರಕ್ಕೆ ಬೆನ್ನಿಂಬಿಲ್ಲ; ಬಾಸೆಗೆ ನಡುವಿಂಬಿಲ್ಲ ಇಂಥ ಗಿರಿಜೆಯ ಯೌವನ ಸಂಪದಕ್ಕೆ ರುದ್ರನ ತನುವು ಎಂತಿರುವುದೋ – ಎಂದು ಕವಿಯು ಹೇಳುತ್ತಾನೆ. ಎದೆಯಲ್ಲಿ ಮುಖದಲ್ಲಿ, ಬೆನ್ನಿನಲ್ಲಿ ನಡುವಿನಲ್ಲಿ ಅವಕಾಶವಿದೆ. ಆದರೂ ಅವಕಾಶವೆಂಬ ಸಂಬಂಧವನ್ನು ನಿರಾಕರಿಸುವುದರ ಮೂಲಕ ಕವಿಯು ವಸ್ತು ವೈಶಾಲ್ಯವನ್ನು ಪ್ರತಿಪಾದಿಸಿದ್ದಾನೆ.

" **ಜಗಮಂ ಮಾಡಿದ ಪದ್ಮಜಂ ಪಡೆದನಿಲ್ಲೀ ಕನ್ಯೆಯಂ** " ( ಪಂ.ಭಾ.) ಜಗತ್ತನ್ನು ಸೃಷ್ಟಿಸಿದ ಬ್ರಹ್ಮನು ಈ ಕನ್ಯೆಯನ್ನು ಸೃಷ್ಟಿಸಲಿಲ್ಲವೆನ್ನುವಲ್ಲಿ ಬ್ರಹ್ಮನಲ್ಲಿ ಕರ್ತೃತ್ವ ಸಂಬಂಧವಿದ್ದರೂ ಅದನ್ನು ನಿರಾಕರಿಸಲಾಗಿದೆ. 'ಕೊಡುವ ದೊರೆ ನೀನಿರುವಾಗ ಕಲ್ಪವೃಕ್ಷದ ಮೇಲೆ ಆದರವಿಲ್ಲ' ಎನ್ನುವಾಗ ಕಲ್ಪವೃಕ್ಷದಲ್ಲಿ ಅದರ ಸಂಬಂಧವಿದ್ದರೂ ಇಲ್ಲವೆನ್ನಲಾಗಿದೆ. ಹೀಗೆ ಸಂಬಂಧ ಕಲ್ಪನೆಯು ತುಂಬಾ ವಿಸ್ತಾರವಾಗಿದ್ದು ಈ ಪ್ರಭೇದದಲ್ಲಿ ಬಹಳಷ್ಟು ಸಾಧ್ಯತೆಗಳಿವೆ. ಅವುಗಳನ್ನು ಗುರುತಿಸಿಕೊಳ್ಳಬಹುದಾಗಿದೆ.

## ೪. ಸಂಬಂಧಾತಿಶಯೋಕ್ತಿ:-

ಒಂದಕ್ಕೊಂದಕ್ಕೆ ಸಂಬಂಧವಿಲ್ಲದಿದ್ದರೂ ಸಂಬಂಧವಿದೆಯೆಂದು ಹೇಳಿದರೆ ಸಂಬಂಧಾತಿಶಯೋಕ್ತಿ. (**ಸಂಬಂಧಾತಿಶಯೋಕ್ತಿಃ ಸ್ಯಾತ್ ಅಯೋಗೇ ಯೋಗಕಲ್ಪನಮ್**) ಹಿಂದಿನ ಪ್ರಭೇದಕ್ಕೆ ವಿರುದ್ಧವಾದುದು ಇದು. ಅಲ್ಲಿ ಇರುವುದನ್ನು ಇಲ್ಲವೆಂದರೆ, ಇಲ್ಲಿ ಇಲ್ಲದುದನ್ನು ಇದೆಯೆಂದು ಪ್ರತಿಪಾದಿಸಲಾಗುತ್ತದೆ.

ಉದಾ :—

**ಸಿರಿತಂದಿಕ್ಕಿದಶೋಕ ವಾಗ್ವನಿತೆಯಿಟ್ಟಾಮ್ರಂ ಶಚಿದೇವಿಯಿ**
**ಟ್ಟಿರ ನೇರಿಲ್ ಮಿಗೆ ರಂಭೆಯಿಟ್ಟ ಕದಳೀ ಷಂಡಂ ಸುರಸ್ತ್ರೀಯರಿ।**
**ಟ್ಟರವಿಂದಾಕರಮುರ್ವಶೀವಧು ಸರಾಗಂ ತಂದ ಪೂಗದ್ರುಮಂ**
**ತರದಿಂದಾರತಿಯಿಟ್ಟ ದಾಡಿಮಕುಲಂ ಸಾರ್ವರ್ತುಕುದ್ಯಾನದೋಳ್ ॥**

ಇದು ಸರ್ವಋತುಕವಾದ ಉದ್ಯಾನದ ವರ್ಣನೆ. ಇಲ್ಲಿ ಲಕ್ಷ್ಮೀ ದೇವಿಯಿಟ್ಟ ಅಶೋಕ, ಸರಸ್ವತಿಯಿಟ್ಟ ಮಾವು , ಶಚಿದೇವಿಯಿಟ್ಟ ನೇರಿಳೆ, ರಂಭೆಯಿಟ್ಟ ಬಾಳೆ , ಸುರಸ್ತ್ರೀಯರಿಟ್ಟ ಕಮಲಗಳು, ಊರ್ವಶಿಯಿಟ್ಟ ಅಡಿಕೆ, ರತಿಯಿಟ್ಟ ದಾಳಿಂಬೆಗಳಿದ್ದವೆಂದು ಕವಿ ಹೇಳುತ್ತಾನೆ. ಅಶೋಕವೇ ಮುಂತಾದ ಮರ ಗಿಡಗಳು ಅಲ್ಲಿರಬಹುದಾದರೂ ಅವುಗಳಿಗೂ ದೇವತಾ ಸ್ತ್ರೀಯರಿಗೂ ಸಂಬಂಧವಿಲ್ಲ. ಇಲ್ಲದ ಸಂಬಂಧವನ್ನು ಇದೆಯೆಂದು ಹೇಳಿರುವುದು ಸಂಬಂಧಾತಿಶಯೋಕ್ತಿ. ಹಿಂದಿನಂತೆ ಇಲ್ಲಿಯೂ ಸಾಧ್ಯತೆಗಳು ಬಹಳ.

## ೫. ಅತ್ಯಂತಾತಿಶಯೋಕ್ತಿ:—

ಕಾರಣಕ್ಕಿಂತ ಮೊದಲು ಕಾರ್ಯವು ಜನಿಸಿತೆಂದರೆ ಅತ್ಯಂತಾತಿಶಯೋಕ್ತಿ. (**ಅತ್ಯಂತಾತಿಶಯೋಕ್ತಿಸ್ತುಪೌರ್ವಾಪರ್ಯವ್ಯತಿಕ್ರಮೇ**) ಸಾಮಾನ್ಯವಾಗಿ ಕಾರಣವು ಮೊದಲು; ಕಾರ್ಯವು ನಂತರ ಸಂಭವಿಸುತ್ತದೆ. ಇದು ಕಾರ್ಯ– ಕಾರಣ ನಿಯಮದ ಕ್ರಮ. ಈ ಕಾಲಕ್ರಮದಲ್ಲಿ ವ್ಯತ್ಯಾಸವಾಯಿತೆಂದರೆ ಅದು ಕಾರ್ಯ– ಕಾರಣ ಪೌರ್ವಾಪರ್ಯ– ವಿಪರ್ಯಯವಾಗುತ್ತದೆ. ಕಾರ್ಯ– ಕಾರಣಗಳ ಕಾಲಕ್ರಮದಲ್ಲಿ ವ್ಯತ್ಯಾಸವನ್ನು ಎರಡು ಬಗೆಯಲ್ಲಿ ಹೇಳಬಹುದು.

(೧) ಕಾರ್ಯವು ಕಾರಣಕ್ಕಿಂತಲೂ ಮೊದಲು ಹುಟ್ಟಿತೆನ್ನುವುದು– ಅಂದರೆ ಕಾರ್ಯವು ಮೊದಲು, ಕಾರಣವು ನಂತರ ಎನ್ನುವುದಾಗಿ ನಿರೂಪಿಸುವುದು. ಇದು ಅತ್ಯಂತಾತಿಶಯೋಕ್ತಿಯೆನಿಸುತ್ತದೆ.

(೨) ಕಾರ್ಯ– ಕಾರಣಗಳು ಏಕಕಾಲದಲ್ಲಿ ಪ್ರವೃತ್ತವಾದವೆನ್ನಬಹುದು. ಇದನ್ನು ಕುವಲಯಾನಂದಕಾರನು ಅಕ್ರಮಾತಿಶಯೋಕ್ತಿಯೆಂದು ಕರೆಯುತ್ತಾನೆ.

ಉದಾ :—

**ಈತನಾರರ್ಜುನನೋ ಹೋಹೋ**
**ಮಾತು ಮಾಣಲಿ ಮಾಣಲೆಂಬೀ**
**ಮಾತು ಹಿಂಚಿತು ಮುನ್ನ ಮೌನದೊಳಿರ್ದುದಾಸ್ಥಾನ ॥**

ಸಭಾಮಂಟಪಕ್ಕೆ ಅರ್ಜುನನ ಪ್ರವೇಶವಾಗುತ್ತಿದ್ದಂತೆ 'ಮಾತು ಮಾಣಲಿ' ಎಂದು ಹೇಳುವುದು ಹಿಂದಾಯಿತು. ಮೌನವು ಮುಂದಾಯಿತು ಎನ್ನುವ ಅಭಿಪ್ರಾಯವು ಇಲ್ಲಿದೆ. 'ಮಾತು ನಿಲ್ಲಲಿ' ಎಂಬುದು ಕಾರಣವಾದರೆ ಮೌನದಲ್ಲಿರುವುದು ಕಾರ್ಯ. ಇಲ್ಲಿ ಮೊದಲು ಕಾರ್ಯವುಂಟಾಯಿತು. ಅನಂತರ ಕಾರಣವು ಪ್ರವೃತ್ತವಾಯಿತು ಎಂದು ಬಣ್ಣಿಸಲಾಗಿದೆ. ಈ

ರೀತಿಯಲ್ಲಿ ಕಾರ್ಯ–ಕಾರಣಗಳ ಕಾಲಕ್ರಮವನ್ನು ವ್ಯತ್ಯಸ್ತಗೊಳಿಸುವುದು ಕಾರ್ಯದ ಶೀಘ್ರತೆಯನ್ನು ಹೇಳುವುದಕ್ಕಾಗಿ. ಇದು ಅತ್ಯಂತಾತಿಶಯೋಕ್ತಿ.

## ೭. ಅಕ್ರಮಾತಿಶಯೋಕ್ತಿ :–.

ಕಾರ್ಯ–ಕಾರಣಗಳೆರಡೂ ಏಕಕಾಲದಲ್ಲಿ ಪ್ರವರ್ತಿಸಿದವೆಂದರೆ ಅಕ್ರಮಾತಿಶಯೋಕ್ತಿ. **( ಅಕ್ರಮಾತಿಶಯೋಕ್ತಿಃ ಸ್ಯಾತ್ ಸಹತ್ವೇ ಹೇತು ಕಾರ್ಯಯೋಃ )**

ಉದಾ:–

**ತುಡಿಸುವುದೇಕೆ ನಿಲ್ಲ ಪಲವುಂ ಬಳೆಯಂ ಬಳೆಗಾರ ನಿನ್ನ ಕಾ**
**ಲ್ಪಿಡಿದಪೆನಿತ್ತಪೆಂ ನಿನಗೆ ಬೇಡಿತನೆನ್ನಿನಿಯಂಕನಲ್ದುಪೋ ।**
**ದೊಡೆ ಬಳೆಕೈಗಳಿಂದಿಳಿದು ಬೀಳ್ವುವು ಬರ್ಪುದು ಮಾಗಳಂತಕೇ**
**ಳೊಡೆವವು ನನ್ನಿ ನಿನ್ನ ಬಳೆಯಂ ಬಳೆದೊಟ್ಟರನಣ್ಣ ಕಾಣರೇ॥**

— ಲೀಲಾ.೨–೬೦.

ಇಲ್ಲಿ ನಾಯಿಕೆಯು ಬಳೆಗಾರನೊಡನೆ ಬಳೆಗಳನ್ನು ತೊಡಿಸುವುದು ಬೇಡ; ನಿನ್ನ ಕಾಲ್ಪಿಡಿಯುತ್ತೇನೆ; ಬೇಡಿದ್ದನ್ನು ಕೊಡುತ್ತೇನೆ ಎಂದು ಕಾರಣವನ್ನು ಹೇಳುತ್ತಾಳೆ. ನಲ್ಲನು ಕೋಪಿಸಿಕೊಂಡು ಹೋದೊಡನೆಯೇ ಬಳೆಗಳು ಕೈಯಿಂದ ಇಳಿದು ಬಿದ್ದು ಒಡೆಯುತ್ತವೆ. ಬಂದೊಡನೇ ಮೈಯುಬ್ಬಿ ಒಡೆಯುತ್ತವೆ – ಎನ್ನುತ್ತಾಳೆ. ಇನಿಯನು ಮುನಿದು ಹೊರಟು ಹೋಗಿ ಎಷ್ಟೋ ಕಾಲವಾದ ಮೇಲೆ ಕೃಶತೆ ಬರುತ್ತದೆ. ಆಗ ಬಳೆಯು ಕೈಯಿಂದ ಜಾರಿ ಬಿದ್ದೀತು. ಅಂತೆಯೇ ಮರಳಿ ಬಂದ ಕಾಲಾಂತರದಲ್ಲಿ ಪುಷ್ಟಿಯುಂಟಾಗಿ ಬಳೆಯೊಡೆದೀತು. ಇದು ಕಾಲಕ್ರಮವಾಗಿದ್ದರೂ ಕಾರ್ಯ –ಕಾರಣಗಳು ಏಕಕಾಲದಲ್ಲಿ ಸಂಭವಿಸಿದವೆಂದು ಕವಿಯು ವರ್ಣಿಸಿದ್ದಾನೆ. ಇದು ಅಕ್ರಮವಾದುದರಿಂದ ಅಕ್ರಮಾತಿಶಯೋಕ್ತಿಯೆಂದು ಹೇಳಲಾಗಿದೆ.

ಇವುಗಳಲ್ಲದೆ ಕುವಲಯಾನಂದಕಾರನು ಮತ್ತೆರಡು ಭೇದಗಳನ್ನು ಹೇಳಿದ್ದಾನೆ. ಕಾರಣವನ್ನು ಪ್ರಸ್ತಾಪಿಸಿದೊಡನೆಯೆ ಕಾರ್ಯವು ಸಂಭವಿಸಿತೆಂದರೆ **ಚಪಲಾತಿಶಯೋಕ್ತಿ** ಉದಾ:– 'ಪತಿಯು ಹೋಗುವೆನು' ಎಂದೊಡನೆಯೆ ಉಂಗುರವು ಬಳೆಯಾಯಿತು. ಇಲ್ಲಿ ಕಾರಣವು ನಡೆದಿಲ್ಲ. ಕೇವಲ ಅದರ ಪ್ರಸ್ತಾವವಿದೆ. ಆದರೂ ಕಾರ್ಯವು ಸಂಭವಿಸಿತೆಂದು ಹೇಳಲಾಗಿದೆ. ಕಾರ್ಯ –ಕಾರಣಗಳ ಪೌರ್ವಾಪರ್ಯ–ವಿಪರ್ಯವನ್ನೇ ಇದೂ ಆಶ್ರಯಿಸಿದೆ. ಅಕ್ರಮಾತಿಶಯೋಕ್ತಿಯಲ್ಲಿ ಕಾರಣದ ಜೊತೆಗೇ ಕಾರ್ಯವು ಸಂಭವಿಸಿತೆಂದರೆ ಇಲ್ಲಿ ಕಾರಣವು ಘಟಿಸಿಲ್ಲ, ತುಂಬ ಸೂಕ್ಷ್ಮಭೇದವನ್ನು ಆಧರಿಸಿದ ಪ್ರಭೇದ ಇದು. ಅತ್ಯಂತಾತಿಶಯೋಕ್ತಿಯಲ್ಲಿಯೇ ಇದನ್ನು ಸೇರಿಸಬಹುದು.

ದೀಕ್ಷಿತನು ಹೇಳುವ ಇನ್ನೊಂದು ಪ್ರಭೇದ ಅಪಹ್ನವಾತಿಶಯೋಕ್ತಿ. ಅಪಹ್ನವ ಅಥವಾ ನಿಷೇಧದಿಂದ ಕೂಡಿದ್ದರೆ ಅಪಹ್ನವಾತಿಶಯೋಕ್ತಿಯೆನ್ನುತ್ತಾನೆ. ಉಪಮಾನದ ಗುಣವನ್ನು ನಿರಾಕರಿಸಿ ಉಪಮೇಯದಲ್ಲಿರುವುದೇ ನಿಜವಾದ ಗುಣವೆಂದು ಸ್ಥಾಪಿಸುವುದು ಇಲ್ಲಿನ ವಿಶೇಷ.

ಉದಾ :– ''ರಾಜನೇ ನಿನ್ನ ಮೃದು ವಾಕ್ಯಗಳಲ್ಲಿ ಅಮೃತವಿದೆ ; ಚಂದ್ರನಲ್ಲಿ ಅಮೃತವಿದೆಯೆಂಬುದು ಭ್ರಾಂತಿ''. ಇಲ್ಲಿ ನಿಜವಾದ ಅಮೃತವನ್ನು ನಿರಾಕರಿಸಿ, ರಾಜನ ಮಾತಿನಲ್ಲಿರುವ ಮಾರ್ದವಾದಿಗಳನ್ನೇ ಅಮೃತವೆಂದು ಸ್ಥಾಪಿಸಲಾಗಿದೆ. ಅಪಹ್ನುತಿಯ ಅಂಶ ಇಲ್ಲಿರುವುದರಿಂದ ಇದನ್ನು ಅಪಹ್ನವಾತಿಶಯೋಕ್ತಿಯೆಂದು ಅವನು ಕರೆಯುತ್ತಾನೆ. ಆದರೆ ಜಗನ್ನಾಥನು ಈ ಭೇದವನ್ನು ನಿರಾಕರಿಸುತ್ತಾನೆ.

ಈ ಎಲ್ಲ ಭೇದಗಳನ್ನು ಗಮನಿಸಿದ ಮೇಲೆ 'ಚಂದ್ರಿಕಾ'ಕಾರನು 'ಚಮತ್ಕೃತಿಜನಕ ಆಹಾರ್ಯ ಆರೋಪ ನಿಶ್ಚಯ ವಿಷಯತ್ವ' ವೇ ಅತಿಶಯೋಕ್ತಿಯ ಲಕ್ಷಣವೆನ್ನುತ್ತಾನೆ. ಚಮತ್ಕಾರವನ್ನುಂಟು ಮಾಡುವ ಅಂಶ ಎಲ್ಲ ಭೇದಗಳಲ್ಲಿಯೂ ಇದೆ. ಅಂತೆಯೇ ಅತಿಶಯೋಕ್ತಿಯ ಅಂಶವು ಎಲ್ಲ ಅಲಂಕಾರಗಳಲ್ಲಿಯೂ ಇದೆ. ಇತರ ಅಲಂಕಾರಗಳಲ್ಲಿ ಚಮತ್ಕಾರಕ್ಕೆ ಕಾರಣವಾದುದು ಬೇರೆಯಾದುದರಿಂದ ಅಲ್ಲಿ ಅತಿಶಯೋಕ್ತಿ ಅಲಂಕಾರವಿದೆ ಎನ್ನುವಂತಿಲ್ಲ. ಎಲ್ಲ ಆಲಂಕಾರಿಕರೂ ಇದನ್ನು ಒಪ್ಪಿದ್ದಾರೆ.

**ಅನ್ಯ ಉದಾಹರಣೆಗಳು:**

ಧರೆಯೊಳು ಹರಿಶ್ಚಂದ್ರ ಭೂಭುಜಂತನ್ನಸಾ
ರ್ದರ ಬೇಡಿದರ ಬಯಸಿದರ ಸೋಂಕಿದರ ಬೆರಸಿ
ದರನು ತನ್ನಂತೆ ಮಾಳ್ಪುನ್ನತಿಕೆಯಂ ಕಂಡು ನಾಚಿ ಸಿಗ್ಗಾಗಿ ಸೆಡೆದು ।
ಮರನಾಯ್ತು ಚಂದನಂ ಸ್ವರ್ಗಸ್ಥಮಾಯ್ತು ಸುರ
ತರುಮೂಗುವಟ್ಟುದಮರರ ಧೇನು ಕಲ್ಲಾಯ್ತು
ಪರುಷ ತಟ್ಟನೆ ಕರಗಿತನೆ ಸಿದ್ಧರಸವಂದು ಮೊದಲಾಗಿ ಮೂಜಗದೊಳು ॥

— ಹರಿ. ೧–೪೨.

ವರುಣಂ ವಾರಾಸಿಯಂ ಪೊಕ್ಕಡಗಿದನಭವಂ ಗಂಗೆಯಂ ಪೊತ್ತು ನಿಂದಂ
ಹರಿದುಗ್ಧಾಬ್ಧಿಯಂ ಭೋಂಕನೆ ವಸಯಿಸಿದಂ ಮಿಕ್ಕಶಕ್ರಾದ್ಯರೆಲ್ಲಂ।
ಕೊರಗುತ್ತಂ ಗೊಂಟು ಗೊಂಟಂಪುಗುತಿರೆ ಭುವನಂ ತೀವ್ರತಪ್ತಾತ್ಮಮಾಗು
ತ್ತಿರೆ ಪರ್ವಿದತ್ತು ರ್ವಿದಾವಾನಲಪಟು ಭಟರಾಟೋಪದಿಂ ಗ್ರೀಷ್ಮ ತಾಪಂ॥

— ಕುಸುಮಾ. ೧–೪೨

ನಲ್ಲನು ಪೋದಪನೆನಲಾ
ನಲ್ಲಳ ಕೈ ಬಳೆಗಳೆಲ್ಲ ಘಲಘಲನುದಿರ್ದವು ।
ಯಿಲ್ಲಿಲ್ಲ ನಿಂದನೆನಲಾ
ಗಲ್ಲಿಯೇ ಕೈಬಳೆಗಳೆಲ್ಲ ಛಿಳಿಛಿಳಿಲೆಂದವು ॥

— ಕಾವ್ಯಸಾರಂ

ಅವ್ವನ ಸೀರೆ ಮಡಿಚಲಾರೆ
ಅಪ್ಪನ ರೊಕ್ಕ ಎಣಿಸಲಾರೆ
ಎಂಥ ಪ್ರಕಾಶಾ
ತುಂಬಿತಾಕಾಶಾ.

— ದ. ರಾ. ಬೇಂದ್ರೆ.

**ಟಿಪ್ಪಣಿ :**— ಉಪಮೆಯನ್ನು ವಿವೇಚಿಸುತ್ತ, ಡಾ|| ಜಿ. ಎಸ್. ಶಿವರುದ್ರಪ್ಪನವರು, ಲುಪ್ತೋಪಮೆಯನ್ನು ವಿವೇಚಿಸುತ್ತ ಹೇಳುತ್ತಾರೆ. — " ಹೀಗೆ ಪೂರ್ಣೋಪಮೆಯು ತನ್ನ ಒಂದೊಂದು ಅಂಗಗಳನ್ನು 'ಲುಪ್ತ' ಮಾಡಿಕೊಳ್ಳುತ್ತಾ ರೂಪಕ ಮಾರ್ಗದಲ್ಲಿ ಪ್ರಯಾಣ ಹೊರಟಿದೆ. ಅಷ್ಟೇ ಅಲ್ಲ, ಆರನೆಯ ನಿದರ್ಶನಕ್ಕೆ ಬರುವ ವೇಳೆಗೆ ಅಭಿವ್ಯಕ್ತಿಯು ರೂಪಕದಿಂದಲೂ ಮುಂದುವರಿದ ಪ್ರತೀಕವಾಗಿ ಪರಿಣಮಿಸಿದೆ. 'ಅನಿಮಿಷಚಾಪ' ಅಥವಾ 'ಕಾಮನಬಿಲ್ಲು' ಎಂಬ ಒಂದು ಪದ ಶತಶತಮಾನಗಳ ಜನಮನದಲ್ಲಿ ಮನೋಹರ ಹಾಗೂ ನಶ್ವರ ಎಂಬ ಅರ್ಥವನ್ನು ಪ್ರಚೋದಿಸುವ ಸಾಮರ್ಥ್ಯವನ್ನು ಪಡೆದುಕೊಂಡು ಒಂದು ಭಾವಕೋಶವನ್ನೇ ನಿರ್ಮಿಸಿದೆ. (ಕಾವ್ಯಾರ್ಥಚಿಂತನ, ಪುಟ ೯೭)

ವಾಸ್ತವವಾಗಿ ಅತಿಶಯೋಕ್ತಿಯ ಮೂಲತತ್ತ್ವವೇ ಇದು. ಅಧ್ಯವಸಿತವು ಪ್ರಾಧಾನ್ಯವನ್ನು ಹೊಂದಿದಾಗ ಅದು ಒಂದು ಪ್ರತೀಕವಾಗಿ ಮಾರ್ಪಡುತ್ತದೆ. ಉಪಮೆಯ ಅಂಗಗಳನ್ನು ಲುಪ್ತಗೊಳಿಸುತ್ತ ಅತಿಶಯೋಕ್ತಿಯ ಹಂತವನ್ನು ತಲುಪಿದಾಗ ಸಾದೃಶ್ಯ ಸೌಂದರ್ಯವೇ ಪ್ರಧಾನವಾಗಿರುತ್ತದೆ. ಆದರೆ ಅಧ್ಯವಸಿತ ಪ್ರಾಧಾನ್ಯ ದೃಷ್ಟಿಯಿಂದಲೇ ಹೊರಟಾಗ ಪ್ರತೀಕಗಳು ಹುಟ್ಟಿಕೊಳ್ಳುತ್ತವೆ. ಅಲ್ಲಿ ಪರ್ಯಾಲೋಚನೆಯಿಂದ ಸಾದೃಶ್ಯ ಜ್ಞಾನವಾಗುತ್ತದೆಯೇ ಹೊರತು ಮೊದಲ ಹಂತದಲ್ಲಿ ಅಲ್ಲ.

ಉದಾ :—

ಕಲ್ಲಾಗು, ಕಲ್ಲಾಗು, ಬಾಳಬಿರುಗಾಳಿಯಲಿ
ಅಲ್ಲಾಡದೆಯ ನಿಲ್ಲು, ನಿಲ್ಲು ಜೀವ !
ಹುಲ್ಲು ಗಿಡಗಳಿಗಿಲ್ಲ ಇಲ್ಲಿ ತಾಣ !
ಬಳ್ಳಿ ಹೂಗಳ ಬಾಳಿಗಿಲ್ಲ ಮಾನ !
ಕಲ್ಲಿಗೊಂದೇ ಇಲ್ಲಿ ಸ್ಥಾನಮಾನ !

— ಗೋಪಾಲಕೃಷ್ಣ ಅಡಿಗ, 'ಕಲ್ಲಾಗು ! ಕಲ್ಲಾಗು !'

ಇಲ್ಲಿ ಕಲ್ಲಿನಂತೆ ಕಾಠಿಣ್ಯವನ್ನು ಹೊಂದಬೇಕೆಂಬುದನ್ನು ಹೇಳುವುದರ ಬದಲು 'ಕಲ್ಲಾಗು' ಎಂಬ ಮಾತಿದೆ. ಕಲ್ಲು ಕಾಠಿಣ್ಯಕ್ಕೆ ಪ್ರತೀಕವಾಗುತ್ತದೆ. ಇದು ಸಾಧ್ಯವಸಾನಾ ಲಕ್ಷಣೆಯೇ ಆಗಿದೆ. ಹಾಗೆಯೇ 'ಹುಲ್ಲುಗಿಡಗಳು' 'ಬಳ್ಳಿಹೂಗಳು' ಇವು ಕೂಡ ಪ್ರತೀಕಗಳೇ ಆಗಿವೆ. ಹಾಗಾಗಿ ಅಧ್ಯವಸಿತವು ಪ್ರಧಾನವಾದಾಗ ಪ್ರತೀಕ, ಸಂಕೇತಗಳು ಜನ್ಮತಾಳುತ್ತವೆ ಎನ್ನುವುದು ಸೂಕ್ತವೆನಿಸುತ್ತದೆ. ಆಧುನಿಕ ಕಾವ್ಯಗಳಲ್ಲಿ ದೊರೆವ ಇಂಥ ಉದಾಹರಣೆಗಳನ್ನು ಅತಿಶಯೋಕ್ತಿಯ ಕಕ್ಷೆಯೊಳಗೇ ಸೇರಿಸಬಹುದು.

ಮತ್ತೆ ಕೆಲವು ಉದಾಹರಣೆಗಳು:

ತರುಣಿಯರಂದಕೆ
ಮರುಳಾಗುತ ತಾ
ಮರೆವುದು ನಮ್ಮನು ವರ್ಷದೊಳು –

—— ಪು. ತಿ. ನ.(ಶರದ ಮತ್ತು ಶರಚ್ಚಂದ್ರ)

ಆಹ! ನಾಕವೇ ನಮ್ಮ ಲೋಕಕೆ ಕಳಚಿ ಬಿದ್ದಿದೆ ಬನ್ನಿರಿ!
ತುಂಬಿಕೊಳ್ಳಲು ನಿಮ್ಮ ಹೃದಯದ ಹೊನ್ನ ಬಟ್ಟಲ ತನ್ನಿರಿ

—— ಕುವೆಂಪು.( ಪ್ರಾತಃಕಾಲ )

ದುಃಖಿತರ ಸುಯ್ಲಿನಲಿ ಸಿಡಿಮದ್ದು ಹಾರುತಿದೆ
ದಾರಿದ್ರ್ಯದುಮ್ಮಳದಿ ಪ್ರಳಯ ಕಾದಿಹುದು!
ಅಬಲೆಯರ ಕಣ್ಣೀರು ಕರೆಯುತಿದೆ ಬೆಂಕಿಮಳೆ
ಹಸಿದ ಹೊಟ್ಟೆಯ ಬಿಸಿಗೆ ಭೂಮಿ ಕಾದಿಹುದು.

—— ಸಿದ್ಧಯ್ಯ ಪುರಾಣಿಕ – ( ಮಾನವಸಮಾಜ )

ತೆಂಗುಗರಿಗಳ ಮೇಲೆ ತುಂಬು ಚಂದಿರ ಬಂದು
ಬೆಳ್ಳಿ ಹಸುಗಳ ಹಾಲ ಕರೆಯುವಂದು.

—— ಕೆ. ಎಸ್. ನರಸಿಂಹಸ್ವಾಮಿ.

ನೆನಪಾಗಿ ಬಂದು ನೀನೊಮ್ಮೆ ಚುಚ್ಚಿದರೂನು
ನನ್ನೆದೆಯ ಬಿಳಿಹಾಳೆಗಳ ಮೇಲೆ
ಗಾಯಗೊಂಡ ಕಲೆ ಕವನವಾಗುವುದು.

—— ಸಿದ್ಧಲಿಂಗ ಪಟ್ಟಣಶೆಟ್ಟಿ.

# ೧೧. ಶ್ಲೇಷ

ಲಕ್ಷಣ :– ಅನೇಕ ಅರ್ಥಗಳನ್ನು ಕೊಡುವಂಥ ಶಬ್ದ ಪ್ರಯೋಗವಿದ್ದರೆ ಶ್ಲೇಷ.

( ನಾನಾರ್ಥಸಂಶ್ರಯಃ ಶ್ಲೇಷ : – ಕುವಲಯಾನಂದ )

ಶ್ಲೇಷ ಎನ್ನುವ ಪದ '**ಶ್ಲಿಷ್**' ಧಾತುವಿನಿಂದ ನಿರ್ಮಾಣಗೊಂಡಿದೆ. ಇದರ ಅರ್ಥವು ಅಂಟಿಕೊಂಡಿರುವುದು ಅಥವಾ ಜೊತೆಯಾಗಿರುವುದು ಎಂದಾಗುತ್ತದೆ. ಅನೇಕಾರ್ಥಕ ಪದಗಳ ಕಾರಣದಿಂದ ಅನೇಕ ಅರ್ಥಗಳು ಒಟ್ಟೊಟ್ಟಿಗೇ ಹುಟ್ಟಿಕೊಂಡರೆ ಅದು ಶ್ಲೇಷವೆನಿಸಿಕೊಳ್ಳುತ್ತದೆ. ಸಾಮಾನ್ಯವಾಗಿ ಒಂದು ಶಬ್ದವು ಒಂದೇ ಅರ್ಥವನ್ನು ಕೊಡುತ್ತದೆ. ಆದರೆ ಕೆಲವೊಮ್ಮೆ ಶಬ್ದಗಳು ಅನೇಕಾರ್ಥಕಗಳೂ ಆಗಿರುತ್ತವೆ. ಇಂಥ ಸಮಯದಲ್ಲಿ ಅರ್ಥವನ್ನು ಸ್ಪಷ್ಟಪಡಿಸುವುದಕ್ಕಾಗಿ ಅನೇಕಾರ್ಥಕ ಶಬ್ದದ ಅರ್ಥ ನಿಯಂತ್ರಣಕ್ಕೆ ಪ್ರಯತ್ನಿಸಲಾಗುತ್ತದೆ. ವಾಕ್ಯ ಪ್ರಯೋಗದ ಸಂದರ್ಭ ಸನ್ನಿವೇಶಗಳು ಅದರ ಅರ್ಥವನ್ನು ನಿಯಂತ್ರಿಸುತ್ತವೆ. ಉದಾ :– 'ಸೈಂಧವಮಾನಯ' ಇಲ್ಲಿ ಸೈಂಧವ ಪದಕ್ಕೆ ಉಪ್ಪು, ಕುದುರೆ, ಎಂದೆಲ್ಲ ಅರ್ಥಗಳುಂಟು. ಇಂಥ ವಾಕ್ಯವನ್ನು ಊಟಕ್ಕೆ ಕುಳಿತಾಗ ಪ್ರಯೋಗಿಸಿದರೆ 'ಉಪ್ಪು' ಎಂದು ತಿಳಿದು ಉಪ್ಪನ್ನು ತರಬೇಕಾಗುತ್ತದೆ. ಪ್ರಯಾಣಕ್ಕೆ ಹೊರಟ ಸಂದರ್ಭದಲ್ಲಿ 'ಕುದುರೆ' ಎಂದು ಅರ್ಥವನ್ನು ಹಚ್ಚಬೇಕಾಗುತ್ತದೆ. ಅನೇಕಾರ್ಥಕ ಶಬ್ದಗಳ ಅರ್ಥನಿಯಂತ್ರಣ ಮಾಡುವ ಅಂಶಗಳ ಬಗ್ಗೆ ಭಾಷಾಶಾಸ್ತ್ರಜ್ಞರು ಸಾಕಷ್ಟು ಚರ್ಚೆಯನ್ನು ಮಾಡಿದ್ದಾರೆ. ಕಾವ್ಯಪ್ರಕಾಶಕಾರನಾದ ಮಮ್ಮಟನು ತನ್ನ ಗ್ರಂಥದ ಎರಡನೆಯ ಉಲ್ಲಾಸದಲ್ಲಿ ಅದನ್ನು ಹೇಳಿದ್ದಾನೆ.

ಶಾಸ್ತ್ರಜ್ಞರು ಅನೇಕಾರ್ಥಗಳನ್ನು ನಿಯಂತ್ರಿಸಲು ಬೇಲಿಯನ್ನು ಎಷ್ಟು ಭದ್ರವಾಗಿ ಹಾಕಿದರೂ ತುಡುಗು ಹಸುಗಳಂತೆ ಶಬ್ದಗಳು ಹೊರಕ್ಕೆ ಹಾರುತ್ತವೆ. ಕೊಡಬೇಕಾದ ಅರ್ಥವನ್ನು ಕೊಟ್ಟು ಮತ್ತೊಂದು ಅರ್ಥವನ್ನೂ ಕೊಡುತ್ತವೆ . ಇದು ದಿನಬಳಕೆಯ ಮಾತಿನಲ್ಲೂ ಇದೆ. ಅಂಥ ಮಾತುಗಳು ಹುಟ್ಟಿಸುವ ಚಮತ್ಕಾರವು ನಗಣ್ಯವೇನಲ್ಲ. ಶಬ್ದಗಳೊಂದಿಗೆ ಕ್ರೀಡಿಸುವ ಕವಿಗಳಂತೂ ಶ್ಲೇಷವನ್ನು ಯಥೇಚ್ಛವಾಗಿ ಬಳಸಿಕೊಂಡು ಚಮತ್ಕಾರವನ್ನುಂಟು ಮಾಡುತ್ತಾರೆ. ಉದಾ :– 'ಸಾವಿರದಾಚೆಗಿನದು ಲಕ್ಷ' ಇದನ್ನು ಸಾವು + ಇರದ + ಆಚೆಗಿನದು ಎಂದೂ ಒಡೆಯಬಹುದು. ಸಾವಿರದ+ಆಚೆಗಿನದು ಎಂದೂ ಒಡೆಯಬಹುದಲ್ಲವೇ?

ಶ್ಲೇಷವೆನ್ನುವುದಕ್ಕೆ ಒಂದಕ್ಕಿಂತ ಹೆಚ್ಚು ಅರ್ಥವುಳ್ಳದ್ದು ಎಂಬ ಅರ್ಥವನ್ನು ಕೊಟ್ಟರೂ ಶ್ಲೇಷವಿರುವಲ್ಲೆಲ್ಲಾ ಶ್ಲೇಷಾಲಂಕಾರ ಇದೆ ಎನ್ನುವಂತಿಲ್ಲ. ಅದು ಇತರ ಅಲಂಕಾರಗಳಿಗೆ ಪೋಷಕವಾಗಿ ನಿಲ್ಲುವ ಸಂದರ್ಭಗಳು ಬಹಳಷ್ಟಿವೆ. ಹಾಗೆ ನೋಡಿದರೆ ಎಲ್ಲ ಅಲಂಕಾರಗಳೂ ಶ್ಲೇಷದಿಂದ ಪೋಷಣೆಯನ್ನು ಪಡೆಯಲು ಸಾಧ್ಯ. ಉಪಮೆ, ರೂಪಕ, ದೀಪಕ, ಸಮಾಸೋಕ್ತಿ, ವ್ಯತಿರೇಕ, ಮುಂತಾದ ಎಲ್ಲ ಅಲಂಕಾರಗಳಲ್ಲಿಯೂ ಶ್ಲೇಷಕ್ಕೆ ಪ್ರವೇಶವುಂಟು.

ಸಮಾಸೋಕ್ತಿಯಂಥ ಅಲಂಕಾರವಂತೂ ಶ್ಲೇಷದ ನೆರವಿಲ್ಲದೆ ಹುಟ್ಟಲಾರದು. ಇತರ ಅಲಂಕಾರಗಳಿಗೆ ಪೋಷಕವಾಗಿ ನಿಲ್ಲುವ ಶ್ಲೇಷವು ಪೋಷಕ ಪಾತ್ರವಲ್ಲದೆ ನಾಯಕ ಪಾತ್ರವನ್ನು ನಿರ್ವಹಿಸಬಲ್ಲದೇ? ಶ್ಲೇಷಕ್ಕೆ ಸ್ವತಂತ್ರವಾದ ಅಲಂಕಾರವೆನಿಸುವ ಯೋಗ್ಯತೆಯುಂಟೇ? ಇದು ಆಲಂಕಾರಿಕರನ್ನೂ ನಮ್ಮನ್ನೂ ಕಾಡುವ ಪ್ರಶ್ನೆ.

ಉದ್ಭಟ, ರುಯ್ಯಕ, ಮುಂತಾದವರು ಶ್ಲೇಷಾಲಂಕಾರವು ಸ್ವತಂತ್ರವಾಗಿ ಇರಲಾರದೆನ್ನುತ್ತಾರೆ. ಅದು ಇರುವಲ್ಲೆಲ್ಲ ಇನ್ನೊಂದು ಅಲಂಕಾರವಿರುತ್ತದೆ. ಅಲಂಕಾರ ಸರ್ವಸ್ವಕಾರನಾದ ರುಯ್ಯಕನು ಸಾಕಷ್ಟು ವಿಸ್ತಾರವಾಗಿ ಈ ಬಗೆಗೆ ಚರ್ಚಿಸಿದ್ದಾನೆ. ಶ್ಲೇಷಾಲಂಕಾರಕ್ಕೆ ಸ್ವತಂತ್ರವಾದ ವಿಷಯವೇ ಇಲ್ಲ ವೆಂಬುದು ಅವನ ಅಭಿಪ್ರಾಯ. (**ಅಲಂಕಾರಾಂತರ ವಿವಿಕ್ತೋ ನಾಸ್ಯ ವಿಷಯಃ**) ಶ್ಲೇಷದ ಜೊತೆಯಲ್ಲಿ ಅನ್ಯ ಅಲಂಕಾರಗಳಿರುವಲ್ಲಿ ಇದು ಅದರ ಚಮತ್ಕಾರವನ್ನು ಬಾಧಿತಗೊಳಿಸುತ್ತದೆ. ಆದರೆ ಮಮ್ಮಟ, ವಿಶ್ವನಾಥ, ಮುಂತಾದವರು ಶ್ಲೇಷವು ಎರಡೂ ರೀತಿಯಲ್ಲಿ ಇರಬಲ್ಲುದೆಂದು ಹೇಳುತ್ತಾರೆ. ಅನ್ಯ ಅಲಂಕಾರಗಳ ಜೊತೆಯಲ್ಲಿರುವಾಗ ಅದು ಪೋಷಕವಾಗಿರುತ್ತದೆ. ಕೆಲವೊಮ್ಮೆ ಸ್ವತಂತ್ರವಾಗಿದ್ದು ಇತರ ಅಲಂಕಾರಗಳಿಂದ ಪೋಷಣೆಯನ್ನು ಪಡೆಯುತ್ತದೆ. ಅಂಥಲ್ಲಿ ಶ್ಲೇಷವನ್ನೇ ಅಲಂಕಾರವೆಂದು ಗುರುತಿಸಬೇಕಾಗುತ್ತದೆ.

ಶ್ಲೇಷವನ್ನು ಸ್ವತಂತ್ರವಾದ ಅಲಂಕಾರವೆಂದು ಪರಿಗಣಿಸಿದಾಗಲೂ ಅದರ ಮಿತಿಯನ್ನು ಅರಿಯುವುದು ಅವಶ್ಯ. ಕೇವಲ ಶ್ಲೇಷವೇ ಇದ್ದರೆ ಅದು ಸೊಗಸಲ್ಲ. ಅಲ್ಲಿ ಇತರ ಅಲಂಕಾರದ ಛಾಯೆಯಾದರೂ ಬೇಕಾಗುತ್ತದೆ. ಶ್ಲೇಷಕ್ಕಾಗಿ ಶ್ಲೇಷವಾಗಿದ್ದರೆ ಕ್ಲೇಶ ಹೆಚ್ಚು. ಶ್ಲೇಷವು ಇತರ ಅಲಂಕಾರಗಳಿಗೆ ಪೋಷಕವಾದಂತೆ ಇತರ ಅಲಂಕಾರಗಳ ಪೋಷಣೆಯು ಒದಗಿದಾಗ ಮಾತ್ರ ಶ್ಲೇಷವು ಚಮತ್ಕಾರಿಯೆನಿಸುತ್ತದೆ. ಅದನ್ನು ಗಮನಿಸಿಯೇ ಕವಿಗಳು ಶ್ಲೇಷವನ್ನು ಪೋಷಕ ಪಾತ್ರದಲ್ಲಿ ದುಡಿಸಿಕೊಂಡಿರುವುದೇ ಹೆಚ್ಚು. ಆಧುನಿಕ ಕಾವ್ಯ ಸಂದರ್ಭದಲ್ಲಿಯಂತೂ ಶುದ್ಧ ಶ್ಲೇಷವು ದೊರೆಯುವುದೇ ಇಲ್ಲವೆಂದರೂ ತಪ್ಪಾಗದು.

ಶ್ಲೇಷದಲ್ಲಿ ದೊರೆಯುವ ಒಂದಕ್ಕಿಂತ ಹೆಚ್ಚಿನ ಅರ್ಥಗಳನ್ನು ವಿವರಿಸುವುದು ಹೇಗೆ? ಎಂಬ ಪ್ರಶ್ನೆ ಆಲಂಕಾರಿಕರ ಚರ್ಚೆಯ ಮತ್ತೊಂದು ವಿಷಯ. ಶ್ಲೇಷದ ಎರಡು ಪಾತ್ರಗಳನ್ನು ಗಮನದಲ್ಲಿರಿಸಿಕೊಂಡು ವ್ಯವಹರಿಸಬೇಕೆಂಬುದು ಅವರ ಅಭಿಪ್ರಾಯ. ಶ್ಲೇಷವು ಪೋಷಕವಾಗಿದ್ದಾಗ ಪ್ರಸ್ತುತ ಸಂದರ್ಭಕ್ಕೆ ಹೊಂದುವ ಅರ್ಥವು ವಾಚ್ಯವಾಗುತ್ತದೆ. ಅದು ಕೊಡುವ ಇನ್ನೊಂದು ಅರ್ಥವು ವ್ಯಂಗ್ಯವಾಗುತ್ತದೆ. ಸಮಾಸೋಕ್ತಿಯನ್ನೇ ಉದಾಹರಣೆಯನ್ನಾಗಿ ತೆಗೆದುಕೊಳ್ಳಬಹುದು. ಸಮಾಸೋಕ್ತಿಯಲ್ಲಿ ವಿಶೇಷಣಗಳು ಶ್ಲಿಷ್ಟವಾಗಿರುತ್ತವೆಯಾದರೂ ವಿಶೇಷ್ಯವು ಶ್ಲಿಷ್ಟವಾಗಿರುವುದಿಲ್ಲ. ಉದಾ :– 'ಅನುರಾಗವತೀ ಸಂಧ್ಯಾ' ಇಲ್ಲಿ 'ಅನುರಾಗ' ಎಂಬ ಪದಕ್ಕೆ ಕೆಂಪು, ಪ್ರೀತಿ, ಎಂಬ ಅರ್ಥಗಳಿವೆ. 'ಸಂಜೆಯು ಕೆಂಪಾಗಿದೆ' ಎಂಬ ಅರ್ಥವಿರುವಂತೆ 'ಸಂಧ್ಯೆಯು ಪ್ರೇಮವಶಳಾಗಿದ್ದಾಳೆ' ಎಂಬ ಅರ್ಥವೂ ಬರುತ್ತದೆ. ಸಂಧ್ಯಾಕಾಲದ ವರ್ಣನೆಯು ಪ್ರಸ್ತುತವಾದುದರಿಂದ 'ಕೆಂಪು' ಎಂಬ ಅರ್ಥವು ವಾಚ್ಯವಾಗುತ್ತದೆ.

' ಸಂಜೆಯು ಕೆಂಪಾಗಿದೆ ' ಎಂಬುದು ವಾಚ್ಯಾರ್ಥ. ಆದರೆ ಪ್ರೇಮಮಯಿಯಾಗಿ ವ್ಯವಹರಿಸುವ ನಾಯಿಕೆಯ ಚಿತ್ರ ವ್ಯಂಗ್ಯ. ಯಾಕೆಂದರೆ ಅದು ಪ್ರಸ್ತುತವಲ್ಲ. ಶ್ಲೇಷವು ಪೋಷಕವಾಗಿರುವ ಸಂದರ್ಭಗಳಲ್ಲೆಲ್ಲ ಇದೇ ರೀತಿಯ ವ್ಯವಸ್ಥೆ.

ಶ್ಲೇಷವೇ ಪ್ರಧಾನವಾಗಿರುವಾಗ ಅದು ಕೊಡುವ ಅರ್ಥಗಳೆಲ್ಲವೂ ಪ್ರಸ್ತುತವಾಗಿರುತ್ತವೆ. ಅಥವಾ ಅಪ್ರಸ್ತುತವಾಗಿರುತ್ತವೆ. ಶ್ಲೇಷವನ್ನೇ ಸ್ವತಂತ್ರವಾದ ಅಲಂಕಾರವೆಂದು ಪರಿಗಣಿಸಲು ಈ ಸೀಮೆಯು ಅವಶ್ಯವೆಂದು ಮಮ್ಮಟನೇ ಮೊದಲಾದವರು ಸ್ಪಷ್ಟಪಡಿಸಿದ್ದಾರೆ. ಕುವಲಯಾನಂದಕಾರನು ಪ್ರಕೃತಾಪ್ರಕೃತಶ್ಲೇಷವೆಂಬ ಮೂರನೆಯ ಬಗೆಯನ್ನು ಅಂಗೀಕರಿಸುತ್ತಾನಾದರೂ ಇತರರು ಅದನ್ನೊಪ್ಪುವುದಿಲ್ಲ. ಪ್ರಾಚೀನ ಆಲಂಕಾರಿಕರ ಮತವನ್ನು ಅನುಸರಿಸಿ ಹೇಳುವುದಾದರೆ ಶ್ಲೇಷದಲ್ಲಿ ದೊರೆವ ಎರಡೂ ಅರ್ಥಗಳೂ ವಾಚ್ಯಾರ್ಥಗಳೇ ಆಗುತ್ತವೆ. ಹಾಗಲ್ಲದೆ ಶ್ಲೇಷಾರ್ಥಕ ವಾಕ್ಯದಲ್ಲಿ ಒಂದು ಅರ್ಥವು ಪ್ರಸ್ತುತವಾಗಿದ್ದು ಇನ್ನೊಂದು ಅರ್ಥವು ಅಪ್ರಸ್ತುತವಾಗಿದ್ದರೆ ಅದು ಶಬ್ದ ಶಕ್ತಿಮೂಲ ಧ್ವನಿಯ ವಿಷಯವಾಗುತ್ತದೆ. ಉದಾ:—'**ದಾನಾಂಬುಸೇಕಸುಭಗಃ ಸತತಂಕರೋಽಭೂತ್**' ' ( ರಾಜನ ) ಹಸ್ತವು ದಾನದ ಜಲದಿಂದ ಸದಾ ಸುಂದರವಾಗಿ ಕಾಣುತ್ತದೆ ' ಮತ್ತು ( ಆನೆಯ ಸೊಂಡಿಲು ) ಮದೋದಕ ಸೇಚನೆಯಿಂದ ಸದಾ ಸುಂದರವಾಗಿ ಕಾಣುತ್ತದೆ ' ಇಲ್ಲಿ ರಾಜನ ವರ್ಣನೆಯು ಪ್ರಸ್ತುತ. ಹಾಗಾಗಿ ಮೊದಲನೆಯ ಅರ್ಥವು ವಾಚ್ಯ. ಆನೆಯ ಸೊಂಡಿಲಿನ ವರ್ಣನೆ ಅಪ್ರಸ್ತುತ. ಆದ್ದರಿಂದ ಆನೆಗೆ ಸಂಬಂಧಿಸಿದ ಅರ್ಥವು ವ್ಯಂಗ್ಯ. ಅವುಗಳ ಸಮನ್ವಯ ಹೇಗೆ? ಗಮ್ಯವಾದ ಔಪಮ್ಯವಿದೆ. '' ಮದೋದಕ ಸೇಚನೆಯಿಂದ ಸದಾ ಸುಂದರವಾಗಿ ಕಾಣುವ ಆನೆಯ ಸೊಂಡಿಲಿನಂತೆ ದಾನಜಲದಿಂದ ರಾಜನ ಹಸ್ತವು ಸುಂದರವಾಗಿ ಕಾಣುತ್ತದೆ '' ಎಂದು ತಿಳಿಯಬೇಕು. ಇಲ್ಲಿ ಉಪಮಾ ಧ್ವನಿಯಿದೆ. ಹೀಗಾಗಿ ಶ್ಲೇಷವಿರುವಲ್ಲಿ ಪ್ರಕೃತಾಪ್ರಕೃತಗಳನ್ನು ಎಚ್ಚರದಿಂದ ಪರಿಶೀಲಿಸಬೇಕಾಗುತ್ತದೆ. ಇಲ್ಲವಾದರೆ ಧ್ವನಿಯಿರುವಲ್ಲಿ ಅಲಂಕಾರವೆಂದು ಹೇಳುವ ಪ್ರಸಂಗವೂ ಬರುತ್ತದೆ. ಅಪ್ಪಯ್ಯ ದೀಕ್ಷಿತನು ಇಲ್ಲಿ ಎರಡೂ ಅರ್ಥಗಳು ವಾಚ್ಯವೆಂದೇ ಹೇಳುತ್ತಾನೆ. ಅಲಂಕಾರವು ಮಾತ್ರ ಧ್ವನಿಯೇ ಹೊರತು ಅಪ್ರಕೃತಾರ್ಥವು ಧ್ವನಿಯಲ್ಲವೆಂಬುದು ಅವನ ಅಭಿಪ್ರಾಯ. ಇದು ತುಂಬ ಗಹನವಾದ ಚರ್ಚೆ ಇಲ್ಲಿ ಬೇಡ.

ಶ್ಲೇಷವನ್ನು **ಶಬ್ದಶ್ಲೇಷ** ಮತ್ತು **ಅರ್ಥಶ್ಲೇಷ**ವೆಂದು ವಿಂಗಡಿಸುವ ಕ್ರಮ ಪ್ರಥಮ ಆಲಂಕಾರಿಕನೆನಿಸಿದ ಭಾಮಹನಿಂದಲೇ ಮೊದಲಾಯಿತು. ಶಬ್ದ ಶ್ಲೇಷವು ಶಬ್ದಗಳನ್ನು ಆಶ್ರಯಿಸಿದೆ. ಸ್ವಾಭಾವಿಕವಾಗಿಯೇ ಅನೇಕಾರ್ಥವುಳ್ಳ ಪದಗಳನ್ನು ಪ್ರಯೋಗಿಸುವುದು ಒಂದು ವಿಧಾನ. ಅಂತೆಯೇ ಸಂಧಿಯನ್ನು ವಿಗ್ರಹಿಸಿದಾಗ ಬೇರೆ ಬೇರೆ ಅರ್ಥಗಳು ಬರುವಂತೆ ಮಾಡುವುದು ಮತ್ತೊಂದು ವಿಧಾನ. ರುದ್ರಟನು ಇದರಲ್ಲಿ ಎಂಟು ಪ್ರಕಾರಗಳನ್ನು ಹೇಳುತ್ತಾನೆ. —ವರ್ಣ, ಪದ, ಲಿಂಗ, ಭಾಷಾ, ಪ್ರಕೃತಿ, ಪ್ರತ್ಯಯ, ವಿಭಕ್ತಿ ಮತ್ತು ವಚನವೆಂದು. ಅದನ್ನೆಲ್ಲ ಪರ್ಯಾಲೋಚಿಸಿ ಶಬ್ದಶ್ಲೇಷವನ್ನು ' ಶಬ್ದಪರಿವೃತ್ತ್ಯಸಹ ' ವೆನ್ನುತ್ತಾರೆ. ಪದವೊಂದನ್ನು ಬದಲಿಸಿದರೆ ಶ್ಲೇಷವು ಮಾಯವಾಗುವಂತಿದ್ದರೆ ಅದನ್ನು ಶಬ್ದಶ್ಲೇಷವೆಂದು ಕರೆಯಬೇಕು. ಶಬ್ದಶ್ಲೇಷವನ್ನು ಮತ್ತೆ **ಸಭಂಗಶ್ಲೇಷ**, **ಅಭಂಗಶ್ಲೇಷ** ಎಂದು ವಿಭಾಗಿಸುವುದುಂಟು.

ಸಭಂಗಶ್ಲೇಷದಲ್ಲಿ ಎರಡರ್ಥವನ್ನು ಪಡೆಯಲು ಶಬ್ದವನ್ನು ಬೇರೆ ಬೇರೆ ರೀತಿಯಲ್ಲಿ ಒಡೆಯಬೇಕಾಗುತ್ತದೆ. ಉದಾ :– 'ಪಾರ್ವತೀಪರಮೇಶ್ವರ' ಇದನ್ನು ಪಾರ್ವತೀ + ಪರಮೇಶ್ವರ' ಎಂದಂತೆ 'ಪಾರ್ವತೀಪ + ರಮೇಶ್ವರ' ಎಂದೂ ವಿಗ್ರಹಿಸಬಹುದು. ಹೀಗೆ ಪದಗಳನ್ನು ವಿಗ್ರಹಿಸಿ ಶ್ಲೇಷವನ್ನು ಪಡೆದರೆ ಅದು ಸಭಂಗ . ಸ್ವಾಭಾವಿಕವಾಗಿಯೇ ಶ್ಲಿಷ್ಟಪದಗಳ ಪ್ರಯೋಗವಿದ್ದರೆ ಅದು ಅಭಂಗ.

ಅರ್ಥ ಶ್ಲೇಷವು ವಿಶಿಷ್ಟವಾದ ಪದಗಳನ್ನು ಅವಲಂಬಿಸಿರುವುದಿಲ್ಲ. ಇಲ್ಲಿ ಶ್ಲೇಷವು ಅರ್ಥವನ್ನು ಆಶ್ರಯಿಸಿರುತ್ತದೆ. ಸಾಮಾನ್ಯವಾಗಿ ಏಕಾರ್ಥಾಭಿಧಾಯಕ ಶಬ್ದಗಳ ಪ್ರಯೋಗವಿದ್ದರೂ ಅಲ್ಲಿ ಅನೇಕಾರ್ಥಗಳು ದೊರೆಯುತ್ತವೆ. ಇಲ್ಲಿ ಶಬ್ದಗಳನ್ನು ಬದಲಿಸಿದರೂ ಶ್ಲೇಷಾರ್ಥವು ಮಾಯವಾಗುವುದಿಲ್ಲ. ಹಾಗಾಗಿ 'ಶಬ್ದಪರಿವೃತ್ತಿ ಸಹ' ಎಂದು ಕರೆಯುತ್ತಾರೆ. ರುಯ್ಯಕನು ಅಭಂಗ ಶ್ಲೇಷವು ಅರ್ಥಾಲಂಕಾರವೆಂದು ಹೇಳುತ್ತಾನೆ. ಆದರೆ ಮಮ್ಮಟನು ಅಭಂಗ ಶ್ಲೇಷವನ್ನೂ ಶಬ್ದಾಲಂಕಾರವೆಂದೇ ಹೇಳುತ್ತಾನೆ. ಯಾಕೆಂದರೆ ಅಲ್ಲಿ ಶಬ್ದಪರಿವೃತ್ತಿ ಸಹತ್ವವಿಲ್ಲ ಶ್ಲಿಷ್ಟವಾದ ಪದವನ್ನು ತೆಗೆದು ಹಾಕಿದರೆ ಶ್ಲೇಷವುಳಿಯುವುದಿಲ್ಲ. ಅರ್ಥಶ್ಲೇಷದಲ್ಲಿ ಅರ್ಥದ ಬಲದಿಂದ ಶ್ಲೇಷ ಹುಟ್ಟುವುದರಿಂದ ಶಬ್ದದ ಅವಲಂಬನೆಯಿಲ್ಲ. ಉದಾ:– ''ಬೇಗ ಮೇಲೇರುವುದು ಮತ್ತು ಬೇಗ ಕೆಳಗಿಳಿಯುವುದು ತಕ್ಕಡಿಗೂ ದುಷ್ಟರಿಗೂ ಸಮಾನವಾಗಿದೆ''. ಇಲ್ಲಿ 'ಮೇಲೇರುವುದು' ಮತ್ತು 'ಕೆಳಗಿಳಿಯುವುದು' ಎಂಬ ಪದಗಳನ್ನು ತೆಗೆದು ಹಾಕಿ ಅದೇ ಅರ್ಥದ ಬೇರೆ ಪದಗಳನ್ನಿಟ್ಟರೂ ಶ್ಲೇಷಕ್ಕೆ ಬಾಧೆಯಿಲ್ಲ.

ಇಲ್ಲಿ ಗಮನಿಸಬೇಕಾದುದೆಂದರೆ ಅರ್ಥಶ್ಲೇಷದಲ್ಲಿ ಬಳಸುವ ಪದಗಳೂ ನಿಜವಾಗಿ ಏಕಾರ್ಥಕಗಳಾಗಿರುವುದಿಲ್ಲ. ಕೋಶಗಳ ಸ್ವೀಕೃತಿ ಇರಲಿ, ಇಲ್ಲದಿರಲಿ ಭಾಷೆಯನ್ನು ಪ್ರಯೋಗಿಸುವವರು ಅನೇಕ ಪದಗಳಿಗೆ ಬೇರೆ ಅರ್ಥವನ್ನು ಕೊಟ್ಟುಕೊಳ್ಳುತ್ತಾರೆ. ಅದನ್ನು ಲಕ್ಷ್ಯಾರ್ಥವೆಂದು ಕರೆಯಬಹುದು. ಅದು ಸಂದರ್ಭದ ಬಲದ ಮೇಲೆ ಹುಟ್ಟುವಂಥದು. ಅರ್ಥಶ್ಲೇಷದಲ್ಲಿ ಕವಿಯು ಅಂಥ ಪದಗಳನ್ನು ದುಡಿಸಿಕೊಳ್ಳುತ್ತಾನೆ. ಉದಾ:–'ಮೇಲೇರುವುದು' ಎಂಬ ಪದವನ್ನೇ ಗಮನಿಸಿ. ಅದರ ವಾಚ್ಯಾರ್ಥ ಬೇರೆ ; ಲಕ್ಷ್ಯಾರ್ಥ ಬೇರೆ. ಇಲ್ಲಿ ತಕ್ಕಡಿಗೆ ವಾಚ್ಯಾರ್ಥವು ಅನ್ವಯಿಸಿದರೆ, ದುಷ್ಟನಿಗೆ ಲಕ್ಷ್ಯಾರ್ಥವು ಅನ್ವಯಿಸುತ್ತದೆ.

ಶ್ಲೇಷದ ವಿಭಾಗವೆಂದು ಶಬ್ದಶ್ಲೇಷ ಮತ್ತು ಅರ್ಥಶ್ಲೇಷಗಳನ್ನು ಒಪ್ಪಿಕೊಂಡರೂ ಕವಿಗಳು ಎರಡೂ ಪ್ರಕಾರಗಳನ್ನು ಯಥೋಚಿತವಾಗಿ ಬಳಸಿಕೊಳ್ಳುತ್ತಾರೆ. ಆಲಂಕಾರಿಕರು ಶಬ್ದಶ್ಲೇಷವನ್ನು ಶಬ್ದಾಲಂಕಾರವೆಂದೂ , ಅರ್ಥಶ್ಲೇಷವನ್ನು ಅರ್ಥಾಲಂಕಾರವೆಂದೂ, ಪರಿಗಣಿಸುತ್ತಾರೆ. ಕುವಲಯಾನಂದಕಾರನು ಈ ವಿಭಾಗವನ್ನೊಪ್ಪದೆ ಶ್ಲೇಷವು ಅರ್ಥಾಲಂಕಾರವೆಂದೇ ಹೇಳುತ್ತಾನೆ. ಬಹುಶಃ ಕವಿಗಳ ರೂಢಿಯನ್ನು ಗಮನಿಸಿದಾಗ ಅದು ಸಮರ್ಪಕವಾದ ಅಭಿಪ್ರಾಯವೆನಿಸುತ್ತದೆ. ಇಲ್ಲವಾದರೆ ಒಂದು ಸಾಲನ್ನು ಶಬ್ದಾಲಂಕಾರವೆಂದೂ ಇನ್ನೊಂದು ಸಾಲನ್ನು ಅರ್ಥಾಲಂಕಾರವೆಂದೂ ಪರಿಗಣಿಸುವ ಪ್ರಸಂಗ ಬರುತ್ತದೆ. ಮೇಲಾಗಿ ಇಲ್ಲಿ ಶಬ್ದ ಸೌಂದರ್ಯಸಾಧನೆಯ ಗುರಿಯಿರುವುದಿಲ್ಲ. ಅರ್ಥಚಮತ್ಕೃತಿಯೇ ವಿವಕ್ಷೆಯಾಗಿರುತ್ತದೆಂಬುದನ್ನೂ ಲಕ್ಷಿಸಬೇಕು. ಈಗ ಕೆಲವು ಪ್ರಯೋಗಗಳನ್ನು ಗಮನಿಸೋಣ:

ಅತಿಶಯ ಪದಾರ್ಥನಿಕರ
ಪ್ರತೀತಿಯಂ ಪಡೆವಪಾದವಿನ್ಯಾಸಂ ಭೂ
ನುತಮಾಗದಲ್ತೆ ನಿರ್ದೋ
ಷತೆಯಿಂದಲ್ಲದೆ ಸಮಂತು ಕವಿಗಂ ರವಿಗಂ ||

ಇಲ್ಲಿ ಕವಿಯೂ, ರವಿಯೂ, ಏಕಾನುಪೂರ್ವಿಯಿಂದಲೇ ವರ್ಣಿತರಾಗಿರುವರು. ಈ ವರ್ಣನೆಯಲ್ಲಿ 'ಪದಾರ್ಥ' 'ಪಾದ' 'ನಿರ್ದೋಷತೆ' ಎಂಬ ಶಬ್ದಗಳಿಗೆ ಕವಿಯ ಪರವಾಗಿ 'ಶಬ್ದಾರ್ಥ' 'ಶ್ಲೋಕಪಾದ' 'ದೋಷಶೂನ್ಯತೆ' ಎಂದು ಅರ್ಥ. ರವಿಯ ಪರವಾಗಿ 'ಪ್ರಪಂಚದಲ್ಲಿರುವ ಪದಾರ್ಥ' 'ಕಿರಣ' 'ರಾತ್ರಿಶೂನ್ಯತೆ' (ಹಗಲು) ಎಂದು ಅರ್ಥ'' (ಕನ್ನಡ ಕೈಪಿಡಿ. ೩೯೧) ಇಲ್ಲಿ ವಿಶೇಷಣಗಳು ಮಾತ್ರ ಶ್ಲಿಷ್ಟವಾಗಿದ್ದು ವಿಶೇಷ್ಯಗಳು ಶ್ಲಿಷ್ಟವಾಗಿಲ್ಲ. ಅವು ವಾಚ್ಯವಾಗಿವೆ. ಶ್ಲೇಷವನ್ನು ಪರಿಭಾವಿಸಿದಾಗ ಉಪಮೆಯಿಂದ ಪೋಷಣೆಯನ್ನು ಪಡೆದಿದೆ ಎಂಬುದು ಅರಿವಿಗೆ ಬರುತ್ತದೆ. ಕವಿ ಮತ್ತು ರವಿಗಳಲ್ಲಿ ಸಾಮ್ಯವಿದೆಯೆಂಬುದನ್ನು ಹೇಳುವುದು ಕವಿಯ ಇಚ್ಛೆ. ವಿಶೇಷ್ಯವೂ ಶ್ಲಿಷ್ಟವಾಗಿರುವ ಒಂದು ಉದಾಹರಣೆಯನ್ನು ನೋಡಿ.

ಜನಚಿತ್ತಾಹ್ಲಾದಪಾದಂ ಸಕಲಧರಣಿಭೃನ್ಮಸ್ತಕನ್ಯಸ್ತಮಾಗಿ
ರ್ಪಿನ ಮುಚ್ಚಂಡ ಪ್ರತಾಪೋದಯಮರಿ ಕುಮುದಾಭೋಗವಿಧ್ವಂಸಿಯಾಗಿ |
ರ್ಪಿನಮುದ್ಯನ್ಮಂಡಲಾಗ್ರಂ ಸಲೆ ಘನ ಪದವೀ ಶೋಭೆಯಂ ಪೆರ್ಚಿಸುತ್ತಿ
ರ್ಪಿನವೋಳ್ಪಂ ಪೆತ್ತುದಾತ್ತಂ ಬೆಳಗುಗೆ ಜಗಮಂ ಗೋಪಮಾರ್ತಾಂಡದೇವಂ ||

—ಜ. ವಿ. ೧-೪.

(೧) ಜನಚಿತ್ತಾಹ್ಲಾದಕವಾದ ತನ್ನ ಕಿರಣಗಳನ್ನು ಯಾರು ಸಕಲ ಪರ್ವತಾಗ್ರಗಳಲ್ಲೂ ಹರಡುವನೋ ಯಾರ ಅತಿ ಕ್ರೂರವಾದ ತಾಪಪ್ರಸರಣವು ಅರಿಯಾದ ನೈದಿಲೆಯ ಪರಿಪೂರ್ಣತೆ ಅಥವಾ ವಿಕಾಸವನ್ನು ಧ್ವಂಸ ಮಾಡುವುದೋ ಯಾರ ಉತ್ಕೃಷ್ಟವಾದ ಮಂಡಲದ ಅಗ್ರವು ಆಕಾಶದ ಕಾಂತಿಯನ್ನು ಹೆಚ್ಚಿಸುವುದೋ ಆ ಉದಾತ್ತನೂ ಭುಜನೇತ್ರಾದಿ ರಕ್ಷಕನೂ ಆದ ಸೂರ್ಯದೇವನು ಜಗತ್ತನ್ನು ಬೆಳಗಲಿ.

(೨) ಭಕ್ತಜನಮನೋನುರಾಗಕರವಾದ ಯಾರ ಪಾದಗಳು ರಾಜಾಧಿರಾಜರೆಲ್ಲರ ಶಿರೋಭೂಷಣಗಳಾಗಿರುವವೋ, ಯಾರ ಅದ್ಭುತವಾದ ಪಾದವು ಪೂರ್ಣ ಭೂಮಂಡಲಕ್ಕೆ ಅಧಿಪತಿಯಾದ ಬಲಿಚಕ್ರವರ್ತಿಯ ಶಿರಸ್ಸಿನ ಮೇಲೆ ಇಡಲ್ಪಟ್ಟಿತೋ, ಯಾರ ಉಚ್ಚಂಡ ಪ್ರತಾಪವು ಅರಿಗಳ ಕುಸಂತೋಷಾಧಿಕ್ಯವನ್ನು ಧ್ವಂಸ ಮಾಡುವುದೋ, ಯಾರ (ನಂದಕ) ಖಡ್ಗವು ಮೇಘಮಾರ್ಗ ಸುಪ್ರಕಾಶವೋ ಆಶ್ಲಾಘ್ಯನೂ, ಧೀರೋದಾತ್ತನೂ, ಗೋಪಾಲಕನೂ ಆದ ಆ ಜಗನ್ನಾಥ ಸೂರ್ಯದೇವನು (ವಿಷ್ಣು) ಲೋಕವನ್ನು ಬೆಳಗಲಿ. (ಅನುವಾದ: ಎಂ. ವರದಾಚಾರ್ಯ)

ಇಲ್ಲಿ ವಿಶೇಷಣಗಳ ಜೊತೆಗೆ ವಿಶೇಷ್ಯವಾದ 'ಗೋಪಮಾರ್ತಾಂಡದೇವ' ಎಂಬ ಪದವೂ ಶ್ಲಿಷ್ಟವಾಗಿದೆ. ಸೂರ್ಯನಿಗೂ ವಿಷ್ಣುವಿಗೂ ಸಮಾನವಾಗಿ ಅನ್ವಯಿಸುವಂತೆ ಪದಗಳನ್ನು ಯೋಜಿಸಲಾಗಿದೆ. ಹೀಗೆ ಶ್ಲೇಷ್ಯದಲ್ಲಿ ವಿಶೇಷ್ಯವನ್ನೂ ಶ್ಲಿಷ್ಟವಾಗಿಸುವ ಕ್ರಮವೂ ಇದೆ.

ರುಯ್ಯಕನು ಇದನ್ನೇ ವಿಶೇಷ್ಯ ಸಾಮ್ಯ ಹಾಗೂ ದ್ವಯೋರುಪಾದಾನವೆಂದೂ ಹೇಳುತ್ತಾನೆ. (**ವಿಶೇಷ್ಯಸ್ಯಾಪಿ ಸಾಮ್ಯೇ ಧ್ವಯೋರ್ವೋಪಾದಾನೇ ಶ್ಲೇಷಃ**) ಇಲ್ಲಿ ಎರಡೂ ಅರ್ಥಗಳು ಪ್ರಸ್ತುತಗಳೇ ಆಗಿವೆಯಾದ್ದರಿಂದ ಇದನ್ನು ಶ್ಲೇಷಾಲಂಕಾರವೆಂದೇ ಪರಿಗಣಿಸಬೇಕಾಗುತ್ತದೆ. ಕವಿಯು ಸೂರ್ಯ ಹಾಗೂ ವಿಷ್ಣುಗಳನ್ನು ಸ್ತುತಿಸುವ ಉದ್ದೇಶವನ್ನು ಹೊಂದಿದ್ದು ಸ್ಪಷ್ಟ. ಕವಿಯು ತಾನು ವರ್ಣಿಸಲು ಬಯಸಿದ್ದನ್ನೂ, ಅಪ್ರಾಕರಣಿಕ ಅಥವಾ ಅವರ್ಣ್ಯವನ್ನೂ ಹೇಳುವುದಕ್ಕೆ ಒಂದು ಉದಾಹರಣೆ:-

**ಪಾರದೆ ಪದಾರ್ಥಮಂ ವರಯತಿಗೆ ಭಂಗಮಂ**
**ತಾರದೆ ನಿಜಾನ್ವಯಕ್ರಿಯೆಗಳ್ಗೆ ದೂಷಣಂ**
**ಬಾರದೆ ವಿಶೇಷಗುಣಗಣ ಕಲಾಗೌರವಂ ತೀರದೆ ದುರುಕ್ತಿಗಳ್ಗೆ।**
**ಸೇರದೆ ಸುಮಾರ್ಗದೊಳ್ನಡೆವ ಸತ್ಪುರುಷನಗ**
**ಭೀರದೆಸೆಯಂ ಪೋಲ್ವ ಕಾವ್ಯ ಪ್ರಬಂಧಮಂ**
**ಶಾರದೆಯ ಕರುಣದಿಂ ಪೇಳ್ವೆನಾಂ ದೋಷಮಂ ತೊರೆದೆಲ್ಲರುಂ ಕೇಳ್ವುದು ॥**

— ಜೈ.ಭಾ.೧-೫.

ಇಲ್ಲಿ ಕವಿಯು ಸತ್ಪುರುಷನ ಗಭೀರ ದೆಸೆಯನ್ನು ಪೋಲ್ವ ಕಾವ್ಯವನ್ನು ಹೇಳುತ್ತೇನೆ ಎಂದಿದ್ದಾನೆ. 'ಪೋಲ್ವ' ಎಂಬ ಶಬ್ದವಿರುವುದರಿಂದ ಇದು ಉಪಮೆಯೆನಿಸುತ್ತದೆ. ಆದರೆ ವಾಸ್ತವವಾಗಿ ಉಪಮೆಗೆ ಅವಶ್ಯವಾದ ಚಮತ್ಕಾರಿಯಾದ ಸಾದೃಶ್ಯ ಇಲ್ಲಿಲ್ಲ. 'ಪಾರದೆ ಪರಾರ್ಥಮಂ' ಮುಂತಾದ ವಿಶೇಷಣಗಳು ಸತ್ಪುರುಷನ ಗಭೀರದೆಸೆಗೂ ಕಾವ್ಯಕ್ಕೂ ಸಮಾನವಾಗಿ ಅನ್ವಯಿಸುತ್ತವಾದರೂ ಅವುಗಳ ಅರ್ಥ ಬೇರೆ. 'ಸತ್ಪುರುಷನಾದವನು ಬೇರೆಯವರ ಸಂಪತ್ತಿಗೆ ಆಸೆ ಪಡದಿರುವಂತೆ ನನ್ನ ಕಾವ್ಯವು ಬೇರೆಯವರ ಕಲ್ಪನೆಗಳನ್ನು ಆಶಿಸುವುದಿಲ್ಲ' ಎಂಬುದು ಕವಿಯ ಆಶಯ. ಇಲ್ಲಿಸಾದೃಶ್ಯ ಚಮತ್ಕಾರಕ್ಕಿಂತ ಶ್ಲೇಷ ಚಮತ್ಕಾರವೇ ಸೊಗಸಾಗಿದೆ. ಆದ್ದರಿಂದ ಇಲ್ಲಿ ಕಾವ್ಯವು ಪ್ರಸ್ತುತ. ಸತ್ಪುರುಷನ ಗಭೀರದೆಸೆ ಅಪ್ರಸ್ತುತವೆಂದು ತಿಳಿದು ಪ್ರಸ್ತುತಾಪ್ರಸ್ತುತಗಳಿಗೆ ವಿಶೇಷಣ ಸಾಮ್ಯವಿರುವ ಶ್ಲೇಷವೆನ್ನುವುದು ಸೂಕ್ತ.

ಅನೇಕಾರ್ಥಗಳನ್ನು ಕೊಡುವಲ್ಲಿ ಶ್ಲೇಷವಿರುತ್ತದೆ. ಅದು ಇತರ ಅಲಂಕಾರಗಳನ್ನು ಪೋಷಿಸುತ್ತದೆ; ಕೆಲವೊಮ್ಮೆ ಇತರ ಅಲಂಕಾರಗಳಿಂದ ಪೋಷಣೆಯನ್ನು ಪಡೆಯುತ್ತದೆ. ಅಂಥಲ್ಲಿ ಯಾವುದು ಹೆಚ್ಚು ಚಮತ್ಕಾರಿಯೊ ಅದು ಅಲಂಕಾರವೆನಿಸಿಕೊಳ್ಳುತ್ತದೆ. ಇತರ ಅಲಂಕಾರಗಳೇ ಶ್ಲೇಷಕ್ಕಿಂತ ರಮ್ಯವೆನಿಸಿದರೆ ಅವುಗಳನ್ನು ಹೇಳಬೇಕು. ಶ್ಲೇಷವೇ ಪ್ರಾಧಾನ್ಯವನ್ನು ಪಡೆದಿದ್ದರೆ ಶ್ಲೇಷವೆಂದು ಹೇಳಬೇಕು.

**ಅನ್ಯ ಉದಾಹರಣೆಗಳು:**

**ಆ ಸಕಳಾರ್ಥ ಸಂಯುತಮಳಂಕೃತಿಯುಕ್ತಮುದಾತ್ತ ವೃತ್ತಿವಿ**
**ನ್ಯಾಸಮನೇಕಲಕ್ಷಣಗುಣ ಪ್ರಭವಂ ಮೃದುಪಾದಮಾದವಾ।**

೬೮ ಶ್ರೀಸುಭಗಂ ಕಳಾಕಳಿತಮೆಂಬ ನೆಗಳ್ತೆಯನಾಳ್ದ ಕಬ್ಬಮಂ
ಕೂಸುಮನೀವುದೀವು ಕೇಸರಿಗಲ್ಲದವಸ್ತುವಿಗೀವುದೇ ॥

— ಪಂ.ಭಾ.೧-೯.

ಸೋದರಿಯ ಮನೆಗೆ ಪಗೆಪಗೆ
ಗಾದಂನೆಲೆ ಸಲೆಕಲಂಕಿ ದೋಷಾಕರನಾ ।
ಹ್ಲಾದಿಗತಮಿತ್ರ ತೇಜದೊ
ಳಾದಾ ರಾಜಂಗಮೇಂ ಕ್ಷಯಂಸಮನಿಸದೇ ॥

— ರಾ.ವಿ.೬-೧೨೮.

ಎದೆ ಎದೆಗೂ ವ್ಯತ್ಯಯ ಹಾಳಾಗಲಿ ।
ಎದೆ ಎದೆಗೂಡಲಿ ಹಾಲಾಗಲಿ ॥

— ವಿ. ಗ. ನಾಯಕ.'ಗೋಲಗುಮ್ಮಟ'(ಪು-೨)

ಬಸಿರು ತುಂಬಿಕೊಂಡವರು
ಬಾಡಿ ಕೊಳ್ಳುವುದಿಲ್ಲ.

— ವಿ. ಗ. ನಾಯಕ.'ಗೋಲಗುಮ್ಮಟ'(ಪು-೧೫)

ನಮ್ಮೂರ ರಥೋತ್ಸವದಲ್ಲಿ ಎಳೆಯುವ ತೇರನ್ನು ನೋಡುವುದೇ ಚಂದ
ಎಂದು ನಾನೆಂದರೆ, ಗುಂಡ –
''ಹೌದು ಬಲುಚಂದ ಎಳೆಯುವತೇರನ್ನು ನೋಡುವುದು '' ಎಂದ

— ಅನಂತ ಕಲ್ಲೋಳ ' ಸೂಜಿಮಲ್ಲಿಗೆ ' (ಪು.೩)

ಹೆಚ್ಚಿನ ಸಂದರ್ಭಗಳಲ್ಲಿ
ಘೋರ ರೋಗಗಳಿಗೆ
ಮನುಷ್ಯ ತುತ್ತಾಗಲು
ಕೆಟ್ಟ ನೀರೇ ಕಾರಣ.

— ಎನ್. ಜಿ. ಪಟವರ್ಧನ ' ಸೂಜಿಮಲ್ಲಿಗೆ '(ಪು.೫೦)

## ೧೨. ಅರ್ಥಾಂತರನ್ಯಾಸ.

ಲಕ್ಷಣ:- ಸಾಮಾನ್ಯಾರ್ಥ ಮತ್ತು ವಿಶೇಷಾರ್ಥಗಳೆರಡೂ ಉಕ್ತವಾಗಿರುವಾಗ, ಒಂದು ಇನ್ನೊಂದನ್ನು ಸಮರ್ಥಿಸುವುದು ಅರ್ಥಾಂತರನ್ಯಾಸ. ( **ಉಕ್ತಿರರ್ಥಾಂತರನ್ಯಾಸಃ ಸ್ಯಾತ್ ಸಾಮಾನ್ಯ -ವಿಶೇಷಯೋಃ** -ಕುವಲಯಾನಂದ ).

ಅರ್ಥಾಂತರನ್ಯಾಸವೆಂದರೆ ಅರ್ಥಾಂತರದ ನ್ಯಾಸ. ಅರ್ಥಾಂತರವೆಂದರೆ ಬೇರೊಂದು ಅರ್ಥ. ನ್ಯಾಸವೆಂದರೆ ಇಡುವುದು. ಒಂದು ಅರ್ಥವನ್ನು ಸಮರ್ಥಿಸಲು ಬೇರೊಂದು ಅರ್ಥವನ್ನು ಇಟ್ಟಿದ್ದರೆ ಅದು ಅರ್ಥಾಂತರನ್ಯಾಸ. ಈ ಸಮರ್ಥನೆಯು ಸಂಶಯರಹಿತವಾದ ನಿಶ್ಚಯವೆನಿಸುತ್ತದೆ. ಕವಿಯು ನಿರೂಪಿಸಿದ ತಥ್ಯವು ಇದರಿಂದ ಸ್ವೀಕಾರಾರ್ಹವಾಗುತ್ತದೆ. ಸಂಶಯವು ತೊಲಗಿ ನಿಶ್ಚಯವು ನೆಲೆಸುವಂತೆ ಮಾಡುವ ಸಮರ್ಥನೆಯು ಅರ್ಥಾಂತರನ್ಯಾಸಕ್ಕೆ ಅವಶ್ಯ. ಅದನ್ನೇ ಸಮರ್ಥ್ಯ, ಸಮರ್ಥಕ ಭಾವವೆಂದು ಕರೆಯುತ್ತಾರೆ. ಸಮರ್ಥ್ಯ-ಸಮರ್ಥಕಗಳೆರಡೂ ಉಕ್ತವಾಗಿರಬೇಕಾದುದೂ ಅಷ್ಟೇ ಅವಶ್ಯ. ಇಲ್ಲವಾದರೆ ಗೊಂದಲವೇರ್ಪಡುತ್ತದೆ.

ಇವುಗಳ ಕ್ರಮ ಹೇಗೆ? ನಿರೂಪಿಸಲಿರುವ ತಥ್ಯವನ್ನು ಮೊದಲು ಹೇಳಬೇಕೋ? ಅದನ್ನು ಸಮರ್ಥಿಸುವ ಸಂಗತಿಯನ್ನು ಮೊದಲು ಹೇಳಬೇಕೋ? ಈ ಸಂಬಂಧದಲ್ಲಿ ಖಚಿತವಾದ ನಿಯಮಗಳೇನೂ ಇಲ್ಲ. ಅದು ನಿರೂಪಕನ ಸ್ವಾತಂತ್ರ್ಯಕ್ಕೆ ಸೇರಿದ್ದು. ಅವನು ತನ್ನ ಅನುಕೂಲಕ್ಕೆ ತಕ್ಕಂತೆ ವ್ಯವಹರಿಸುತ್ತಾನೆ. ಕೆಲವೊಮ್ಮೆ ತಥ್ಯ ನಿರೂಪಣೆ ಮೊದಲು ಬರುತ್ತದೆಯಾದರೆ ಇನ್ನು ಕೆಲವು ಬಾರಿ ಅದಕ್ಕೆ ವಿರುದ್ಧವಾದುದು ನಡೆಯುತ್ತದೆ. ಅದಕ್ಕೆ ಪ್ರಾಮುಖ್ಯವಿಲ್ಲ. ಒಂದು ಇನ್ನೊಂದನ್ನು ಸಮರ್ಥಿಸುವುದಕ್ಕೆ ಮಹತ್ವ.

ಸಮರ್ಥನೆಗೆ ಸಾವಿರ ಮುಖಗಳು. ಎಲ್ಲ ಸಮರ್ಥನೆಗಳನ್ನೂ ಅರ್ಥಾಂತರನ್ಯಾಸವೆಂದೇ ಕರೆಯೋಣವೇ ? ಅದಕ್ಕೊಂದು ಸೀಮೆಯಿದೆ. ಅರ್ಥಾಂತರನ್ಯಾಸದಲ್ಲಿ ಅದು ಸಾಮಾನ್ಯ - ವಿಶೇಷಗಳಿಗೆ ಸೀಮಿತ. ಸಾಮಾನ್ಯವು ವಿಶೇಷವನ್ನು, ವಿಶೇಷವು ಸಾಮಾನ್ಯವನ್ನು ಸಮರ್ಥಿಸುವಲ್ಲಿ ಮಾತ್ರ ಈ ಅಲಂಕಾರವನ್ನು ಹೇಳಬೇಕೆಂಬುದು ಬಹುತೇಕ ಆಲಂಕಾರಿಕರ ಅಭಿಪ್ರಾಯ. ರುಯ್ಯಕ, ವಿಶ್ವನಾಥನಂಥವರು ಕಾರ್ಯವು ಕಾರಣವನ್ನು ಸಮರ್ಥಿಸುವಲ್ಲಿಯೂ, ಕಾರಣವು ಕಾರ್ಯವನ್ನು ಸಮರ್ಥಿಸುವಲ್ಲಿಯೂ, ಅರ್ಥಾಂತರನ್ಯಾಸವನ್ನು ಹೇಳುತ್ತಾರೆ. ಆದರೆ ಮಮ್ಮಟ, ಅಪ್ಪಯ್ಯ ದೀಕ್ಷಿತ, ಜಗನ್ನಾಥನಂಥವರು ಕಾರ್ಯ- ಕಾರಣ ಭಾವವನ್ನು ಅರ್ಥಾಂತರನ್ಯಾಸದ ಪರಿಧಿಯಿಂದಾಚೆಗೆ ಇಡುತ್ತಾರೆ. ಈ ಪ್ರಭೇದವನ್ನು ಕಾವ್ಯಲಿಂಗದಲ್ಲಿ ಸೇರಿಸಬಹುದೆಂದು ಜಗನ್ನಾಥ ಅಭಿಪ್ರಾಯಪಡುತ್ತಾನೆ. ಸದ್ಯಕ್ಕೆ ಸಾಮಾನ್ಯ ವಿಶೇಷ ಭಾವವಿರುವಲ್ಲಿನ ಅರ್ಥಾಂತರನ್ಯಾಸದ ಸ್ವರೂಪವನ್ನು ತಿಳಿದರೆ ಸಾಕು.

ಅರ್ಥಾಂತರನ್ಯಾಸಕ್ಕೆ ಸಾಮಾನ್ಯ -ವಿಶೇಷಗಳ ವ್ಯವಸ್ಥೆ ಅವಶ್ಯ. ಇಲ್ಲಿರುವ ಸಾಮಾನ್ಯವೆಂಥದು? ನಮಗೆ ಪರಿಚಿತವಿರುವ ಸಾಮಾನ್ಯ ನಿಯಮಗಳ ವರ್ಗಕ್ಕೆ ಸೇರುವಂಥದೇ

ಇದು. ಉದಾ : ' ಮೇಲಕ್ಕೆ ಎಸೆದ ಗುಂಡು ಕೆಳಗೆ ಬೀಳುತ್ತದೆ ' 'ಹೊಗೆಯಿದ್ದಲ್ಲಿ ಬೆಂಕಿಯಿರುತ್ತದೆ' – ಇದೇ ವರ್ಗಕ್ಕೆ ಸೇರಿದ್ದು ಸಾಮಾನ್ಯವೆನಿಸಿಕೊಳ್ಳುತ್ತದೆ. ವ್ಯತ್ಯಾಸವಿಷ್ಟೇ – ವೈಜ್ಞಾನಿಕ ನಿಯಮಗಳು ಪ್ರಯೋಗ, ಪರೀಕ್ಷೆಗಳಿಂದ ದೃಢಪಟ್ಟಿರುತ್ತವೆ. ಆದರೆ ಕವಿಯು ನಿರೂಪಿಸುವ ಸಾಮಾನ್ಯಗಳು ಜೀವನಾನುಭವದ ಮೂಸೆಯಲ್ಲಿ ಹದಗೊಂಡಿರುತ್ತವೆ. ಅವು ಭೌತಿಕವಾದ ಪರೀಕ್ಷೆಗೆ ಸಿಗುತ್ತವೆಂದು ಹೇಳುವಂತಿಲ್ಲ. ಆದರೆ ಅಂತರ್ಯವನ್ನು ತಟ್ಟುತ್ತವೆ. ಅಲ್ಲಿ ಕವಿಯ ಪರಿಪಕ್ವ ಜೀವನಾನುಭವ ಹರಳುಗಟ್ಟಿರುತ್ತದೆ. ಅವುಗಳ ಮೌಲ್ಯ ವೈಜ್ಞಾನಿಕ ಸತ್ಯಗಳಿಗಿಂತ ಕಡಿಮೆಯೇನಲ್ಲ. ಅಂತೆಯೇ ಅವು ನಮ್ಮ ಮನಸ್ಸಿನಾಳಕ್ಕಿಳಿದು ನೆಲಸುತ್ತವೆ.

ಕವಿಯು ಸಾಮಾನ್ಯವನ್ನು ನಿರೂಪಿಸುವಾಗ ಅದನ್ನು ಸಮರ್ಥಿಸುವ ಸಲುವಾಗಿ ಕೊಡುವ ಉದಾಹರಣೆಯನ್ನೇ ನಾವು ವಿಶೇಷವೆಂದು ಕರೆಯುತ್ತೇವೆ. ಕೇವಲ ಸತ್ಯವನ್ನು ಉದ್ಘಾಟಿಸಿದರೆ ಅದು ಮನಸ್ಸನ್ನು ಮುಟ್ಟುವುದಿಲ್ಲ. ಅದು ಮನಸ್ಸನ್ನು ಮುಟ್ಟುವಂತಾಗಲು ಯಥೋಚಿತವಾದ ದೃಷ್ಟಾಂತದ ಅವಶ್ಯಕತೆಯಿದೆ. ಇದನ್ನು ದೃಷ್ಟಾಂತವನ್ನು ಕುರಿತು ವಿಚಾರಿಸುವಾಗ ಗಮನಿಸಿದ್ದೇವೆ. ಅದೇ ಮಾತು ಇಲ್ಲಿಯೂ ಅನ್ವಯಿಸುತ್ತದೆ. ವಿಶಿಷ್ಟವಾದ ಉದಾಹರಣೆಯು ತಥ್ಯವನ್ನು ಸದೃಢವಾಗಿ ಸ್ಥಾಪಿಸುತ್ತದೆ: ಹಸಿಯ ಗೋಡೆಗೆಗಿಟ್ಟ ಹರಳಾಗುತ್ತದೆ.

ಉದಾ:–

**ಅತುಲಬಲ ವಿಕ್ರಮ ಪ್ರಾ**
**ನ್ವಿತನ ಸಮರ್ಥಂಗೆ ಮುನಿಯಲರಿಗುಮೆಯಧಿಕೋ**
**ನ್ನತಗಜನಿವಹಂಭೂಜ**
**ಪ್ರತತಿಯನುಡಿವಂತೆ ಪುಲ್ಲನೇನುಡಿದಪುದೇ ॥**

'ಅತುಲವಾದ ಬಲವಿಕ್ರಮಗಳಿಂದ ಕೂಡಿದವನು ಅಸಮರ್ಥನಿಗೆ ಮುನಿಯುತ್ತಾನೆಯೇ? ಅತ್ಯಂತ ಉನ್ನತವಾದ ಆನೆಗಳ ಸಮೂಹವು ಮರಗಳ ಗುಂಪನ್ನು ಕಿತ್ತುಹಾಕಿದಂತೆ ಹುಲ್ಲನ್ನು ಕೀಳುತ್ತದೆಯೇ? ' ಎಂದು ಕವಿಯು ಕೇಳುತ್ತಾನೆ. ಇಲ್ಲಿ ಮೊದಲನೆಯದು ಸಾಮಾನ್ಯವಾಕ್ಯ. ಇದು ಬಲಶಾಲಿಗಳೆಲ್ಲರಿಗೆ ಅನ್ವಯಿಸುವಂಥದು. ಎರಡನೆಯದು ವಿಶೇಷ ವಾಕ್ಯ. ಅಂಥ ಬಲಶಾಲಿಗಳ ವರ್ಗಕ್ಕೆ ಸೇರಿದ ಆನೆಯನ್ನು ಇಲ್ಲಿ ಉದಾಹರಣೆಯನ್ನಾಗಿ ಕೊಟ್ಟಿದ್ದಾನೆ. ಇಲ್ಲಿ ಸಾಮಾನ್ಯವನ್ನು ವಿಶೇಷವು ಸಮರ್ಥಿಸುತ್ತದೆ.

ಆದರೆ ಎಲ್ಲ ಸಂದರ್ಭಗಳಲ್ಲಿಯೂ ಸಾಮಾನ್ಯವಿವಕ್ಷೆಯಿರುವುದಿಲ್ಲ. ಕವಿಯು ವಿಶಿಷ್ಟವಾದ ವ್ಯವಹಾರವೊಂದನ್ನು ಸಮರ್ಥಿಸುವ ಸಾಮಾನ್ಯದ ನೆರವನ್ನು ಪಡೆಯುವುದೂ ಉಂಟು. ಅಂಥ ಸಂದರ್ಭಗಳಲ್ಲಿ ಸಾಮಾನ್ಯವು ಸಮರ್ಥಕವಾಗಿ ವಿಶೇಷವು ಸಮರ್ಥ್ಯವಾಗುತ್ತದೆ.

ಉದಾ :–

**ಜಲನಿಧಿ ಜಲಮಂಜಲಭೃ**
**ತ್ಕುಲಕ್ಕೆ ನಲಿದಿತ್ತುದತ್ತ ಮಿತ್ರನದೀನಿ– ।**

ನಿರ್ಮಲಸಲಿಲಂದೊರೆದುದು ಗಡ
ನೆಲದೊಳ್ ಕೊಟ್ಟಂಗೆ ಬಡತನಂ ಬಂದಪುದೇ ॥

'ಆ ಕಡೆ ಸಮುದ್ರವು ಮೋಡಗಳಿಗೆ ತನ್ನಲ್ಲಿರುವ ಜಲವನ್ನು ಸಂತೋಷವಾಗಿ ಕೊಟ್ಟಿತು. ಈ ಕಡೆ ನದಿಗಳ ನಿರ್ಮಲವಾದ ಜಲ ಅದಕ್ಕೆ ದೊರೆಯಿತು. ಜಗತ್ತಿನಲ್ಲಿ ಕೊಟ್ಟವನಿಗೆ ಬಡತನವುಂಟೇ?' – ಎನ್ನುತ್ತಾನೆ ಕವಿ. ಇಲ್ಲಿ ಸಮುದ್ರವು ಮೋಡಗಳಿಗೆ ಜಲವನ್ನು ನೀಡುವುದು ಮತ್ತು ಅದಕ್ಕೆ ನದಿಯ ನೀರು ಬಂದು ಸೇರುವುದು ವಿಶಿಷ್ಟ ವ್ಯವಹಾರ. ಈ ವ್ಯವಹಾರವನ್ನು ಸಮರ್ಥಿಸಲು ಸಾಮಾನ್ಯ ವಾಕ್ಯವಾದ 'ನೆಲದೊಳ್ ಕೊಟ್ಟಂಗೆ ಬಡತನಂ ಬಂದುಪುದೇ' ಎಂಬುದು ಬಂದಿದೆ. ಇಲ್ಲಿ ವಿಶೇಷವನ್ನು ಸಾಮಾನ್ಯವು ಸಮರ್ಥಿಸುತ್ತದೆ.

ಮೇಲಿನ ಉದಾಹರಣೆಯನ್ನು ನೋಡಿದಾಗ ಇಲ್ಲಿ ಸಾಮಾನ್ಯವನ್ನು ವಿಶೇಷವು ಸಮರ್ಥಿಸುತ್ತದೆಯೋ? ವಿಶೇಷವನ್ನು ಸಾಮಾನ್ಯವು ಸಮರ್ಥಿಸುವುದೋ? ಎಂಬ ಸಂಶಯ ಬರುವುದಕ್ಕೆ ಅವಕಾಶವಿದೆ. ಈಗಾಗಲೇ ನೋಡಿದಂತೆ ಸಮರ್ಥ್ಯ–ಸಮರ್ಥಕಗಳಲ್ಲಿ ಇಂಥದ್ದೇ ಮೊದಲಿಗೆ ಇರಬೇಕೆಂಬ ನಿಯಮವೇನೂ ಇಲ್ಲ. ಸಾಮಾನ್ಯ ವಚನವೇ ಕವಿವಿವಕ್ಷೆಯೆಂದು ಹೇಳಬಹುದಲ್ಲ? ಅದನ್ನು ಸಮರ್ಥಿಸುವುದಕ್ಕೆ ಸಮುದ್ರದ ದೃಷ್ಟಾಂತವನ್ನು ಕೊಟ್ಟಿದ್ದಾನೆಂದು ಹೇಳಬಹುದಲ್ಲವೇ? ಅಂಥಲ್ಲಿ ಪ್ರಸ್ತುತಾ ಪ್ರಸ್ತುತಗಳನ್ನು ಗಮನಿಸಬೇಕಾಗುತ್ತದೆ. ಸಮುದ್ರವನ್ನು ವರ್ಣಿಸುವ ಸಂದರ್ಭದಲ್ಲಿ ಈ ಪದ್ಯ ಬಂದಿದೆ. ಅಂದರೆ ಸಮುದ್ರವರ್ಣನೆ ಪ್ರಸ್ತುತ. ಆದ್ದರಿಂದ ಅದನ್ನು ವಿಶೇಷವೆಂದು ಪರಿಗಣಿಸಬೇಕಾಗುತ್ತದೆ.

ಅರ್ಥಾಂತರನ್ಯಾಸವನ್ನು ಗುರುತಿಸುವಾಗ ಹುಟ್ಟುವ ಇನ್ನೊಂದು ಸಮಸ್ಯೆಯೆಂದರೆ ಯಾವುದು ಸಾಮಾನ್ಯ? ಯಾವುದು ವಿಶೇಷ? ಕೆಲವೊಮ್ಮೆ ವಿಶೇಷಗಳೇ ಸಾಮಾನ್ಯಗಳಂತೆ ಕಾಣುವುದುಂಟು. ಮೇಲಿನ ಉದಾಹರಣೆಯಲ್ಲಿ ವರ್ಣಿತವಾದ ಸಮುದ್ರದ ವ್ಯವಹಾರವು ಸಾಮಾನ್ಯವಾಗಿ ಕಂಡರೆ ಆಶ್ಚರ್ಯವಿಲ್ಲ. ಕೆಲವೊಮ್ಮೆ ವರ್ಣಿತವಾಗುವ ಸಾಮಾನ್ಯವು ಸಾಮಾನ್ಯವೆನಿಸುವುದೇ ಇಲ್ಲ. ಉದಾ :– 'ಕ್ವನಾಸಿ ಶುಭಪ್ರದಃ' ನೀನೆಲ್ಲಿ ಶುಭಪ್ರದನಾಗಿಲ್ಲ? ಇದು ಸಾಮಾನ್ಯವೆನಿಸುವುದಿಲ್ಲ. ಆದರೆ ವಿಶಿಷ್ಟ ಸಂದರ್ಭಗಳಲ್ಲಿ ಅಂಥವುಗಳನ್ನು ಸಾಮಾನ್ಯಗಳೆಂದು ಪರಿಗಣಿಸಬೇಕಾಗುತ್ತದೆ. ಅಂಥಲ್ಲಿ ಹೆಚ್ಚಿನ ವ್ಯಾಪ್ತಿಯನ್ನು ಹೊಂದಿದ್ದು ಸಾಮಾನ್ಯವೆಂದೂ, ಕಡಿಮೆ ವ್ಯಾಪ್ತಿಯನ್ನು ಹೊಂದಿದ್ದು ವಿಶೇಷವೆಂದೂ ತಿಳಿಯಬೇಕಾಗುತ್ತದೆ.

ಅರ್ಥಾಂತರನ್ಯಾಸದಲ್ಲಿ ಒಂದು ಸಾಮಾನ್ಯ ವಾಕ್ಯವೂ ಇನ್ನೊಂದು ವಿಶೇಷ ವಾಕ್ಯವೂ ಇರುತ್ತದೆ ಎಂಬುದನ್ನು ನೋಡಿದ್ದೇವೆ. ಈ ಎರಡೂ ವಾಕ್ಯಗಳಲ್ಲಿ ಬಿಂಬ ಪ್ರತಿಬಿಂಬ ಭಾವವನ್ನು ಕೆಲವೆಡೆ ಕಾಣಬಹುದಾದರೆ ಕೆಲವೆಡೆ ವಸ್ತು– ಪ್ರತಿವಸ್ತುಭಾವವಿರುತ್ತದೆ. ಹಾಗಲ್ಲದಿದ್ದರೆ ಸಮರ್ಥನೆಯು ಸಾಧ್ಯವಾಗುವುದಿಲ್ಲ. ಉದಾ :– ಮೇಲಿನ ಉದಾಹರಣೆಯಲ್ಲಿನ 'ಮುನಿಯಲರಿಗುಮೇ? ಉಡಿದಪುದೇ' ಎಂಬಲ್ಲಿ ಧರ್ಮಗಳು ಬೇರೆಯಾದರೂ ಸಾಮ್ಯವಿದೆ. ಈ ಕಾರಣದಿಂದ ದೃಷ್ಟಾಂತ ಪ್ರತಿವಸ್ತೂಪಮೆಗಳಿಗೂ ಅರ್ಥಾಂತರನ್ಯಾಸಕ್ಕೂ ಸಾಮ್ಯ ಏರ್ಪಡುತ್ತದೆ.

ಆದರೆ ಅವುಗಳ ಚಮತ್ಕಾರದ ಕೇಂದ್ರದಲ್ಲಿ ವ್ಯತ್ಯಾಸವಿದೆ. ಬಿಂಬ ಪ್ರತಿಬಿಂಬ ಭಾವ ಹಾಗೂ ವಸ್ತು ಪ್ರತಿವಸ್ತು ಭಾವಗಳು ದೃಷ್ಟಾಂತ ಪ್ರತಿವಸ್ತೂಪಮೆಗಳ ಕೇಂದ್ರ. ಅಲ್ಲಿ ಸಮರ್ಥ್ಯ-ಸಮರ್ಥಕ ಭಾವವಿದ್ದರೂ ಅದು ಗೌಣ, ಅರ್ಥಾಂತರನ್ಯಾಸದಲ್ಲಿ ಸಮರ್ಥ್ಯ- ಸಮರ್ಥಕ ಭಾವವು ಕೇಂದ್ರ. ಇತರ ಭಾವಗಳು ಗೌಣ. ಹಾಗಾಗಿ ದೃಷ್ಟಾಂತ-ಪ್ರತಿವಸ್ತೂಪಮೆಗಳಲ್ಲಿರುವ ವಾಕ್ಯಗಳು ಸಾಮಾನ್ಯಗಳೋ ಅಥವಾ ಕೇವಲ ವಿಶೇಷಗಳೋ ಆಗಿರುತ್ತವೆ. ಅರ್ಥಾಂತರನ್ಯಾಸದಲ್ಲಿ ಒಂದು ಸಾಮಾನ್ಯ ವಾಕ್ಯವಾದರೆ, ಇನ್ನೊಂದು ವಿಶೇಷ ವಾಕ್ಯವಾಗಿರುತ್ತದೆ. ಇದು ಅವುಗಳನ್ನು ಬೇರ್ಪಡಿಸುವ ಅಂಶ.

ಅರ್ಥಾಂತರನ್ಯಾಸವನ್ನು ಹೋಲುವ 'ವಿಕಸ್ವರ' ವೆಂಬ ಅಲಂಕಾರವನ್ನು ಜಯದೇವ ದೀಕ್ಷಿತರು ಹೇಳುತ್ತಾರೆ. ವಿಶೇಷವನ್ನು ಸಾಮಾನ್ಯವು ಸಮರ್ಥಿಸಿ, ಪುನಃ ವಿಶೇಷದಿಂದ ಸಾಮಾನ್ಯವನ್ನು ಸಮರ್ಥಿಸುವುದು ಇಲ್ಲಿನ ಕ್ರಮ. ಆದರೆ ಅದಕ್ಕೆ ಸ್ವತಂತ್ರವಾದ ಅಲಂಕಾರವೆನಿಸಿಕೊಳ್ಳುವ ಯೋಗ್ಯತೆಯಿಲ್ಲವೆಂದು ಪಂಡಿತರಾಜ ಜಗನ್ನಾಥನು ತೀರ್ಮಾನಿಸಿದ್ದಾನೆ. ಅದನ್ನು ಅರ್ಥಾಂತರನ್ಯಾಸದೊಳಗೇ ಸೇರಿಸಬಹುದು.

ಅನ್ಯ ಉದಾಹರಣೆಗಳು:

ವಿಹಿತಾಚಾರಮನನ್ವಯಾಗತ ಗುಣಪ್ರಖ್ಯಾತಿಯಂದುಷ್ಟನಿ
ಗ್ರಹಶಿಷ್ಟಪ್ರತಿಪಾಲನ ಕ್ಷಮತೆಯಂ ಕಯ್ಗಾಯದನ್ಯಾಂಗನಾ।
ಸ್ಪೃಹೆಯಂ ತಾಳ್ದಿದನಲ್ತೆ ಕಾಲವಶದಿಂ ಲಂಕೇಶ್ವರಂ ವಿಸ್ಮಯಾ
ವಹಮಲ್ತಬ್ಧಿಯುಮೊರ್ಮೆ ಕಾಲವಶದಿಂ ಮರ್ಯಾದೆಯಂದಾಂಟದೇ ॥

—— ಪಂ. ರಾ. ಸಂ. ೪ –೪೮.

ಕರಿದಾದೊಡೆ ಕತ್ತುರಿಯಂ
ಮುರುಡಾದೊಡೆ ಮಲಯಜಂಗಳಂ ಕೊಂಕಿದೊಡೇಂ।
ಸ್ಮರಚಾಪಮನಿಳಿಕೆಯ್ವರೆ
ಮರುಳ್‌ಪೊಲ್ಲಮೆಯ ಲೇಸು ನಲ್ಲರ ಮೈಯೊಳ್ ॥

— ಯಶೋ. ೨–೨೪

ಗುಣೆಗಳ ಗುಣರತ್ನ ವಿಭೂ
ಷಣಮೆಸೆವುದೆ ವಿಕಳಹೃದಯರಾದವರ್ಗೆನೃಪಾ
ಗ್ರಣಿಕೇಳ್ ತುಪ್ಪೇರಿದದ
ರ್ಪಣದೊಳ್ ಪಜ್ಜಳಿಸಲಾರ್ಪುದೇ ಪ್ರತಿಬಿಂಬಂ॥

— ಯಶೋ. ೧– ೩೯.

ಸರಳತೆ ಸಾಲದು ಕಾರ್ಯದ ಸಿದ್ಧಿಗೆ
ವಕ್ರತೆ ಸಹ ಬೇಕು ನಮಗೆ
ಮಾಡಿದವಾದರೆ ಬೆರಳನು ನೆಟ್ಟಗೆ
ಹಿಡಿಯುವುದೇನನು ಹೇಗೆ ?

— ಎಸ್. ವಿ. ಪರಮೇಶ್ವರಭಟ್.'ಇಂದ್ರಚಾಪ'.

ವೃದ್ಧಾಪ್ಯ ಕಾಲದಲಿ ಹಲ್ಲುಗಳು ಬಿದ್ದರೂ
ನಾಲಿಗೆಯು ನಲಿದಾಡುತಿಹುದು ನೋಡು
ಗಟ್ಟಿಗಿಂತಲು ಮಿದುವೆ ಹೆಚ್ಚು ದಿನ ಬಾಳುವುದು
ಗಟ್ಟಿಯೆನ್ನುವ ಹೆಮ್ಮೆ ಕುಲಕೆ ಕೇಡು .

— ದಿನಕರ ದೇಸಾಯಿ.

ಒರತೆಗಳು ಬೆರೆಯುವವು ಹೊಳೆಯ ಬಳಿಸಂದು ;
ಹೊಳೆ ಹರಿದು ಕಡಲಲ್ಲಿ ಕೂಡುವವು ಬಂದು
ಗಗನದಲಿ ಗಾಳಿಗಳು ಹಗಲೆಲ್ಲ ಬೆಂದು
ಸುಳಿಯುವವು ಬಯಸಿಕೊಂಡೊಂದೊಂದನೊಂದು
ಧರಣಿಯೊಳಗಾವುದೂ ಒಂಟಿಯಿಹುದಿಲ್ಲ .

— ಬಿ. ಎಂ. ಶ್ರೀ.

ನೋಡಿದೆಯಾ ; ಕಣ್ಣುಗಳೇ ಹೇಗೆ ಮಾತಾಡಿಕೊಂಡವು
ಮಾತುಗಳನ್ನೂ ಮೀರಿದ ಅರ್ಥವಂತಿಕೆ ಪ್ರದರ್ಶಿಸಿದ್ದವು
ಪ್ರೇಮಿಗಳು ಮೌನವಹಿಸಿದರೆ
ಅವರ ಕಣ್ಣುಗಳೇ ಮಾತನಾಡುತ್ತವೆ .

— ಕೆ . ಎಂ. ಮುನಿಕೃಷ್ಣಪ್ಪ . ' ಮೊದಲು ಗೊತ್ತಿರಲಿಲ್ಲ ' (ಪುಟ–೯)

# ೧೩. ಸಂದೇಹ.

ಲಕ್ಷಣ :– ವಿಷಯವು ಸಂದೇಹಕ್ಕೊಳಪಟ್ಟಾಗ ಸಂದೇಹ.

(ವಿಷಯಸ್ಯ ಸಂದಿಹ್ಯಮಾನತ್ವೇ ಸಂದೇಹ : –ರುಯ್ಯಕ)

ಸಂದೇಹವು ಹೆಸರೇ ಸೂಚಿಸುವಂತೆ ಸಂಶಯವನ್ನು ಆಧರಿಸಿದ ಅಲಂಕಾರ. ಸಂಶಯವೇ ಈ ಅಲಂಕಾರದ ಜೀವಾಳವಾದರೂ ಸಂಶಯವಿರುವಲ್ಲೆಲ್ಲಾ ಸಂದೇಹವಿಲ್ಲ. ಈ ಸಂಶಯವು ನಿಜವಾದ ಸಂಶಯವಾಗಿರಕೂಡದು. ಅದು ಕವಿಪ್ರತಿಭೋತ್ಥಿತವಾಗಿರಬೇಕು. ಮತ್ತು ಸಾದೃಶ್ಯಮೂಲವಾಗಿರಬೇಕು. ಆಲಂಕಾರಿಕರಲ್ಲಿ ಶೋಭಾಕರಮಿತ್ರನು ತನ್ನ 'ಅಲಂಕಾರ ರತ್ನಾಕರ' ದಲ್ಲಿ ಸಾದೃಶ್ಯಮೂಲವಲ್ಲದ ಕವಿಪ್ರತಿಭೋತ್ಥಿತವಾದ ಸಂದೇಹವೂ ಈ ಅಲಂಕಾರಕ್ಕೆ ವಸ್ತುವಾಗಬಲ್ಲುದೆಂದು ಹೇಳಿದ್ದಾನೆ. (**ತೇನ ಸಾಧರ್ಮ್ಯಂ ವಿಹಾಯಾಪಿ ನಿಮಿತ್ತಾಂತರ ಮವಲಂಬ್ಯ ಕವಿಪ್ರತಿಭೋತ್ಥಾಪಿತ : ಸಂದೇಹೋಲಂಕಾರಃ ಏವ**). ಅವನ ಅಭಿಪ್ರಾಯವನ್ನು ಇತರ ಆಲಂಕಾರಿಕರು ತಳ್ಳಿಹಾಕುತ್ತಾರಾದರೂ ಅದು ಮರು ವಿಮರ್ಶೆಗೆ ಅರ್ಹವಾಗಿದೆಯೆನಿಸುತ್ತದೆ. ಉದಾ:– "ಸುಂದರಿ, ಸ್ತನಭಾರ ಪೀಡಿತವಾದ ನಿನ್ನ ಮಧ್ಯಭಾಗವು ಇದೆಯೋ ಇಲ್ಲವೋ ಎಂಬ ಸಂಶಯ ಯಾರಿಗೆ ಮೂಡಲಿಕ್ಕಿಲ್ಲ?". ಇಲ್ಲಿ ಕವಿಪ್ರತಿಭೋತ್ಥಿತವಾದ ಸಂಶಯವಿದೆಯಾದರೂ ಸಂದೇಹಾಲಂಕಾರವಿಲ್ಲವೆಂದು ಅಪ್ಪಯ್ಯ ದೀಕ್ಷಿತನು ಹೇಳುತ್ತಾನೆ. ಇದನ್ನೂ ಸಂದೇಹಾಲಂಕಾರವೆಂದೇ ಪರಿಗಣಿಸಬಹುದೆಂದು ಶೋಭಾಕರಮಿತ್ರನ ಅಭಿಪ್ರಾಯ.

ಈ ಅಲಂಕಾರವನ್ನು ಶುದ್ಧ, ನಿಶ್ಚಯಗರ್ಭ ಮತ್ತು ನಿಶ್ಚಯಾಂತಗಳೆಂದು ವಿಭಾಗಿಸುವುದು ಕ್ರಮ. ಸಂಶಯವೇ ಆದ್ಯಂತವೂ ಇದ್ದರೆ ಶುದ್ಧ. ನಿಶ್ಚಯವು ಗಮ್ಯವಾಗಿದ್ದರೆ ನಿಶ್ಚಯಗರ್ಭ. ನಿಶ್ಚಯವು ವಾಚ್ಯವಾಗಿದ್ದರೆ ನಿಶ್ಚಯಾಂತ.

**ಮಸೆದಳ ಮಿಂಚೊ ರಂಜಿಸಿದ ರತ್ನಶಲಾಕೆಯೊ ಕಾಮದೇವನ**
**ರ್ಚಿಸಿದಲರಂಬೊ ಪೂತಲತೆಯೊ ನನೆಯೇರಿ ಮಡಲ್ತ ಮಾವೊನು ।**
**ಣ್ಣಿಸಿದಮೃತಾಂಶು ಲೇಖೆಯೊ ವಿಲೋಚನಮಿಟ್ಟ ಸಜೀವ ಚಿತ್ರಮೊ**
**ಪೊಸನದೊಟ್ಟ ಪದ್ಮಿನಿಯೊ ಕೈಗೆಯ ಕಣ್ಗೆಸೆದಿರ್ದ ಕಾಂತೆಯೊ ॥**

—— ಲೀಲಾ. ೧೦–೩೭.

ಇಲ್ಲಿ ಕಾಂತೆಯ ವರ್ಣನೆ ಪ್ರಕೃತ ವಿಷಯ –ಅವಳನ್ನು ಕಂಡಾಗ ಎಳೆಮಿಂಚೋ, ರತ್ನಶಲಾಕೆಯೋ ಇತ್ಯಾದಿಯಾಗಿ ನಾನಾ ಉಪಮಾನಗಳನ್ನಿಟ್ಟು ಸಂದೇಹಿಸಿದ್ದಾನೆ. . ಕವಿಯು ನಿಶ್ಚಯಕ್ಕೆ ತಲುಪಿದ ಸಂಗತಿಯನ್ನು ಹೇಳಿಲ್ಲವಾದ ಕಾರಣ ಇದು ಶುದ್ಧಸಂಶಯವಾಗುತ್ತದೆ.

ಅನ್ಯ ಉದಾಹರಣೆಗಳು:

ಗಿಳಿಗಳು ಉಲಿಯುವ
ಮೆಲು ಮಾತುಗಳೋ
ಕಳಕಂಠಗಳಾ
ಚೆಲುವಿನ ಕುಕಿಲೋ!
ಅಳಿಗಳ ಬಳಗದ ಬೆಳಗಿನ ಉಲಿವೋ?
ಎನಿತು ಇನಿದು ಈ ಕನ್ನಡ ನುಡಿಯು.

— ಆನಂದಕಂದ.

ಹಿಮದ ಧವಳತೆಯೊಳು ತೊಳಗು
ವೆರಡು ನೀಲ ಮಣಿಗಳೆ
ಕಮಲಗರ್ಭದಿಂದಲಿಣುಕು
ತಿರುವ ತುಂಬಿ ಮರಿಗಳೇ,
ಒಡಲಕಡಹದಿಂದ ಬಂದ
ಅಮೃತದೆರಡು ಹನಿಗಳೇ,
ಒಲವಿನೊಳಗುನುಡಿಗಳೆನಿತೊ
ತಳೆದ ಹೊನ್ನ ಗಣಿಗಳೆ?

— ಗೋಪಾಲಕೃಷ್ಣ ಅಡಿಗ.

# ೧೪ ಸ್ಮರಣ.

ಲಕ್ಷಣ :– ಸಮಾನ ವಸ್ತುವಿನ ಅನುಭವದಿಂದ ಬೇರೊಂದು ವಸ್ತುವಿನ ನೆನಪುಂಟಾಗುವುದು ಸ್ಮರಣ.

( ಸದೃಶಾನುಭವಾದ್ವಸ್ತ್ವಂತರಸ್ಮೃತಿ : ಸ್ಮರಣಮ್ –ರುಯ್ಯಕ ).

ಸ್ಮರಣ ಅಥವಾ ಸ್ಮೃತಿಯೆಂಬ ಅಲಂಕಾರದಲ್ಲಿ ಹೆಸರೇ ಸೂಚಿಸುವಂತೆ ಸ್ಮರಣವು ಪ್ರಧಾನವಾದುದು. ಒಂದು ಪದಾರ್ಥವು ಅನುಭವಕ್ಕೆ ಬಂದಾಗ ಅದಕ್ಕೆ ಸಮಾನವಾದ ಮತ್ತೊಂದು ವಸ್ತುವಿನ ನೆನಪಾಗುವುದು ಸ್ಮರಣವೆನಿಸುತ್ತದೆ. ಇಲ್ಲಿ ಅನುಭವವು ಈ ಜನ್ಮದ್ದೇ ಆಗಿರಬೇಕೆಂದೇನೂ ಇಲ್ಲ. ಜನ್ಮಾಂತರದ್ದಾದರೂ ಆದೀತೆಂದು ಮಮ್ಮಟನು ಹೇಳುತ್ತಾನೆ. ವಸ್ತುವಿನ ಅನುಭವದ ಬದಲು ಒಂದು ವಸ್ತುವಿನ ಸ್ಮರಣೆಯಿಂದ ಇನ್ನೊಂದು ವಸ್ತುವಿನ ಸ್ಮರಣೆಯಾದರೂ ಸ್ಮರಣವೆಂದೇ ಜಗನ್ನಾಥ ಹೇಳುತ್ತಾನೆ. ಅನುಭವವೆಂದರೆ ಕೇವಲ ಪ್ರತ್ಯಕ್ಷಕ್ಕೆ ಸೇರುತ್ತದೆ. ಆದ್ದರಿಂದ ಅನುಭವ –ಸ್ಮೃತಿಗಳೆರಡೂ ಮತ್ತೊಂದು ಸದೃಶ ವಸ್ತುವಿನ ನೆನಪನ್ನುಂಟು ಮಾಡುವುದನ್ನು ಗಣಿಸಬೇಕೆಂಬುದು ಅಭಿಪ್ರಾಯ.

ಬಹುತೇಕ ಆಲಂಕಾರಿಕರು ಸದೃಶ ವಸ್ತುವಿನ ಸ್ಮರಣೆಯು ಅವಶ್ಯವೆನ್ನುತ್ತಾರೆ. ಆದರೆ ವಿಶ್ವನಾಥನು, ರಾಘವಾನಂದ ಮಹಾಪಾತ್ರನೆಂಬ ಆಚಾರ್ಯನು ವಿಸದೃಶ ವಸ್ತುವಿನ ಸ್ಮರಣವುಂಟಾದಾಗಲೂ ಸ್ಮರಣವನ್ನೇ ಹೇಳಬೇಕೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದನ್ನು ಉಲ್ಲೇಖಿಸಿ ವಿಸದೃಶ ಸ್ಮರಣಕ್ಕೆ ಉದಾಹರಣೆಯನ್ನು ಕೊಟ್ಟಿದ್ದಾನೆ. ಇದು ಸ್ಮರಣಾಲಂಕಾರದ ಕ್ಷೇತ್ರವನ್ನು ಮತ್ತಿಷ್ಟು ವಿಸ್ತರಿಸುತ್ತದೆ. ಸ್ಮೃತಿಯೆಂಬುದು ಸಂಚಾರೀ ಭಾವವೂ ಹೌದು. ಆದರಿಂದ ಬೇರ್ಪಡಿಸುವ ಸಲುವಾಗಿ ಸ್ಮರಣದ ಕ್ಷೇತ್ರವನ್ನು ಸದೃಶವಸ್ತು ಸ್ಮರಣಕ್ಕೆ ಸೀಮಿತಗೊಳಿಸಲಾಗಿದೆ. ಚಿಂತೆಯೇ ಮುಂತಾದ ಕಾರಣದಿಂದ ಹುಟ್ಟುವ ಬೇರೆ ಬೇರೆ ನೆನಪುಗಳು ಸಂಚಾರೀಭಾವದ ವರ್ಗಕ್ಕೆ ಸೇರುತ್ತವೆ. ಸಾದೃಶ–ವೈದೃಶಗಳು ಅಲಂಕಾರಕ್ಕೆ ವಿಷಯವಾಗುತ್ತವೆಯೆಂದು ಹೇಳಬಹುದು.

ಉದಾ :–

**ಜನಕಜೆಯ ವದನಮಂ ಸಿತ**
**ವನರುಹಮಂ ಚಂದ್ರಕಾಂತ ಮಣಿದರ್ಪಣಮಂ ।**
**ನೆನೆಯಿಸಿದುದು ರಾಮಂಗಮ**
**ರನದಿಯ ಕಲಹಂಸನಂ ಸುಧಾಕರ ಬಿಂಬಂ ॥**

ಇಲ್ಲಿ ಚಂದ್ರಬಿಂಬವನ್ನು ಕಂಡ ರಾಮನಿಗೆ ಜನಕಜೆಯ ವದನ, ಬಿಳಿಯ ಕಮಲ, ಚಂದ್ರಕಾಂತಮಣಿದರ್ಪಣ ಮತ್ತು ಅಮರನದಿಯ ಕಲಹಂಸಗಳ ಸ್ಮರಣೆಯುಂಟಾಯಿ

–ತೆಂಬುದನ್ನು ಹೇಳಲಾಗಿದೆ. ಇವು ಸದೃಶ ವಸ್ತುಗಳಾಗಿವೆ. ವಾಸ್ತವಾನುಭವಕ್ಕೆ ಬಾರದ ಕೇವಲ ಕಾಲ್ಪನಿಕ ವಸ್ತುಗಳ ಸ್ಮರಣೆಯನ್ನು ಹೇಳಿದ್ದರೂ ಅದೂ ಸ್ಮರಣವೇ ಆಗುತ್ತದೆಯೆಂದು ಹೇಳುತ್ತಾರೆ. ಉದಾ:–" ಸರೋವರದಲ್ಲಿ ಅರಳಿದ ಕುಮುದಗಳನ್ನು ಕಂಡು ಸಹಸ್ರನೇತ್ರನ ನಯನಗಳ ನೆನಪಾಯಿತು " ಇಲ್ಲಿ ಸಹಸ್ರನೇತ್ರನ ನಯನಗಳು, ವಾಸ್ತವಾನುಭವಕ್ಕೆ ವಿಷಯವಲ್ಲದಿದ್ದರೂ ಅಲಂಕಾರತ್ವಕ್ಕೆ ಭಂಗವಿಲ್ಲ.

ಅನ್ಯ ಉದಾಹರಣೆಗಳು:

ತನಿವೆಳಗಿಂ ತೊಳಗುವ ಪಳು
ಕಿನಕುಟ್ಟಿಮ ತಳದೊಳೆಸೆವ ಚೂತಕುಲಜಾತಂ ।
ನೆನೆಯಿಸಿದುದು ಪಾಲ್ಗಡಲೊಳ್
ಜನಿಯಿಸಿದಾ ಪಾರಿಜಾತದಂದಮನೆಂದುಂ ॥

— ಕುಸುಮಾ. ೧ – ೧೧೪.

ಬೆಳ್ಮುಗಿಲ ಅಂಚಿಗೆ ತುಂಬು ಚಂದ್ರ ಬಂದಾಗ
ರಾಮಚಂದ್ರ ಬಂದು ಹೋದುದು ನೆನಪಾಯಿತವಳಿಗೆ.

— ಎಚ್. ಎಸ್. ವೆಂಕಟೇಶಮೂರ್ತಿ, 'ಕ್ರಿಯಾಪರ್ವ' (ಪುಟ – ೪೬)

"ಅಲ್ಪಸಂಖ್ಯರ ಹಿತಸಂರಕ್ಷಣೆಯೇ ನಮ್ಮಯ ಪಕ್ಷದ ಧ್ಯೇಯ ;
ಆಗಲು ಬಿಡೆವು ನಾವೆಂದಿಗೂ ಅವರಿಗೆ ಅನ್ಯಾಯ "
ಗೋಡೆಯ ಬರಹವ ಓದಿದ ಒಡನೆ ಮೂಡದೆ ಇರುವುದೇ ಪುಲಕ?
ನೆನಪಿಸಿ ಆ ಸಾಮಿಲ್ಲಿನ ಮೇಲಿನ 'ಮರಬೆಳಸಿ' ಫಲಕ.

— ಕೆ. ಎಸ್. ನಿಸಾರಅಹಮ್ಮದ್ 'ನವೋಲ್ಲಾಸ' (ಪುಟ ೮೬).

ಪಿಂಗಾಣಿ ಹೂಜಿಯ ನೆನಪು
ಸುಂದರಿಯ ಮುಂಗೈಯ ನುಣುಪು.

— ಎ. ಕೆ. ರಾಮಾನುಜನ್ 'ಸಂಕ್ರಮಣಕಾವ್ಯ' (ಪುಟ ೮೩)

ನಟ್ಟ ನಡುರಾತ್ರಿಯಲಿ
ಕೈ ಕೊಟ್ಟು ಹೋದವನ
ನೆನೆನೆನೆದು ಅಳುವಾಗ
ಬಟ್ಟಬಯಲಾದ ಆಗಸದಲ್ಲಿ
ಒಂಟಿಯಾಗಿ ನಗುವ ಚಂದ್ರನ ಕಂಡು
ತಟ್ಟನೆ ಅಳು ನಿಲ್ಲಿಸಿದೆ

— ಎಚ್. ಎಸ್. ಮುಕ್ತಾಯಕ್ಕ 'ನಾನು ಮತ್ತು ಅವನು'.

# ೧೫. ಭ್ರಾಂತಿಮಾನ್.

ಲಕ್ಷಣ :– ಸಾದೃಶ್ಯದ ಕಾರಣದಿಂದ ಒಂದು ವಸ್ತುವನ್ನು ಇನ್ನೊಂದಾಗಿ ತಿಳಿಯುವುದು ಭ್ರಾಂತಿ.

( **ಸಾದೃಶ್ಯಾದ್ವಸ್ತ್ವಂತರ ಪ್ರತೀತಿರ್ಭ್ರಾಂತಿಮಾನ್** – ರುಯ್ಯಕ ).

ಒಂದು ವಸ್ತುವನ್ನು ಇನ್ನೊಂದು ವಸ್ತುವನ್ನಾಗಿ ತಿಳಿಯುವುದು ಭ್ರಾಂತಿ. ಸಾದೃಶ್ಯಮೂಲವಾದ ಭ್ರಾಂತಿಯೇ ಈ ಅಲಂಕಾರದ ವಸ್ತುವಾದರೂ ಅದರಲ್ಲಿ ಚಮತ್ಕಾರವನ್ನು ತರುವ ಉದ್ದೇಶವಿರುವುದರಿಂದ ಕವಿಕಲ್ಪಿತವಾದ ಭ್ರಾಂತಿಗೇ ಪ್ರಾಶಸ್ತ್ಯವಿದೆ . ಉದಾ :– ಬಿಸಿಲಿನಲ್ಲಿ ಹೊಳೆಯುವ ಕಪ್ಪೆಯ ಚಿಪ್ಪು ಬೆಳ್ಳಿಯಾಗಿ ಕಾಣುತ್ತದೆ. ಇದು ಸಾದೃಶ್ಯಮೂಲವಾದ ಭ್ರಾಂತಿಯೇ ಆದರೂ ಅದು ಅಲಂಕಾರವಾಗಲಾರದೆಂದು ಆಲಂಕಾರಿಕರು ಹೇಳುತ್ತಾರೆ. ಅಂತೆಯೇ ಸಾದೃಶ್ಯೇತರ ಕಾರಣದಿಂದ ಹುಟ್ಟುವ ಭ್ರಾಂತಿಯೂ ಅಲಂಕಾರಕ್ಕೆ ವಿಷಯವಲ್ಲ. ಉದಾ :– " ಅವನು ಕೆನ್ನೆಗೆ ಹೊಡೆಯಲು ನನಗೆ ಆಕಾಶದಲ್ಲಿ ಸಾವಿರಾರು ಚಂದ್ರರಿರುವಂತೆ ಭಾಸವಾಯಿತು " . ಇದು ಕವಿಕಲ್ಪಿತ ಭ್ರಾಂತಿಯೇ ಆದರೂ ಸಾದೃಶ್ಯಮೂಲವಲ್ಲವಾದುದರಿಂದ ಅಲಂಕಾರವಾಗುವುದಿಲ್ಲ . ಹೀಗಾಗಿ ಕವಿ ಪ್ರತಿಭೋತ್ಥಿತವಾದ ಸಾದೃಶ್ಯ ಮೂಲವಾದ ಭ್ರಾಂತಿಯು ಮಾತ್ರ ಈ ಅಲಂಕಾರಕ್ಕೆ ವಸ್ತುವಾಗುತ್ತದೆ .

ಉದಾ :–

**ಪೊಸತಲರ್ದೊಂದು ತಾವರೆಯಗೆತ್ತು ಮುಖಾಬ್ಜಮನೊಂದು ತುಂಬಿ ಚುಂ**
**ಬಿಸೆ ಸತಿ ಬೆರ್ಚಿ ಪೆಳ್ಪಿಳಿಸಿ ನೋಳ್ಪುದುಮಾಕೆಯ ಕಣ್ಣ ಬೆಳ್ಪುಗಳ್ ।**
**ಪಸರಿಸೆ ತುಂಬಿಗಳ್ ಕುವಲಯಂಗಳರಲ್ದುವೆಗೆತ್ತು ಮತ್ತೆಯುಂ**
**ಮುಸುರುವುದುಂ ಗುಣಾರ್ಣವನನಾಗಳ್ ಭಯದಿಂದಮಪ್ಪಿದಳ್ ॥**

ಇಲ್ಲಿ ತರುಣಿಯೋರ್ವಳ ಮುಖವನ್ನು ಅದೇ ತಾನೇ ಅರಳಿದ ತಾವರೆಯೆಂದು ತಿಳಿದ ದುಂಬಿಯೊಂದು ಚುಂಬಿಸಿತು. ಆಗ ಸತಿಯು ಬೆದರಿ ಕಣ್ಣುಗಳನ್ನು ಪಿಳಿಪಿಳಿ ಅರಳಿಸಿ ನೋಡುತ್ತಿರಲು ಅವಳ ಕಣ್ಣುಗಳ ಬೆಳ್ಪುಗಳು ಪಸರಿಸಲು ಕುವಲಯಗಳು ಅರಳಿದವೆಂದು ತಿಳಿದು ದುಂಬಿಗಳು ಪುನಃ ಮುತ್ತಿಗೆ ಹಾಕಿದವು – ಎಂದು ಕವಿಯು ವರ್ಣಿಸುವಲ್ಲಿ ಭ್ರಾಂತಿಯಿದೆ. ದುಂಬಿಗಳಲ್ಲಿರುವ ಭ್ರಾಂತಿಯು ಅನಾಹಾರ್ಯವಾಗಿದೆ . ರೂಪಕದಲ್ಲಿಯೂ ಒಂದು ವಸ್ತುವನ್ನು ಇನ್ನೊಂದೆಂದು ಆರೋಪಿಸಲಾಗುತ್ತದೆ . ಇಲ್ಲಿ ಅಭೇದಾರೋಪವು ಆಹಾರ್ಯ . ಭ್ರಾಂತಿಯಲ್ಲಿ ಅದು ಅನಾಹಾರ್ಯ . ರೂಪಕದ ಸ್ವಾರಸ್ಯವು ಅಭೇದಾರೋಪದಲ್ಲಿದ್ದರೆ ಭ್ರಾಂತಿಯ ಸ್ವಾರಸ್ಯವು ಭ್ರಮಾಜನಿತ ವ್ಯವಹಾರದ ವರ್ಣನೆಯಲ್ಲಿದೆ .

ಅನ್ಯ ಉದಾಹರಣೆಗಳು:

ಮಿಗೆ ವಟ್ಟಯ್ಸಿದ ಚಂದ್ರಿಕೆ
ಸೊಗಯಿಸೆ ಕಂಡೋರ್ವಮುಗ್ಧೆ ದುಗ್ಧಮಿದೆಂದೆಂ
ದ್ರಗಳದೆ ಬದ್ಧಾಂಜಳಿಯಿಂ
ಮೊಗೆ ಮೊಗೆದಾ ಬಯಲನೀಂಟ ಬಳಲುತ್ತಿರ್ದಳ್ ॥

— ಗಿರಿಜಾ.೪–೧೨೯.

ನಳನಳಿಸಿ ಬೆಳೆದ ನಮ್ಮನೆಯ ಬಿಳಿಯ ಮಂ
ದಾರ ಗಿಡವ ಕಂಡು
ಲಲಿತೆಯೇ ಮುಂದೆ ನಿಂದಿರುವಳೆಂದು ಮೈ
ಮರೆವೆ ಸೊಬಗನುಂಡು ;
ಮನೆಯೆದುರಿಗಿರುವ ಮಲ್ಲಿಗೆಯ ಮೊಗ್ಗೆಯರ
ಳುವುದು ಕಂಡು ನಾನು
ಲಲಿತೆಯೇ ನಗುವಳೆಂದತ್ತ ನೋಡಿ ನಿಡು
ಸುಯ್ವನೀಗಲೂನು !

— ಬಿ. ಎಚ್. ಶ್ರೀಧರ್ 'ರಸಯಜ್ಞ'.

ಶ್ಯಾಮಸುಂದರನಾದ ರಾಮಚಂದ್ರನ ನೋಡಿ
ಮನದೊಳಗಾನಂದ ಮೂಡಿ
ಬನದೊಳು ಬರ್ಹಿಗಳಾಡುತಲಿಹವಿಂದು
ಮೇಘವೇ ಇರಬಹುದೆಂದು .

— ಎಸ್. ವಿ.ಪರಮೇಶ್ವರಭಟ್.' ಇಂದ್ರಚಾಪ '(ಪು ೧೮೮)

ಅವರಿವರ ನಡೆನುಡಿಗಳಲ್ಲಿಯೇ ನಿನ್ನ ಭಂಗಿಯ ಕಾಣುತ
ನೀನೇ ಮೈವೆತ್ತಂತೆ ಭ್ರಾಂತಿಯೊಳಿರುವೆ ಮಮ್ಮಲ ಮರಗುತ .

— ಚೆನ್ನವೀರ ಕಣವಿ 'ಸಮಗ್ರಕಾವ್ಯ' (ಪುಟ–೧೨೦).

# ೧೬ ಅಪಹ್ನುತಿ.

**ಲಕ್ಷಣ:**– ವಿಷಯವನ್ನು ( =ಉಪಮಾನವನ್ನು ) ಅಪಹ್ನವಗೊಳಿಸುವುದೇ ಅಪಹ್ನುತಿ.
( **ವಿಷಯಸ್ಯಾಪಹ್ನವೇಽಪಹ್ನುತಿಃ** – ರುಯ್ಯಕ )

ಅಪಹ್ನವವೆಂದರೆ ಮುಚ್ಚುವುದು, ಅಥವಾ ಅಡಗಿಸುವುದು. ಇರುವುದನ್ನು ಇಲ್ಲವೆಂದು ಹೇಳಿ ಅದನ್ನೇ ಮತ್ತೊಂದೆಂದು ವರ್ಣಿಸುವುದು ಇಲ್ಲಿನ ಸ್ವಾರಸ್ಯ. ಇದೂ ಸಾದೃಶ್ಯ ಮೂಲವಾದ ಅಲಂಕಾರವೇ ಆಗಿದೆ. ಉಪಮೇಯವನ್ನು ಅಲ್ಲಗಳೆದು ಅದನ್ನೇ ಉಪಮಾನವೆಂದು ನಿರೂಪಿಸಲಾಗುತ್ತದೆ. ಇದನ್ನು ಪ್ರಕೃತ ನಿಷೇಧ ಮತ್ತು ಅನ್ಯ ಸ್ಥಾಪನವೆಂದೂ ಕರೆಯಲಾಗಿದೆ. ಇವೆರಡೂ ಆಹಾರ್ಯವಾಗಿರುತ್ತವೆ. ಉದಾ:– 'ಇದು ಮುಖವಲ್ಲ; ಚಂದ್ರ' ಇಲ್ಲಿ ಪ್ರಕೃತವನ್ನು ಅಲ್ಲಗಳೆದು ಅಪ್ರಕೃತವನ್ನು ಸ್ಥಾಪಿಸುವುದಕ್ಕೆ ಸಾದೃಶ್ಯವೇ ನಿಮಿತ್ತ. ಈ ಪ್ರಕೃತ ನಿಷೇಧವು ಅಪಹ್ನುತಿಯನ್ನು ರೂಪಕದಿಂದ ಬೇರ್ಪಡಿಸುವ ಅಂಶ. ರೂಪಕದಲ್ಲಿ ಅನ್ಯ ವಸ್ತುವಿನ ಆರೋಪವಿರುವದಾದರೂ ಅಲ್ಲಿ ಪ್ರಕೃತ ನಿಷೇಧ–ಅರ್ಥಾತ್ ಅಪಹ್ನವವಿಲ್ಲ. ಇವೆರಡೂ ಆಹಾರ್ಯಗಳಾಗಿರುವುದರಿಂದ ಇದು ಭ್ರಾಂತಿಯೆಂಬ ಅಲಂಕಾರದಿಂದ ಬೇರೆಯಾಗುತ್ತದೆ.

ಉದಾ:–

**ಇದು ಪೂರ್ವದಿಶಾವಧುವೆ**
**ತ್ತಿದ ಶಶಿಮಣಿಮುಕುರಮಮೃತ ಕರಮಂಡಲಮು ।**
**ಲ್ಲಿದು ಚಿಹ್ನಮಲ್ತು ಮಧ್ಯದೊ**
**ಳೊದವಿದ ಮಾರ್ಪೊಳೆಪು ವಿಷ್ಣುಪದ ವಿಷ್ಣುವಿನಾ ॥**

ಇದು ಚಂದ್ರನ ವರ್ಣನೆ. ಇದು ಪೂರ್ವ ದಿಶೆಯೆಂಬ ವಧುವೆತ್ತಿದ ಚಂದ್ರಕಾಂತಮಣಿದರ್ಪಣವೇ ಹೊರತು ಚಂದ್ರಮಂಡಲವಲ್ಲ; ಮಧ್ಯದಲ್ಲಿರುವುದು ಕಳಂಕವಲ್ಲ, ವಿಷ್ಣುಪಾದದ ಪ್ರತಿಬಿಂಬವೆಂದು ಕವಿಯು ವರ್ಣಿಸಿದ್ದಾನೆ. ಇಲ್ಲಿ ಅಪಹ್ನವ–ಆರೋಪಗಳೆರಡೂ ವಾಚ್ಯವಾಗಿವೆ. ಹೀಗಲ್ಲದೆ ಕೈತವ, ಛಲ, ನೆವ, ವ್ಯಾಜ, ಅಸತ್ಯ ಮುಂತಾದ ಪದಗಳಿಂದ ಅಪಹ್ನವವು ಗಮ್ಯವಾಗುವುದೂ ಉಂಟು. ಆಗ ಅದನ್ನು ಕೈತವಾಪಹ್ನುತಿಯೆಂದು ಕರೆಯುತ್ತಾರೆ.

**ಅನ್ಯ ಉದಾಹರಣೆಗಳು:**

**ಕೊನೆಗೊಂಬಲ್ತು ಬಿಸಾಂಕುರಂ ಶಿರಮಿದಲ್ತುತ್ಕಚ್ಛಪಂ ನೇತ್ರಮು**
**ಲ್ಲನಿಮೇಷಂ ಮದಮಲ್ತು ವಾರಿ ಕಿವಿಯಲ್ತಬ್ಧಿಚ್ಛದಂ ಪದ್ಮಕಾ।**
**ನನಮಲ್ತಂಬುಜಮಾನೆಯಲ್ತು ಸರದೊಳ್ ಲೀಲಾಸರಂ ಪುಟ್ಟಿದ**
**ತ್ತನೆ ಮೂಡಿತ್ತವಗಾಹಮಿರ್ದು ಕೊಳದಿಂ ಕಾಯ್ಪೊಂದು ದಂತಾವಳಂ ॥**

— ನೇಮಿ. ೫–೧೧೨.

ದೆಸೆದೀವಿದ ಬಸವಯಶೋ
ವಸನಮನಿರದಾಂತು ತಾಂ ದಿಗಂಬರನಾಗು ।
ತ್ರಸಮಾಕ್ಷಂ ತೆಗೆದಿಟ್ಟಾ
ಪೊಸಸಮ್ಮಂ ತೋರ್ಪುದಂಬರಚ್ಛಲದಿಂ ॥

— ಬ. ರಾ. ವಿ. ೫ – ೫೪.

ಅಮೃತವೆಂಬುದು ಸುಳ್ಳು
ಕವಿಯ ಕಲ್ಪನೆ ಪೊಳ್ಳು
ಪ್ರೇಮಮಕರಂದವೇ ಅಮರಪಾನ.

— ದಿನಕರ ದೇಸಾಯಿ.

ಬಂದನು ಹುಣ್ಣಿಮೆಯ ಚಂದ್ರ
ಬೆಳದಿಂಗಳು ನಿಬಿಡ ಸಾಂದ್ರ
ಅಲ್ಲ, ಅಲ್ಲ, ಮುಗಿಲು ತುಂಬ
ಇಹುದು ಮಜ್ಜಿಗೆ
ಬೆಣ್ಣೆ ಮುದ್ದೆ ಮೇಲೆಯೊಂದು ಹೇಳು, ಅಜ್ಜಿಗೆ.

— ದ. ರಾ. ಬೇಂದ್ರೆ.

ವೇದನೆಯು ಕುದಿಯುವೆದೆಯಲ್ಲವಿದು ; ಕಾಯಿಸಿದ
ಕಬ್ಬಿಣದ ಕೆಮ್ಮಕ್ಕಯ ಮಾಯೆ ;
ಹೂವಲ್ಲ; ದೀಪಶಿಖೆ ; ಬಾಳಲ್ಲ ಬಾಳ ಹಗೆ ;

— ಅಡಿಗ.'ಸಮಗ್ರಕಾವ್ಯ' (ಪುಟ – ೧೭೬)

ಚೈತ್ರಕೆಲ್ಲಿದೆ ಚೆಲುವು
ಅದು ನನ್ನವಳ ಕಣ್ಣ ಮಿನುಗು.

— ಎಸ್. ಜಿ. ಸ್ವಾಮಿ.' ಸೂಜಿಮಲ್ಲಿಗೆ' (ಪುಟ – ೧೨೪)

# ೧೭ ಉಲ್ಲೇಖ.

ಲಕ್ಷಣ :– ಒಂದೇ ವಸ್ತುವನ್ನು ನಿಮಿತ್ತ ವಶದಿಂದ ಅನೇಕ ಪ್ರಕಾರವಾಗಿ ತಿಳಿಯುವುದು ಉಲ್ಲೇಖ.

( ಏಕಸ್ಯಾಪಿ ನಿಮಿತ್ತವಶಾದನೇಕಧಾ ಗ್ರಹಣಮುಲ್ಲೇಖ : – ರುಯ್ಯಕ )

ಒಂದೇ ವಸ್ತುವನ್ನು ಬೇರೆ ಬೇರೆಯವರು ಬೇರೆ ಬೇರೆಯಾಗಿ ತಿಳಿಯುವುದು ಉಲ್ಲೇಖ. ಇದು ಎರಡು ವಿಧ. ಗೃಹೀತೃ ಭೇದ ಹಾಗೂ ವಿಷಯಭೇದ. ನೋಡುವವರ ದೃಷ್ಟಿ ಭೇದದಿಂದ ವಸ್ತು ಬೇರೆ ಬೇರೆಯಾಗಿ ಕಾಣುವುದು ಗೃಹೀತೃ ಭೇದ. ಹಾಗಲ್ಲದೆ ವಸ್ತುವೇ ಬೇರೆ ಬೇರೆ ವಿಷಯಗಳಿಗೆ ಆಶ್ರಯವಾಗಿದ್ದರೆ ಅದು ವಿಷಯಭೇದ.

ಉದಾ :–

ಪ್ರತಿಮಲ್ಲರ್ ಗಿರಿಕಲ್ಪನೆಂದಿ ತರರೆಲ್ಲರ್ ಬಾಲನೆಂದಂಗನಾ
ತತಿಪುಷ್ಪಾಯುಧನೆಂದು ಗೋಪನಿವಹಂಸಾಮಾನ್ಯ ಮೆಂದಾಕುಲಾ
ಕೃತಿಕಂಸಂ ಲಯಕಾಲನೆಂದು ದಿವಿಜರ್ ವಿಶ್ವಾತ್ಮನೆಂದೀಕ್ಷಿಸಲ್
ದಿತಿಜಾರಾತಿ ವಿಚಿತ್ರಮೂರ್ತಿ ಪುಗುತಂದಂ ಮಲ್ಲರಂಗಾಗ್ರಮಂ ||

ಇಲ್ಲಿ ಕೃಷ್ಣನೊಬ್ಬನನ್ನೇ ಬೇರೆ ಬೇರೆಯವರು ಬೇರೆ ಬೇರೆಯಾಗಿ ಕಂಡರೆಂಬ ವರ್ಣನೆಯಿದೆ. ಪ್ರತಿಮಲ್ಲರು ಗಿರಿಕಲ್ಪನೆಂದು, ಇತರರು ಬಾಲನೆಂದು, ಅಂಗನೆಯರು ಮನ್ಮಥನೆಂದು, ಗೋಪನಿವಹವು ಸಾಮಾನ್ಯನೆಂದು, ಕಂಸನು ಲಯಕಾಲನೆಂದು, ದಿವಿಜರು ವಿಶ್ವಾತ್ಮನೆಂದು ಭಾವಿಸಿದರು. ಇದಕ್ಕೆ ಅವರವರ ದೃಷ್ಟಿ ಭೇದವೇ ನಿಮಿತ್ತ. ಇದು ಗೃಹೀತೃ ಭೇದ.

ಉದಾ:–

ಅರಸುಗಳಿಗಿದು ವೀರದ್ವಿಜರಿಗೆ
ಪರಮವೇದದಸಾರ ಯೋಗೀ
ಶ್ವರರ ತತ್ತ್ವವಿಚಾರ ಮಂತ್ರಿಜನಕ್ಕೆ ಬುದ್ಧಿಗುಣ
ವಿರಹಿಗಳ ಶೃಂಗಾರ ವಿದ್ಯಾ
ಪರಿಣತರಲಂಕಾರ ಕಾವ್ಯಕೆ
ಗುರುವೆನಲು ರಚಿಸಿದ ಕುಮಾರವ್ಯಾಸ ಭಾರತವ ||

ಇಲ್ಲಿ ಭಾರತವೊಂದೇ ಆದರೂ ಅದು ವಿವಿಧ ವಿಷಯಗಳಿಗೆ ಹೇಗೆ ಆಶ್ರಯವಾಗಿದೆಯೆಂಬುದನ್ನು ಕವಿಯು ಹೇಳಿದ್ದಾನೆ.

ಅನ್ಯ ಉದಾಹರಣೆಗಳು:

ಉಡುವೊಡೆ ನೀಲಚೇಲ ಮಲರ್ಗಣ್ಣ ರದೆಚ್ಚುವೊಡಂಜನಂ ಬಳ
ಲ್ಮುಡಿಯೊಳೆ ತಾಳ್ವೊಡುತ್ಪಳದಳಸ್ರಜಮಂಗದೊಳಣ್ಪುಗೈದು ಬೊ
ಟ್ಟಿಡುವೊಡೆ ಭಾಳದಲ್ಲಿ ಮೃಗನಾಭಿಜಮಿಂದ್ರನೀಲಮಣಿವಿಭೂಷಣಂ
ತೊಡುವೊಡೆ ಜೋಡೆಯರ್ಗೆ ಪಿರಿದಾದುದು ಪರ್ವಿದಮರ್ಬುಲೋಕದೊಳ್ ||

— ರಾ.ವಿ.೧೧–೨೨.

ಮೊಗನಾಲ್ಕು ನರನಿಗಂತೆಯೇ ನಾರಿಗಂಬಗೆಯ
ಜಗಕೆ ಕಾಣಿಪುದೊಂದು ಮನೆಯ ಜನಕೊಂದು
ಸೊಗಸಿನೆಳಸಿಕೆಗೊಂದು ತನ್ನಾತ್ಮಕಿನ್ನೊಂದು
ಬಗೆಯಷ್ಟೊ ಮೊಗವಷ್ಟು –ಮಂಕುತಿಮ್ಮ

— ಡಿ.ವಿ.ಜಿ.

ಮೂಲಶಕ್ತಿಯಲ್ಲಿ ಭಕ್ತ, ದೀನದಲಿತರಲ್ಲಿ ರಕ್ತ
ಭವದನೂರು ಎಳೆತ ಸೆಳೆತದಲ್ಲಿ ಕಲ್ಲಿನೊಲು ವಿರಕ್ತ
ಜರೆದವನನು ಹರಸಬಲ್ಲ, ಇರಿದವನನು ಉಳಿಸಬಲ್ಲ
ತಾನೆ ಬೆಂದು ತಾನೆ ನೊಂದು ಅರಿಯದೆಯನು ಅರಸಬಲ್ಲ
ನೀ ಮಹಾತ್ಮನು

— ಗೋಪಾಲಕೃಷ್ಣ ಅಡಿಗ.

ಕಣ್ಣಲ್ಲಿ ಏನಿಲ್ಲ!
ಕಣ್ಣಲ್ಲಿ ಗುರಿಯುಂಟು!
ಕಣ್ಣೆ ಚಿಗುರಿಸಿತು ನಂಟು
ಕಣ್ಣೆ ತೆರೆಯಿತು ಮಾರ್ಗ
ಕಣ್ಣಿಲ್ಲದಿಹ ಬದುಕು ಹಾದಿಕಳಕೊಂಡ ದುರ್ಗ.

— ಗಂಗಾಧರ ಚಿತ್ತಾಲ.'ಸಮಗ್ರಕಾವ್ಯ'.(ಪುಟ–೧೬೯)

ಕೆಲವರಿಗೆ ಈ ಜಗತ್ತು ಅವಲೋಕನಕ್ಕೆ ವಸ್ತು.
ಕೆಲವರಿಗೆ ತಬ್ಬಿಕ್ಕಿ ತುಟಿಯೂರಿ ಚೀಪಬೇಕೆನ್ನಿಸುವ
ಮಾಂಸಲವೃಕ್ಷ
ಇನ್ನೂ ಕೆಲವರಿಗೆ ಕಡೆಯಬೇಕು, ಮಿದಿಸಬೇಕು,
ಮೂರ್ತಿಸಲೇಬೇಕೆಂಬ ಧ್ಯಾಸ ಹಿಡಿಸುವ ಕಲ್ಲು, ಕೈ ಮಣ್ಣು
ನಮ್ಮಣ್ಣಗೋ ಇದೆಲ್ಲ ತನ್ನ ಕುಟುಂಬ.

— ಗಂಗಾಧರ ಚಿತ್ತಾಲ.'ಸಮಗ್ರಕಾವ್ಯ' (ಪುಟ–೧೬೪)

# ೧೮. ಸಹೋಕ್ತಿ.

ಲಕ್ಷಣ :– ಸಹೃದಯ ರಂಜಕವಾದ ಸಹಭಾವವಿದ್ದರೆ ಸಹೋಕ್ತಿ.

( ಸಹೋಕ್ತಿಸ್ಸಹಭಾವಶ್ಚೇದ್ ಭಾಸತೇ ಜನರಂಜನ : —ಕುವಲಯಾನಂದ )

ಎರಡು ವಸ್ತುಗಳು ಒಟ್ಟಿಗೆ ಇದ್ದವು ಅಥವಾ ಒಟ್ಟಿಗೆ ಹೋದವು ಎಂದು ಬಣ್ಣಿಸಿದರೆ ಸಹೋಕ್ತಿ ಇದು ಗುಣಪ್ರಧಾನ ಭಾವವನ್ನು ಅವಲಂಬಿಸಿದೆ . ಅಂದರೆ ಎರಡು ವಸ್ತುಗಳಲ್ಲಿ ಒಂದು ಪ್ರಧಾನವಾದರೆ ಇನ್ನೊಂದು ಗೌಣವಾದುದಾಗುತ್ತದೆ. ಸಹೋಕ್ತಿಯ ಮೂಲದಲ್ಲಿ ಅತಿಶಯೋಕ್ತಿಯಿದೆ . ಅವುಗಳಲ್ಲಿ ಉಪಮಾನೋಪಮೇಯ ಭಾವವೂ ಇರುತ್ತದೆಂದು ರುಯ್ಯಕನು ಹೇಳುತ್ತಾನೆ . ಇಲ್ಲವಾದರೆ ' ತಂದೆಯೊಡನೆ ಮಗನು ಬಂದನು ' ಎನ್ನುವುದೂ ಅಲಂಕಾರವಾದೀತು. ಅಂದರೆ ಸಹಭಾವವು ಚಮತ್ಕಾರಿಕವಾಗಿರುವಲ್ಲಿ ಈ ಅಲಂಕಾರವನ್ನು ಹೇಳಬೇಕು.

ಉದಾ :–

ದ್ಯುಮಣಿ ಕರ್ಣದ್ಯುಮಣಿ ಸಹಿತ
ಸ್ತಮಿಸೆ ಕಮಲಿನಿ ಕೌರವನ ಮುಖ
ಕಮಲ ಬಾಡಿತು ತಿಮಿರ ಹೆಚ್ಚಿತು ಶೋಕತಮದೊಡನೆ ।
ಅಮಳ ಚಕ್ರಾಂಗಕ್ಕೆ ಭೂಪೋ
ತ್ತಮನ ವಿಜಯಾಂಗನೆಗೆ ಅಗಲಿಕೆ
ಸಮನಿಸಿತು ಕೇಳಯ್ಯ ಜನಮೇಜಯ ಮಹೀಪಾಲ ॥

ಅನ್ಯ ಉದಾಹರಣೆಗಳು :

ಇಲ್ಲುಂಡ ತಾಯೊಲವು , ತಂದೆಯಕ್ಕರೆ, ಅಣ್ಣ ತಮ್ಮದಿರ ನಿತಾಂತ ಮಮತೆಯೇ,
ಕಣ್ಣಕಟ್ಟರೆ, ಜೀವ ಮಮ್ಮಲನೆ ಮರುಗಿತ್ತು
ಅಮ್ಮ ಹೋದಳು, ಅಣ್ಣ ಹೋದ, ಅಪ್ಪನೂ ಹೋದ ,
ಅವರೊಡನೆ ಈ ಲೋಕವೂ ಹೋಯ್ತು,
ಈ ಜಗದ ರೀತಿಯಿದು .

— ಗಂಗಾಧರ ಚಿತ್ತಾಲ. 'ಸಮಗ್ರಕಾವ್ಯ '(ಪುಟ–೬೮).

ನನ್ನ ಕನಸಿನ ಹೊನ್ನ ತಾವರೆಯ ಹೂವರಳಿ
ಎನ್ನ ಬೊಗಸೆಯೊಳಿಂದು ಕಂಗೊಳಿಸಿದೆ
ಎನ್ನಿನಿಯ ಭಾವಗಳ ಮಧುರ ಮಕರಂದವೂ
ಮೃದುಲ ದಲದಲಗಳಲಿ ಪರಿಮಳಿಸಿದೆ .

— ಚೆನ್ನವೀರ ಕಣವಿ .'ಸಮಗ್ರಕಾವ್ಯ '(ಪುಟ–೧೪೩).

# ೧೯. ವಿನೋಕ್ತಿ.

ಲಕ್ಷಣ :– ಒಂದು ವಸ್ತುವಿಲ್ಲದಿದ್ದರೆ ಮತ್ತೊಂದು ವಸ್ತುವು ಸುಂದರ ಅಥವಾ ಅಸುಂದರವಾಗಿರುವುದು ವಿನೋಕ್ತಿ.

**(ವಿನಾಕಂಚಿದನ್ಯಸ್ಯ ಸದಸತ್ವಾಭಾವೋ ವಿನೋಕ್ತಿ: –** ರುಯ್ಯಕ )

ವಿನಾ – ಹೊರತಾಗಿ ಎಂದು ಅರ್ಥ. ಇಲ್ಲಿ ವಿನಾ, ರಹಿತ, ಹೀನ, ಇಲ್ಲದ, ಮುಂತಾದ ವಿನಾರ್ಥಕ ಶಬ್ದಪ್ರಯೋಗವಿರುತ್ತದೆ. ವಿನೋಕ್ತಿಯೆಂಬ ಹೆಸರು ಬರುವುದಕ್ಕೆ ಕಾರಣ ಅದು. ಯಾವುದಾದರೊಂದು ವಸ್ತುವಿಲ್ಲದಿದ್ದರೆ ಶೋಭೆಯಿಲ್ಲವೆಂದು ಬಣ್ಣಿಸಿದರೆ ಅಥವಾ ಶೋಭೆಯಿದೆಯೆಂದು ಬಣ್ಣಿಸಿದರೆ ಅದು ವಿನೋಕ್ತಿಯೆನಿಸುತ್ತದೆ.

ಉದಾ :–

ಕಳಹಂಸಂ ಸುಳಿಯದ ಪೂ
ಗೊಳನಮೃತ ಮರೀಚಿ ಬೆಳಗದಂಬರ ಚಕ್ರಂ
ಕಳಭಂ ಸಂಚರಿಸದ ವನ
ವಳಯಂ ಸುತನಾಡದಂಗಳಂ ಶೋಭಿಕುಮೇ ||

**ಅನ್ಯ ಉದಾಹರಣೆಗಳು :**

ಮುಂಗಾರ ಮೋಡಗಳ ಸಿಂಗಾರದಾಭರಣ
ವ್ಯರ್ಥ ಕುಣಿಯುವ ನವಿಲ ಇಲ್ಲದಿರಲು
ಇಬ್ಬನಿಯ ಹನಿಗಳಿಗೆ ಚೆಲುವೆಲ್ಲಿ ? ಕಳೆಯಲ್ಲಿ ?
ರವಿಕಿರಣ ಬಣ್ಣಗಳ ಮುಡಿಸದಿರಲು?

— ಕೆ. ಎಸ್. ನಿಸಾರಅಹಮ್ಮದ್ ' ನಿತ್ಯೋತ್ಸವ ' (ಪುಟ–೪೩)

ಆದರದೂ ಬರಿ ನೆನವು ! ಬರಿಯ ನೆನವಾದೆಯಾ?
ನೀನಿಲ್ಲವೆನೆ ಬಾಳು ಗೋಳು ಗೋಳು !
ಕಂಡು ಕಾಣುವ ಮೊದಲೆ ಕಣ್ಣ ಬೆಳಕನು ಸೆಳೆದು
ದೀ ಭಯಾನಕ ಶೂನ್ಯ ಹಾಳು ಹಾಳು

— ಗಂಗಾಧರ ಚಿತ್ತಾಲ.' ಸಮಗ್ರಕಾವ್ಯ '(ಪುಟ–೩೭).

# ೨೦. ಸಮಾಸೋಕ್ತಿ.

ಲಕ್ಷಣ :– ಸಮಾನವಾದ ವಿಶೇಷಣಗಳ ಮೂಲಕ ಅಪ್ರಸ್ತುತ ವೃತ್ತಾಂತವು ಗಮ್ಯವಾದರೆ ಸಮಾಸೋಕ್ತಿ.

**( ವಿಶೇಷಣ ಸಾಮ್ಯಾದಪ್ರಸ್ತುತ ಗಮ್ಯತ್ವೇ ಸಮಾಸೋಕ್ತಿಃ – ರುಯ್ಯಕ )**

ಸಮಾಸೋಕ್ತಿಯೆಂದರೆ ಸಂಕ್ಷಿಪ್ತವಾಗಿ ಹೇಳುವುದೆಂದರ್ಥ. ಪ್ರಕೃತವಾದ ವೃತ್ತಾಂತವನ್ನು ಬಣ್ಣಿಸುತ್ತಿರುವಾಗಲೇ ಅಪ್ರಕೃತ ಅಥವಾ ಅಪ್ರಸ್ತುತ ವೃತ್ತಾಂತವೂ ಸೂಚಿತವಾಗುವುದು ಇಲ್ಲಿನ ವೈಶಿಷ್ಟ್ಯ. ಇದನ್ನು ವ್ಯವಹಾರ ಸಮಾರೋಪವೆಂದು ಕರೆಯುತ್ತಾರೆ. ಇದು ಸಮಾಸೋಕ್ತಿಯ ಜೀವಾಳ. ಪ್ರಕೃತಕ್ಕೂ ಅಪ್ರಕೃತಕ್ಕೂ ಸಮಾನವಾಗಿ ಅನ್ವಯಿಸುವ ವಿಶೇಷಣಗಳನ್ನು ಬಳಸುವ ಮೂಲಕ ಕವಿಯು ಇದನ್ನು ಸಾಧಿಸುತ್ತಾನೆ. ಇದು ಮೂರು ಬಗೆಯಿಂದ ಸಾಧ್ಯ. ಶ್ಲೇಷದಿಂದ, ಸಾಧಾರಣ ವಿಶೇಷಣಗಳಿಂದ, ಮತ್ತು ಔಪಮ್ಯ ಗರ್ಭತ್ವದಿಂದ. ಈ ಮೂರು ಬಗೆಗಳಲ್ಲಿ ವ್ಯವಹಾರ ಸಮಾರೋಪವು ಅತ್ಯವಶ್ಯ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಇಲ್ಲಿ ವಿಶೇಷಣಗಳು ಎರಡೂ ಅರ್ಥಗಳಿಗೆ ಅನ್ವಯಿಸುತ್ತವೆಯೇ ಹೊರತು ವಿಶೇಷ್ಯವಲ್ಲ. ವಿಶೇಷ್ಯವೂ ಶ್ಲಿಷ್ಟವಾದರೆ ಅದು ಶ್ಲೇಷವೇ ಆಗಿಬಿಡುತ್ತದೆ. ಹಾಗಾಗಿ ಸಮಾಸೋಕ್ತಿಯಲ್ಲಿ ಪ್ರಕೃತವು ವಾಚ್ಯವಾಗಿರುತ್ತದೆಯಾದರೆ ಅಪ್ರಕೃತವು ಗಮ್ಯವಾಗಿರುತ್ತದೆ.

ಉದಾ :–

**ತುಂಬಿದ ರಕ್ತತೆಯಿಂ ನಿಜ**
**ಬಿಂಬಂ ವಾರುಣಿಯ ನೊಸದು ಸೇವಿಸ ನಾಣ್ಗೆ।**
**ಟ್ಟಂಬೋಲ್ ತೇಜಂ ಮಸಳ್ವಿನ**
**ಮಂಬರಮಂ ಬಿಸುಟನಾಗಳಂಬುಜನೇತ್ರಂ ॥**

ಇದು ಸೂರ್ಯಾಸ್ತದ ವರ್ಣನೆ. ರಕ್ತತೆ (ಕೆಂಪಾಗುವುದು, ಆಸಕ್ತಿಹೊಂದುವುದು), ವಾರುಣಿ ( ಪಶ್ಚಿಮ, ಮದ್ಯ ), ಅಂಬರ ( ಆಕಾಶ, ಬಟ್ಟೆ ), ಪದಗಳು ಶ್ಲಿಷ್ಟವಾಗಿವೆ. ವಿಶೇಷ್ಯವು ಶ್ಲಿಷ್ಟವಲ್ಲ. ಸೂರ್ಯನು ಕೆಂಪು ಬಣ್ಣವನ್ನು ತಾಳಿ, ಪಶ್ಚಿಮ ದಿಕ್ಕನ್ನು ಸೇರಿ, ಕಾಂತಿಗುಂದಿ, ಆಕಾಶವನ್ನು ತ್ಯಜಿಸಿದನೆಂಬುದನ್ನು ವರ್ಣಿಸುತ್ತಿರುವಾಗಲೇ ಆಸಕ್ತಿಯಿಂದ ಮದ್ಯವನ್ನು ಸೇವಿಸಿ ನಾಚಿಕೆಯನ್ನು ತೊರೆದು ಬಟ್ಟೆಯನ್ನು ಬಿಸಾಕುವ ಕುಡುಕನ ವ್ಯವಹಾರವು ಸೂಚ್ಯವಾಗುವಂತೆ ಕವಿಯು ವರ್ಣಿಸುತ್ತಾನೆ. ಅಪ್ರಕೃತ ವ್ಯವಹಾರ ಮತ್ತು ಪ್ರಕೃತ ವ್ಯವಹಾರಗಳಲ್ಲಿ ಸಾಮ್ಯವಿದೆಯೆಂಬುದನ್ನು ಗಮನಿಸಬಹುದು.

ಅನ್ಯ ಉದಾಹರಣೆಗಳು :

ಏಳೇಳೊ ಸೂರ್ಯ !
ಸುಂದರ ಸುಕುಮಾರ !
ಬೇಗೆದ್ದು ಸಜ್ಜಾಗಿ
ಏಳು ಕುದುರೆಯ ಹತ್ತಿ
ಏಳು ಕಡಲನು ದಾಟಿ
ನೀ ಬರುವೆಯೆಂದು
ಊರ ಸೂರ್ಯಕಾಂತಿಯರೆಲ್ಲ
ಹೂ ತಟ್ಟೆ ಹಿಡಿದು ಆರತಿಗೆ ಕಾದಿದ್ದಾರೆ .

— ಶಾ. ಬಾಲುರಾವ್.'ಇವನೊಬ್ಬನೇ ಸೂರ್ಯ'(ಪು–೭)

ಮೌನ ತಬ್ಬಿತು ನೆಲವ ; ಜುಮ್ಮನೇ ಪುಳಕಗೊಂಡಿತು ಧಾರಿಣಿ ;
ನೋಡಿ ನಾಚಿತು ಬಾನು ; ಸೇರಿತು ಕೆಂಪು ಸಂಜೆಯ ಕದಪಲಿ
ಹಕ್ಕಿಗೊರಲಿನ ಸುರತಗಾನಕೆ ಬಿಗಿಯು ನಸುವೇ ಸಡಲಿತು ;
ಬೆಚ್ಚಬೆಚ್ಚನೆಯುಸಿರಿನಂದದಿ ಗಾಳಿ ಮೆಲ್ಲನೆ ತೆವಳಿತು .

— ಗೋಪಾಲಕೃಷ್ಣ ಅಡಿಗ ' ಸಮಗ್ರಕಾವ್ಯ ' (ಪುಟ – ೧೨೧) .

ತೆನೆತುಂಬಿ ಬಿರಿದ ಬತ್ತದ ಗದ್ದೆಯೊಂದು
ರೆಕ್ಕೆಬಿಚ್ಚಿ ಹಾರಾಡುತಿದ್ದ ಹಕ್ಕಿಯನ್ನು
ಓರೆನೋಟವ ಬೀರಿ ಕರೆದರೂ, ಅಲ್ಲೇ
ಕವಣೆ ಹಿಡಿದು ನಿಂತಿದ್ದ ವ್ಯಕ್ತಿಯ ಕಂಡು
ಹಕ್ಕಿ ಹಿಂದೆ ಸರಿಯಬೇಕಾಯಿತು ;
ಕಾದು ಕಾದು ಸಾಕಾಯಿತು .

— ಕೆ . ಎಂ. ಮುನಿಕೃಷ್ಣಪ್ಪ . 'ಮೊದಲು ಗೊತ್ತಿರಲಿಲ್ಲ' (ಪುಟ – ೨೫).

# ೨೧. ಪರಿಕರ.

ಲಕ್ಷಣ:– ವಿಶೇಷಣಗಳು ಸಾಭಿಪ್ರಾಯವಾಗಿರುವುದು ಪರಿಕರ.

( **ವಿಶೇಷಣ ಸಾಭಿಪ್ರಾಯತ್ವಂ ಪರಿಕರಃ** – ರುಯ್ಯಕ )

ವಿಶೇಷ್ಯವೊಂದಕ್ಕೆ ಅನ್ವಯಿಸುವಂತೆ ಅಭಿಪ್ರಾಯಗರ್ಭಿತವಾದ ವಿಶೇಷಣಗಳನ್ನು ಬಳಸುವುದು ಪರಿಕರದ ಸ್ವಾರಸ್ಯ. ಈ ವಿಶೇಷಣಗಳು ವ್ಯಂಗ್ಯಾರ್ಥದಿಂದ ಕೂಡಿದ್ದು ಅವು ವಾಚ್ಯಾರ್ಥಕ್ಕೆ ವಿಶೇಷವಾದ ಪುಷ್ಟಿಯನ್ನು ತಂದುಕೊಡುತ್ತವೆ. ವ್ಯಂಗ್ಯಾರ್ಥವು ವಾಚ್ಯಾರ್ಥವನ್ನು ಪೋಷಿಸುವುದರಿಂದ ಇದಕ್ಕೆ ಪರಿಕರವೆಂಬ ಹೆಸರು ಅನ್ವರ್ಥವಾಗಿದೆ. ಸಾಮಾನ್ಯವಾಗಿ ಇಂಥ ವಿಶೇಷಣಗಳು ಹೆಚ್ಚಿರಬೇಕಾದರೂ ಅಭಿಪ್ರಾಯ ಗರ್ಭಿತವಾದ ಒಂದೇ ವಿಶೇಷಣವಿದ್ದರೂ ಪರಿಕರವಾಗುತ್ತದೆ. ವಿಶೇಷಣಗಳು ಹೆಚ್ಚಿದ್ದರೆ ಸೊಗಸು ಹೆಚ್ಚು.

ಉದಾ:–

**ಅಕ್ಕಕ್ಕು ಕಾಮಹರನೊಳ್**
**ಮುಕ್ಕಣ್ಣನೊಳಖಿಳವೇದಶಾಸ್ತ್ರ ಕ್ರಮಮಂ**
**ಮಿಕ್ಕವನೊಳ್ ಪಿತೃ ವನದೊಳ್**
**ಪೊಕ್ಕವನೊಳದೆಂತು ಚಿತ್ತವಿಟ್ಟೆ ಲತಾಂಗೀ ||**

—— ಗಿರಿಜಾ. ೬–೧೧೧.

ಇಲ್ಲಿ ಶಿವನನ್ನು ಕಾಮಹರ, ಮುಕ್ಕಣ್ಣ, ವೇದಶಾಸ್ತ್ರಕ್ರಮವನ್ನು ಮಿಕ್ಕವ, ಪಿತೃವನನಿವಾಸಿ, ಎಂದೆಲ್ಲ ಕವಿಯು ವರ್ಣಿಸಿದ್ದಾನೆ. ಕಾಮಹರನೆಂದುದರಿಂದ ದಾಂಪತ್ಯ ವಿಮುಖತೆ, ಮುಕ್ಕಣ್ಣನೆಂದುದರಿಂದ ವಿರೂಪ, ವೇದಶಾಸ್ತ್ರ ಕ್ರಮವನ್ನು ಮಿಕ್ಕವನೆಂದುದರಿಂದ ಅಸಭ್ಯ, ಪಿತೃವನದಲ್ಲಿ ವಾಸಿಸುವವನೆಂದುದರಿಂದ ಅವನ ನಿವಾಸರಾಹಿತ್ಯ, ಅಸಹ್ಯ ಸ್ವರೂಪಾದಿಗಳು ಧ್ವನಿಸುತ್ತವೆ. ಇವೆಲ್ಲವೂ 'ಎಂತು ಚಿತ್ತವಿಟ್ಟೆ 'ಲತಾಂಗೀ' ಎಂಬ ಮಾತಿಗೆ ಪೋಷಕವಾಗುತ್ತವೆ. ಇಲ್ಲಿ ಲತಾಂಗೀ ಎಂದು ಪಾರ್ವತಿಯನ್ನು ಸಂಬೋಧಿಸುವುದು ಕೂಡ ಸಾಭಿಪ್ರಾಯವಾಗಿಯೇ. ಅದರಿಂದ ಅವಳ ಕೋಮಲತೆಯು ವ್ಯಕ್ತವಾಗುತ್ತದೆ. 'ಲತೆಯಂತೆ ಕೋಮಲೆಯಾದ ನೀನು ಶಿವನನ್ನು ವರಿಸಿದರೆ ಅದು ವಿಷಮ ದಾಂಪತ್ಯವಾದೀತು' ಎಂಬ ಧ್ವನಿಯಿದೆ.

ವಿಶೇಷಣಗಳು ಸಾಭಿಪ್ರಾಯವಾಗಿದ್ದರೆ ಪರಿಕರವೆಂದೂ, ವಿಶೇಷ್ಯವು ಸಾಭಿಪ್ರಾಯವಾಗಿದ್ದರೆ ಪರಿಕರಾಂಕುರವೆಂಬ ಅಲಂಕಾರವೂ ಆಗುವದೆಂದು ಕುವಲಯಾನಂದಕಾರನು ಹೇಳುತ್ತಾನೆ. ಆದರೆ ಜಗನ್ನಾಥನು ಪರಿಕರಾಂಕುರವನ್ನು ಪರಿಕರದ ಪ್ರಭೇದವೆಂದು ಪರಿಗಣಿಸುತ್ತಾನೆ.

ಅನ್ಯ ಉದಾಹರಣೆಗಳು:

ನೀನೆಲ್ಲಿ ಈಗ: ಹಗಲಿಗೆ ಹಗಲ ಕೊಟ್ಟವನು,
ಹಾಯಿಯನ್ನು ರುಟು ರುಟು ಊದಿದವನು,
ದಾರಿಯುದ್ದಕು ರಹದಾರಿ ಗಿಟ್ಟಿಸಿ ದಿಳ್ಳಿ
ದ್ವೀಪಾಂತರಕ್ಕೆ ಕೈಕೊಟ್ಟ ಸಐನು ?

— ಗೋಪಾಲಕೃಷ್ಣ ಅಡಿಗ.

ಕುರುಡು ಕಾಂಚಾಣ ಕುಣಿಯುತಲಿತ್ತು

— ದ. ರಾ. ಬೇಂದ್ರೆ.

## ೨೨. ಅಪ್ರಸ್ತುತ ಪ್ರಶಂಸಾ.

ಲಕ್ಷಣ:– ಅಪ್ರಸ್ತುತ ವೃತ್ತಾಂತದ ವರ್ಣನೆಯಿಂದ ಪ್ರಸ್ತುತ ವೃತ್ತಾಂತವನ್ನು ತಿಳಿಯಪಡಿಸಿದರೆ ಅಪ್ರಸ್ತುತ ಪ್ರಶಂಸೆ.

( **ಅಪ್ರಸ್ತುತ ಪ್ರಶಂಸಾ ಸ್ಯಾತ್ ಸಾ ಯತ್ರ ಪ್ರಸ್ತುತಾಶ್ರಯಾ** – ಕುವಲಯಾನಂದ )

ಅಪ್ರಸ್ತುತ ವೃತ್ತಾಂತದ ವರ್ಣನೆಯು ಅಪ್ರಸ್ತುತ ಪ್ರಶಂಸೆ. ಇಲ್ಲಿ ಪ್ರಶಂಸೆ ಎಂದರೆ ವರ್ಣನೆಯೆಂಬುದಷ್ಟೇ ಅರ್ಥವೇ ಹೊರತು ಸ್ತುತಿಯೆಂದಲ್ಲ. ಅದು ಸ್ತುತಿಯೋ, ನಿಂದೆಯೋ, ಅಥವಾ ಕೇವಲ ಕಥನವೋ ಆಗಿರಬಹುದು. ಕೇವಲ ಅಪ್ರಸ್ತುತ ವರ್ಣನೆಯು ಅಸಂಗತ. ಆದ್ದರಿಂದ ಅದು ಪ್ರಸ್ತುತಕ್ಕೆ ಸಂಬಂಧಿಸಿರಬೇಕಾಗುತ್ತದೆ. ಅಂತೆಯೇ ಈ ಅಲಂಕಾರದಲ್ಲಿ ಅಪ್ರಸ್ತುತ ವರ್ಣನೆಯು ವಾಚ್ಯವಾದರೆ ಪ್ರಸ್ತುತವು ವ್ಯಂಗ್ಯವಾಗಿರುತ್ತದೆ. ಇಲ್ಲಿ ವ್ಯಂಗ್ಯಕ್ಕಿಂತ ವಾಚ್ಯವೇ ರಮಣೀಯವಾಗಿರುವುದರಿಂದ ಅಪ್ರಸ್ತುತ ಪ್ರಶಂಸೆಯು ಧ್ವನಿ ಕಾವ್ಯಗಳ ವರ್ಗಕ್ಕೆ ಸೇರಲಾರದು. ಅಪ್ರಸ್ತುತ – ಪ್ರಸ್ತುತಗಳ ಸಂಬಂಧವನ್ನು ಅವಲಂಬಿಸಿ ಈ ಅಲಂಕಾರದಲ್ಲಿ ಐದು ಭೇದಗಳನ್ನು ಹೇಳಿದ್ದಾರೆ. ಸಾಮಾನ್ಯವು ಪ್ರಸ್ತುತವಾಗಿದ್ದಾಗ ಅಪ್ರಸ್ತುತ ವಿಶೇಷ ವರ್ಣನೆ, ವಿಶೇಷವು ಪ್ರಸ್ತುತವಾಗಿರುವಾಗ ಅಪ್ರಸ್ತುತ ಸಾಮಾನ್ಯದ ವರ್ಣನೆ, ಕಾರ್ಯವು ಪ್ರಸ್ತುತವಾಗಿರುವಾಗ ಅಪ್ರಸ್ತುತ ಕಾರ್ಯದ ವರ್ಣನೆ, ಕಾರಣವು ಪ್ರಸ್ತುತವಾಗಿರುವಾಗ ಅಪ್ರಸ್ತುತವಾದ ಕಾರ್ಯದ ವರ್ಣನೆ, ಮತ್ತು ಸದೃಶವು ಪ್ರಸ್ತುತವಾದಾಗ ಅಪ್ರಸ್ತುತವಾದ ಸದೃಶವಸ್ತುವರ್ಣನೆ. ಇವುಗಳಲ್ಲಿ ಕೊನೆಯ ಭೇದವನ್ನು ಅನ್ಯೋಕ್ತಿಯೆಂದು ಕರೆಯುವುದೂ ಉಂಟು. ಈ ಅಲಂಕಾರದ ಜನಪ್ರಿಯವಾದ ಪ್ರಕಾರ ಅದು. ಹಾಗಾಗಿ ಇಲ್ಲಿ ಅದನ್ನು ಮಾತ್ರ ಲಕ್ಷಿಸಲಾಗುತ್ತದೆ.

ಉದಾ:–

**ಬರೆದೊಡೆ ಬಣ್ಣಂ ಬರ್ಕುಮೆ**
**ವಿರಚಿಸಿದೊಡೆ ಪಚ್ಚಮಕ್ಕಮೇ ದುತ್ತೂರಂ।**
**ಧರೆಯೊಳ್ ಕನಕಾಹ್ವಯಮಂ**
**ಧರಿಸಿರ್ದುಂ ಮಿಸುನಿಯಂತಿರಲಕ್ಕುಮೆ ಸೇವ್ಯಂ ॥**

ಇಲ್ಲಿ ಕವಿಯು 'ಕನಕ' ಎಂಬ ಹೆಸರುಳ್ಳ ಉಮ್ಮತ್ತಿಯ ಗಿಡವನ್ನು ವರ್ಣಿಸುತ್ತಾನೆ. ಇದು ಅಪ್ರಸ್ತುತ. ವಿದ್ವಾಂಸನ ಹೆಸರಿಟ್ಟುಕೊಂಡಿರುವ ಮೂರ್ಖ ಪ್ರಸ್ತುತ. ವಿದ್ವಾಂಸನ ಹೆಸರಿಟ್ಟುಕೊಂಡಾಕ್ಷಣ ಮೂರ್ಖ ವಿದ್ವಾಂಸನಾಗುವುದಿಲ್ಲವೆಂಬುದು ತಾತ್ಪರ್ಯ.

**ಅನ್ಯ ಉದಾಹರಣೆಗಳು:**

**ಮಿಕ್ಕೆಲ್ಲ ಕೊಳವನು ಓ ರಾಜಹಂಸನೆ**
**ತೊರೆದಿಲ್ಲಿ ನೀ ಬಂದೆಯೇಕೆ ?**

**ಜನರಿಲ್ಲಿ ಹಂಸನೆಂದೆನುವರು ಬಕನನೆ**
**ತೆರಳು ನೀ ಬೇರೊಂದು ಕೊಳಕೆ .**

— ಎಸ್. ವಿ. ಪರಮೇಶ್ವರಭಟ್.'ಇಂದ್ರಚಾಪ'.

ಭ್ರಮರಾನ್ಯೋಕ್ತಿ ಇದು ರಂಗಯ್ಯ ''ಕಮಲದ ಮೊಗ್ಗಿನಲ್ಲಿ ಸೆರೆಯಾಗಿದ್ದ ದುಂಬಿ ಯೋಚಿಸಿತು ಹೀಗೆ: ರಾತ್ರಿ ಕಳೆಯುತ್ತದೆ; ಸುಪ್ರಭಾತ ಆಗುತ್ತದೆ; ಸೂರ್ಯ ಉದಯಿಸುತ್ತಾನೆ; ಕಮಲ ಕಾಂತಿಗೂಡಿ ಅರಳುತ್ತದೆ ; ಅದು ಯೋಚಿಸುತ್ತಿರುವಾಗ, ಅಯ್ಯೋ ಅಯ್ಯೋ ತಾವರೆ ಬಳ್ಳಿಯನು ಇನ್ನಿಲ್ಲವೆನಿಸಿತು ಆನೆ .''

— ಎಸ್. ವಿ. ರಂಗಣ್ಣ.'ರಂಗ ಬಿನ್ನಪ 'ಅರಮನೆಯ ಒಳಕೋಣೆ;

**ದೀಪ ಅಗರಿನ ಧೂಪ, ಹೂವು ವೀಣೆ**
**ಮೈ ಮರೆಸಬಹುದಿಲ್ಲಿ ನಿದ್ರೆ , ಹಾಸಿನ ಮೇಲೆ ಒರಗಿದ್ದರೆ ;**
**ಮರಿಗಳಿಗೆ ಎಲ್ಲವೂ ಚೆನ್ನಾಗಿತ್ತು**
**ಹೊನ್ನ ಪಂಜರ ಮಾತ್ರ ಇರದಿದ್ದರೆ .**

—ಕೆ. ಎಸ್. ನಿಸಾರಅಹಮ್ಮದ್.'ಆಯ್ದ ಕವನಗಳು' (ಪುಟ ೮)

# ೨೩. ಪರ್ಯಾಯೋಕ್ತಿ.

ಲಕ್ಷಣ:– ಗಮ್ಯವಾದ ಅರ್ಥವನ್ನೇ ಪ್ರಕಾರಾಂತರದಿಂದ ವಾಚ್ಯವಾಗಿಸಿದರೆ ಪರ್ಯಾಯೋಕ್ತಿ.

( **ಪರ್ಯಾಯೋಕ್ತಂತುಗಮ್ಯಸ್ಯ ವಚೋಭಂಗ್ಯಂತರಾಶ್ರಯಂ** – ಕುವಲಯಾನಂದ.)

'ಪರ್ಯಾಯವೆಂದರೆ ಪ್ರಕಾರಾಂತರವೆಂದು ಅರ್ಥ. ಹೇಳಬೇಕಾದುದನ್ನು ನೇರವಾಗಿ ಹೇಳದೇ ಪ್ರಕಾರಾಂತರದಿಂದ ಹೇಳುವುದು ಪರ್ಯಾಯೋಕ್ತಿಯೆನಿಸಿದೆ. ಇಲ್ಲಿ ವ್ಯಂಗ್ಯವೇ ವಾಚ್ಯವಾಗಿರುತ್ತದೆಂದು ಅಲಂಕಾರಿಕರು ಹೇಳುತ್ತಾರೆ. ಧ್ವನಿಕಾವ್ಯದಲ್ಲಿ ವ್ಯಂಗ್ಯಾರ್ಥವು ವಾಚ್ಯಕ್ಕಿಂತ ಭಿನ್ನವಾಗಿರುತ್ತದೆ. ಇಲ್ಲಿ ಹಾಗಲ್ಲ. ವ್ಯಂಗ್ಯ ವಾಚ್ಯಗಳೆರಡೂ ಒಂದೇ. ವ್ಯಂಗ್ಯಾರ್ಥವನ್ನು ಅದೇ ರೀತಿಯಲ್ಲಿವಾಚ್ಯವಾಗಿಸುವುದು ಅಸಾಧ್ಯ ಪ್ರಕಾರಾಂತರದಿಂದ ಸಾಧ್ಯ. ಉದಾ:– ' ತಮ್ಮ ಪಾದಧೂಳಿಯಿಂದ ನಮ್ಮ ಮನೆ ಪಾವನವಾಗಲಿ ' ಇದು ವಾಚ್ಯ. ' ನೀವು ನಮ್ಮ ಮನೆಗೆ ಬರಬೇಕು ' ಎಂಬುದು ವ್ಯಂಗ್ಯ. ಇದು ವಿವಕ್ಷಿತವಾದ ಅರ್ಥ. ಅದನ್ನೇ ಪ್ರಕಾರಾಂತರದಿಂದ ಹೇಳಲಾಗಿದೆ. ಇಲ್ಲಿ ಚಮತ್ಕಾರಿಯಾಗಿರುವುದು ವಾಚ್ಯ. ವ್ಯಂಗ್ಯವು ಕೇವಲ ಉಪಸ್ಕಾರಕ.

ಉದಾ:–

**ಸರಸಿಜ ಸಖನಾ ನರಪತಿ**
**ಯರಿಗಳ ಸೌಧಾಗ್ರದಲ್ಲಿ ಮೊಳೆತೆಳೆವುಲ್ಲಾ।**
**ತುರಿಪ ತುರಂಗಮನರುಣಂ**
**ಬರಸೆಳೆದು ಮರಳ್ಚೆ ನಡೆವನೆಡದೊಳ್ ಬಲದೊಳ್॥**

—— ರಾ.ವಿ.೫–೧೧.

ಸತ್ಯೇಂದ್ರ ಚೋಳರಾಜನ ವೈರಿಗಳ ಭವನಗಳ ಮೇಲೆ ಬೆಳೆದಿದ್ದ ಎಳೆವುಲ್ಲನ್ನು ತಿನ್ನುವುದಕ್ಕೆ ಕಾತುರ ಪಡುತ್ತಿದ್ದ ಕುದುರೆಗಳನ್ನು ಸಾರಥಿಯಾದ ಅರುಣನು ಬರಸೆಳೆದು ಹಿಂದಿರುಗಿಸುವಾಗ ಸೂರ್ಯನು ಎಡಬಲಗಳಲ್ಲಿ ಹೋಗುತ್ತಿದ್ದನೆಂದು ಕವಿ ವರ್ಣಿಸುತ್ತಾನೆ. ಇದರಿಂದ ರಾಜನ ಪರಾಕ್ರಮಾತಿಶಯವು ಗಮ್ಯವಾಗುತ್ತದೆ. ಇಲ್ಲಿಸತ್ಯೇಂದ್ರ ಚೋಳನ ಪರಾಕ್ರಮವು ಕಾರಣ. ವೈರಿಭವನಗಳ ಮೇಲೆ ಹುಲ್ಲು ಬೆಳೆದಿರುವುದು ಕಾರ್ಯ. ಇವೆರಡೂ ರಾಜನ ವರ್ಣನೆಯಲ್ಲಿ ಪ್ರಸ್ತುತಗಳೇ ಆಗಿರುವುದರಿಂದ ಇದು ಪರ್ಯಾಯೋಕ್ತವೆನಿಸಿದೆ.

**ಅನ್ಯ ಉದಾಹರಣೆಗಳು:**

**ಹರಿ ಮುಖ್ಯಾಮರರಂ ಪಡಲ್ವಡಿಸಿ ಲೋಕಾನೀಕಮಂ ಪರ್ಬಿಮ.**
**ರ್ಬಿರದೇಳ್ತರ್ಪವೊಲೊತ್ತಿ ಸುತ್ತಿ ಪರಿತರ್ಪತ್ಯುಗ್ರಹಾಲಾಹಲೋ।**

ತ್ಕರಮಂ ತಾಳದೊಡೋವೋ ದೇವ ಸತಿಯರ್ ಸೀಮಂತ ಸಿಂದೂರ ರಾ
ಗರಜಶ್ರೀಯನದೆಂತು ತಾಳ್ದಪರೋ ಪೇಳ್ ಶ್ರೀಶೈಲಜಾವಲ್ಲಭಾ ॥

ನಿರ್ಹಾಸಂ ಕುಚಕಂಜಕುಟ್ಮಲಯುಗಂ ಮುಗ್ಧಾನನಂ ವರ್ಜಿತಾಂ
ತರ್ಹಾಸಂ ಕುಸುಮಚ್ಯುತಂ ಕಚಭರಂ ಕರ್ಣಂ ಕನತ್ಕರ್ಣಿಕಾ ।
ಬರ್ಹ ಭ್ರಷ್ಟಮೆನಲ್ಕೆ ಶೋಕತಪವಮಂ ನಿಃ ಕೋಶ ನಿರ್ಗ್ರಂಥಮಿ
ರ್ದರ್ಹದ್ದಾಸನ ಖಡ್ಗ ಮೀವುದು ರಿಪುಸ್ತ್ರೀಯರ್ಗೆ ತಾರುಣ್ಯದೊಳ್ ॥

— ನೇಮಿ. ೧–೭೨.

ಜೀವವೇ ಕಣ್ಣಾಗಿ ಕಾದು ನಿಂತಿಹೆ ಮನದೊ
ಳೊರತೆಯೂರಿದೆ ನೂರು ಯುಗದ ಆಸೆ

—ಗಂಗಾಧರ ಚಿತ್ತಾಲ, 'ಸಮಗ್ರಕಾವ್ಯ' (ಪುಟ–೨೨)

ಕವನ ಕಾಮಿನಿ ಅವನ ಕೊಳಲಾಗಿ ಮಾಡಿದಳು
ಸವಿಹಾಡುಗಳನೂದಿದಳು ದಿನದಿನ ;

— ಗೋಪಾಲಕೃಷ್ಣ ಅಡಿಗ, 'ಸಮಗ್ರಕಾವ್ಯ' (ಪುಟ–೬೨)

## ೨೪ . ಆಕ್ಷೇಪ .

ಲಕ್ಷಣ :– ವಿಶೇಷವಾದ ಅರ್ಥದ ಪ್ರತೀತಿಯ ಸಲುವಾಗಿ ಹೇಳಿದ ಅಥವಾ ಹೇಳಲಿರುವ ಪ್ರಸ್ತುತವಾದ ಅರ್ಥದ ತೋರಿಕೆಯ ನಿಷೇಧವಿದ್ದರೆ ಆಕ್ಷೇಪ.

**( ಉಕ್ತವಕ್ಷ್ಯಮಾಣಯೋ : ಪ್ರಾಕರಣಿಕಯೋ : ವಿಶೇಷ ಪ್ರತೀತ್ಯರ್ಥಂ ನಿಷೇಧಾಭಾಸ ಆಕ್ಷೇಪ : – ರುಯ್ಯಕ )**

ತಾನು ಹೇಳಿದ ವಿಷಯವನ್ನೋ ಹೇಳಲಿರುವ ವಿಷಯವನ್ನೋ ಅದು ಇನ್ನಷ್ಟು ಪರಿಣಾಮಕಾರಿಯಾಗಲೆಂದು ಅಲ್ಲಗಳೆದಂತೆ ಮಾಡುವುದು ಆಕ್ಷೇಪದ ದಾರಿ. ನೆರೆಮನೆಯವರ ಸುದ್ದಿಯನ್ನೆಲ್ಲ ಹೇಳಿಯಾದ ಮೇಲೆ 'ಅಯ್ಯೋ ಅವರ ಸುದ್ದಿ ನಮಗೇಕೆ?' ಎಂದು ಅಲ್ಲಗಳೆವ ಹೆಂಗಳೆಯರ ಮಾತಿನ ರೀತಿಯನ್ನು ಈ ಅಲಂಕಾರವು ಅನುಸರಿಸುತ್ತದೆ . ಇಲ್ಲಿ ನಿಷೇಧವು ತೋರಿಕೆಯದೇ ಹೊರತು ನಿಜವಾದುದಲ್ಲ . ಅದು ವಿಶೇಷವಾದ ಅರ್ಥವನ್ನು ತಿಳಿಸುವುದಕ್ಕಾಗಿ ಇರುತ್ತದೆ. ಈ ಅಂಶವನ್ನು ಗಮನಿಸಿದಾಗ ಈ ಅಲಂಕಾರವು ಅನೇಕ ಬಗೆಗಳಲ್ಲಿ ಸಂಭವಿಸುವುದು ಸಾಧ್ಯ .

ಉದಾ :–

**ಮಲೆನಾಡ ಮನ್ನೆಯರಿರಾ**
**ತೊಲಗಿಂ ಮಹಿಶೂರಬಲದ ದೂಳ್ಗಾಣದ ಮುನ್ ।**
**ತೊಲಗದೊಡಮಿರಿ ಪುದರ್ಕಂ**
**ಫಲಮೊಳವಾ ಬರ್ದಿಲ ನಾಡು ನೆಲೆವೀಡಕ್ಕುಂ ॥**

ಇಲ್ಲಿ ಮೊದಲು 'ತೊಲಗಿಂ ' ಎಂದು , ಅನಂತರ 'ತೊಲಗದೊಡಮಿರಿ ' ಎಂದು ನಿಷೇಧಿಸಲಾಗಿದೆ. ಆ ನಿಷೇಧವು ಮುಂದಿನ ವಿಶೇಷಾರ್ಥವನ್ನು ಸೂಚಿಸುತ್ತದೆ. 'ಬರ್ದಿಲನಾಡು ನೆಲೆವೀಡಾಗುವ ಫಲ ಸಿಗುತ್ತದೆ' ಎಂಬುದು ವಿಶೇಷಾರ್ಥ. 'ಸಾಯುವುದಕ್ಕೆ ಬಯಸುವಿರಾದರೆ ಇರಬಹುದು' ಎಂಬುದು ವ್ಯಂಗ್ಯ. ಹೀಗಾಗಿ ನಿಷೇಧವು ಆಭಾಸ ಮಾತ್ರವಾಗಿದೆ.

ಉದಾ:–

**ಒಡನಮೃತಂ ಜನಯಿಸೆ ಪಾ**
**ಲ್ಗಡಲೊಳ್ ವಿಧು ಪುಟ್ಟಿದಂ ಕಳಾಮಯನೆಂಬೀ**
**ನುಡಿಪುಸಿ ಜಡಾತ್ಮಕಂ ವಿಷ**
**ದೊಡನೆ ವಿಷಾಕರದೊಳೊಗೆದನೆಂಬುದೆ ಸತ್ಯಂ ॥**

ಇಲ್ಲಿ ಕಲಾಮಯನಾದ ಚಂದ್ರನು ಕ್ಷೀರಸಾಗರದಲ್ಲಿ ಅಮೃತದೊಂದಿಗೆ

ಹುಟ್ಟಿದನೆಂಬುದು ಸುಳ್ಳು; ಜಡಾತ್ಮಕನಾದ ಅವನು ವಿಷದೊಡನೆ ವಿಷಾಕರ (ಸಮುದ್ರ) ದಲ್ಲಿ ಹುಟ್ಟಿದನೆಂಬುದು ನಿಜ – ಎಂದು ಕವಿಯು ಹೇಳುತ್ತಾನೆ. 'ಪುಸಿ' ಎಂಬ ಮಾತಿನಲ್ಲಿ ವ್ಯಕ್ತವಾಗಿರುವ ನಿಷೇಧವು ವಿಶೇಷಾರ್ಥವನ್ನು ಹೇಳುವುದಕ್ಕಾಗಿದೆ. ಇಲ್ಲಿ ಸಾಭಿಪ್ರಾಯವುಳ್ಳ ವಿಶೇಷಣಗಳ ಮೂಲಕ ವಿಶೇಷಾರ್ಥವು ವ್ಯಂಗ್ಯವಾಗಿದೆ. ಆಕ್ಷೇಪಕ್ಕೆ ಪರಿಕರವು ಪೋಷಕವಾಗಿದೆ.

**ಅನ್ಯ ಉದಾಹರಣೆಗಳು:**

ಪದದೆನ್ನಂ ಕಾಮನಿತ್ತಂ ತನಗೆನಲದು ಪೊರ್ದಲ್ ನೆವಂ ಕೂರ್ಪೆನಾನೆಂ
ಬುದು ವೇಶ್ಯಾಲಾಪವಾಂ ತನ್ನಯ ವಿರಹದೆ ಸತ್ತಪೆನೆಂಬುದು ದೃಷ್ಟ ।
ಕ್ಕದ ಸತ್ಯಂ ಬರ್ಪೆ ನಾನೆಂಬುದು ಚಪಲತೆ ತಾ ಬರ್ಪುದೆಂದಂದು ಸೌಭಾ
ಗ್ಯದ ಗರ್ವಂ ಮೇಲೆ ಬಿಳ್ದಾನೆಳಸಿದಪನೆನಲ್ ಬಂಧಕೀಧಾರ್ಷ್ಟ್ಯರ್ಕ ಮಲ್ತೇ ॥

— ಕಾದಂಬರಿ. ೮ – ೩೫

ನಾ ಕಾಣದಿದ್ದರು ಕ್ಷಣಕಾಲ ನಿನ್ನನು
ಉತ್ಕಂಠಳಾಗುತೆ ನಾನು....
ಇಷ್ಟು ಸಾಕಿನ್ನೊರೆದುಳಿದಪ್ರಿಯವನು
ನಿನಗಾಗಬೇಕಾದುದೇನು

— ಎಸ್. ವಿ. ಪರಮೇಶ್ವರ ಭಟ್. 'ಇಂದ್ರಚಾಪ' (ಪುಟ – ೧೩೩)

# ೨೫. ನಿದರ್ಶನಾ.

**ಲಕ್ಷಣ:–** ಎರಡು ವಸ್ತುಗಳ ನಡುವೆ ಸಂಬಂಧವಿರದಿದ್ದರೂ ಅವುಗಳಲ್ಲಿ ಸಂಬಂಧವೇರ್ಪಟ್ಟು ಆ ಸಂಬಂಧವು ಉಪಮೆಯಲ್ಲಿ ಪರ್ಯವಸಾನವಾಗುತ್ತಿದ್ದರೆ ಅದು ನಿದರ್ಶನಾ.

( **ಅಭವನ್ ವಸ್ತುಸಂಬಂಧ ಉಪಮಾ ಪರಿಕಲ್ಪಕ :** – ಕಾವ್ಯಪ್ರಕಾಶ. )

ನಿದರ್ಶನೆಯೆಂದರೆ ದೃಷ್ಟಾಂತ ಅಥವಾ ಉದಾಹರಣ. ಉದಾಹರಣೆಯನ್ನು ಕೊಡುವುದೇ ನಿದರ್ಶನವಾಗುತ್ತದೆ. ಪರಸ್ಪರ ಸಂಬಂಧವಿಲ್ಲದ ಎರಡು ವಸ್ತುಗಳನ್ನು ಜೊತೆಯಾಗಿಟ್ಟು ಅವುಗಳ ನಡುವಣ ಸಾದೃಶ್ಯವನ್ನು ತೋರುವುದು ಇದರ ಸ್ವರೂಪ. ಇದರ ಹಿನ್ನೆಲೆಯಲ್ಲಿರುವ ತತ್ವವೂ ಬಿಂಬ – ಪ್ರತಿಬಿಂಬ ಭಾವವೇ. ಮೇಲ್ನೋಟಕ್ಕೆ ಪದಾರ್ಥಗಳ ಸಂಯೋಜನೆಯು ಅಸಂಗತವಾಗಿ ಕಾಣುತ್ತದೆ. ಆದರೆ ಪರ್ಯಾಲೋಚಿಸಿದಾಗ ಅವುಗಳ ಆಂತರಂಗಿಕ ಸಂಬಂಧವು ಸ್ಫುಟವಾಗುತ್ತದೆ. ಹೀಗಿರುವುದರಿಂದ ಇದನ್ನು ಗಮ್ಯೌಪಮ್ಯ ಮೂಲಕವಾದ ಅಲಂಕಾರವೆಂದು ಹೇಳಲಾಗಿದೆ. ಉಪಮಾ ವಾಚಕ ಶಬ್ದಗಳಿಲ್ಲದಿರುವಾಗಲೂ ಔಪಮಿಕ ಸಂಬಂಧವಿರುತ್ತದೆಯೆಂಬುದು ತಾತ್ಪರ್ಯ.

ಉದಾ :–

**ಆಗಳತಿರೋಷದಿಂದಾಲಿಗಳು ಕೆಂಪಡರ**
**ಲೀಗಳರ್ಜುನನ ಬಾಣಕೆ ನಿನ್ನ ಪುಣ್ಯಮಂ**
**ನೀಗಿದೆಯಲಾ ದೇವ ನೋಡು ಬಹದಿವ್ಯಾಸ್ತ್ರಮಂಕತ್ತರಿಸದಿರ್ದೊಡೆ ।**
**ಭೋಗದೊಳರುಂಧತಿಯ ಕೂಡಿಹ ವಸಿಷ್ಠನಂ**
**ಪೋಗಿ ಕೊಂದವನ ದುರ್ಗತಿಗೆ ತಾನಿಳಿವೆನೆನು**
**ತಾಗಸದೊಳರ್ಕನಂತ್ಯೆತಪ್ಪ ಸರಳಂ ಸುಧನ್ವನಿಕ್ಕಡಿಗೈದನು ॥**

— ಜೈಮಿನಿ ಭಾರತ. ೧೩ –೪೦.

ಇಲ್ಲಿ ದಿವ್ಯಾಸ್ತ್ರ ಭೇದನವನ್ನು ಮಾಡದಿದ್ದರೆ ಭೋಗದಲ್ಲಿ ಅರುಂಧತಿಯನ್ನು ಕೂಡಿದ ವಸಿಷ್ಠನನ್ನು ಕೊಂದ ದೋಷವು ತನಗೆ ಪ್ರಾಪ್ತವಾಗಲೆಂದು ಹೇಳಲಾಗಿದೆ. ಆ ದೋಷವು ಇವನಿಗೆ ಪ್ರಾಪ್ತವಾಗುವುದು ಅಸಂಭವ. 'ತತ್ಸಮಾನವಾದ' ಎಂದು ಸಾದೃಶ್ಯವನ್ನು ಕಲ್ಪಿಸಬೇಕು.

ದೃಷ್ಟಾಂತ ಮತ್ತು ನಿದರ್ಶನಗಳಲ್ಲಿ ತುಂಬ ಹೋಲಿಕೆಯಿದೆ. ಎರಡೂ ಅಲಂಕಾರಗಳು ಸಾದೃಶ ಮೂಲವಾದವು; ಎರಡೂ ಎರಡು ವಾಕ್ಯವುಳ್ಳವು. ಮತ್ತು ಎರಡರಲ್ಲಿಯೂ ಬಿಂಬ – ಪ್ರತಿಬಿಂಬ ಭಾವವಿದೆ. ಆದರೆ ನಿದರ್ಶನೆಯು ಒಂದು ವಾಕ್ಯದಲ್ಲಿಯೂ ಸಾಧ್ಯ. ಎರಡು ವಾಕ್ಯಗಳಿದ್ದರೆ ಅವು ಪರಸ್ಪರಾವಲಂಬಿಗಳಾಗಿರುತ್ತವೆ. ದೃಷ್ಟಾಂತದಲ್ಲಿ ಎರಡು ವಾಕ್ಯಗಳು ಸ್ವತಂತ್ರವಾಗಿರುತ್ತವೆ, ಒಂದೇ ವಾಕ್ಯದಲ್ಲಿ ದೃಷ್ಟಾಂತವು ಸಂಭವಿಸುವುದಿಲ್ಲ. ನಿದರ್ಶನೆಯಲ್ಲಿ

ಬಿಂಬ – ಪ್ರತಿಬಿಂಬ ಭಾವವನ್ನು ಮೊದಲು ಗ್ರಹಿಸಿ ವಾಕ್ಯದ ಅರ್ಥವನ್ನು ಗ್ರಹಿಸಬೇಕಾಗುತ್ತದೆ. ದೃಷ್ಟಾಂತದಲ್ಲಿ ವಾಕ್ಯಗಳ ಅರ್ಥವನ್ನು ಗ್ರಹಿಸಿದ ಮೇಲೆ ಅವುಗಳಲ್ಲಿರುವ ಬಿಂಬ – ಪ್ರತಿಬಿಂಬ ಭಾವವನ್ನು ಗ್ರಹಿಸಲಾಗುವುದು. ಅವುಗಳಲ್ಲಿ ಭೇದವು ಸೂಕ್ಷ್ಮವಾಗಿದ್ದರೂ ಸ್ಪಷ್ಟವಾಗಿದೆ.

ಅನ್ಯ ಉದಾಹರಣೆಗಳು:

ಆವನು ಕಾನನದೊಳು ಕುಳಿತಳುವವ
ನಾವನು ಶವಶೃಂಗಾರವ ಮಾಡುವ
ನಾವನು ಜಲಜವ ನಿರ್ಜಲದೊಳು ಭ್ರಮದಿಂದಾರೋಪಿಸುವವ ।
ಆವನು ಬಧಿರಗೆ ಮೆಲ್ಲನೇ ಉಸುರುವ
ನಾವನು ಕುರುಡಗೆ ಕನ್ನಡಿ ತೋರುವ
ನಾವನು ಭಯನರಿಯದ ಮೂರ್ಖಮದಾಂಧನ ಭಜಿಸುವನು ॥

—— ಕನ್ನಡ ಕುವಲಯಾನಂದ.

ಜಗವಿದೊಂದು ಚಕ್ರವ್ಯೂಹ
ಬಗೆಗೆ ಅದನು ಹೊಗುವ ಮೋಹ
ಅದನು ಹೊಗಲು ದುಡಿವೆವೆ ?
ಮುಗಿಲ ಹೂವ ಮುಡಿವೆವೇ ?

——ಗೋಪಾಲಕೃಷ್ಣ ಅಡಿಗ. 'ಸಮಗ್ರಕಾವ್ಯ'(ಪುಟ – ೧೮)

ಎಂಥ ಕತ್ತಲೆಯಲ್ಲು ಸ್ವಂತ ತೇಜವ ಬಿಡದ
ಚಿಕ್ಕ ಬೆಳಕಿನ ಧೈರ್ಯ, ಶಾಂತಿ, ಔದಾರ್ಯ
ಈ ನಾಡಿನೆಡೆಯಲ್ಲು ಮೂಡಬಹುದು.

——ಚೆನ್ನವೀರ ಕಣವಿ. 'ಸಮಗ್ರಕಾವ್ಯ'(ಪುಟ – ೨೧೧)

ಕಲ್ಲೊಂದು ಮೂರ್ತಿಯಾಗಿ
ಕಂಗೊಳಿಸಿ
ಹಳ್ಳವೊಂದು ನದಿಯಾಗಿ
ಹರಿದು
ಗುಡ್ಡವೊಂದು ಗಿಡಮರ ಸಹಿತ
ಅಡ್ಡಾಡ ತೊಡಗಿತು!
ನೀನಿನ್ನೂ ನನ್ನ
ಮರೆಯಲಾಗಿಲ್ಲವೆಂಬ
ಮಾತು ಕೇಳಿದೆ!

——ಕಮಲಾ ಹೆಮ್ಮಿಗೆ 'ಸೂಜಿಮಲ್ಲಿಗೆ' (ಪುಟ – ೧೯).

# ವಿರೋಧ ಮೂಲಕ ಅಲಂಕಾರಗಳು.

## ೨೬. ವಿರೋಧಾಭಾಸ.

ಲಕ್ಷಣ :- ನಿಜವಾಗಿ ವಿರೋಧವಿಲ್ಲದಿದ್ದರೂ ವಿರೋಧವಿರುವಂತೆ ತೋರಿದರೆ ವಿರೋಧಾಭಾಸ.

( **ಆಭಾಸತ್ವೇ ವಿರೋಧಸ್ಯ ವಿರೋಧಾಭಾಸ ಇಷ್ಯತೇ** – ಕುವಲಯಾನಂದ )

ವಿರೋಧಾಭಾಸವೆಂದರೆ ವಿರೋಧದ ತೋರಿಕೆ. ಇದಕ್ಕೆ ವಿರೋಧವೆಂದು ಹೆಸರಿದೆ. ವಾಸ್ತವವಾಗಿ ಎರಡು ವಸ್ತುಗಳಲ್ಲಿ ವಿರೋಧವಿಲ್ಲದಿದ್ದರೂ ವಿರೋಧವಿರುವಂತೆ ನಿರೂಪಿಸುವುದು ಇಲ್ಲಿಯ ವೈಶಿಷ್ಟ್ಯ. ಇದು ವಿರೋಧಮೂಲವಾದ ಅಲಂಕಾರವಾಗಿದೆ. ಭಿನ್ನ ಭಿನ್ನ ಆಶ್ರಯಗಳಲ್ಲಿರುತ್ತವೆಂದು, ಪ್ರಸಿದ್ಧವಾದ ವಸ್ತುಗಳು ಒಂದೇ ಆಶ್ರಯದಲ್ಲಿರುತ್ತವೆಂದು ನಿರೂಪಿಸಲಾಗುತ್ತದೆ. ಇದು ವಿರೋಧಕ್ಕೆ ಕಾರಣವಾದರೆ ಪರಾಮರ್ಶಿಸಿದಾಗ ಆ ವಿರೋಧಕ್ಕೆ ಪರಿಹಾರವೂ ಕಂಡುಬರುತ್ತದೆ. ಅಂದರೆ ನಿಜವಾಗಿಯೂ ವಿರೋಧವಿರುವ ವಸ್ತುಗಳ ಏಕತ್ರ ಸ್ಥಿತಿಯನ್ನು ಬಣ್ಣಿಸಿದರೆ ಅದಕ್ಕೆ ಅಲಂಕಾರತ್ವವಿಲ್ಲ. ಉದಾ :- "ಕೋಣವು ಕರು ಹಾಕಿದಾಗ ಮೀನುಗಳು ಮರವನ್ನೇರಿದವು" ಈ ವಿರೋಧವು ಪರಿಹರಿಸಲ್ಪಡುವಂತಿದ್ದರೆ ಮಾತ್ರ ಅಲಂಕಾರವಾಗುತ್ತದೆ. ಇಲ್ಲವಾದರೆ ಅಸಂಬದ್ಧ ವಚನವಾಗುತ್ತದೆ.

ಭಾಮಹ, ದಂಡಿ, ಮುಂತಾದ ಪ್ರಾಚೀನ ಆಲಂಕಾರಿಕರು ವಿರೋಧಾಲಂಕಾರದ ಬಗ್ಗೆ ಹೇಳಿದ್ದರೂ ಅದರ ವಾಸ್ತವಿಕ ಸ್ವರೂಪವನ್ನು ಸ್ಪಷ್ಟವಾಗಿ ಹೇಳಿದವನು ವಾಮನ. ಅವನು ವಿರುದ್ಧಾಭಾಸತ್ವವೇ ವಿರೋಧವೆನ್ನುತ್ತಾನೆ. ( **ವಿರೋಧಾಭಾಸತ್ವಂ ವಿರೋಧಃ**) ಅನಂತರ ಅದನ್ನು ಮಮ್ಮಟ ಇನ್ನಷ್ಟು ಸ್ಪಷ್ಟವಾಗಿ ಹೇಳಿದ. ಜಾತಿ, ಗುಣ, ಕ್ರಿಯಾ, ದ್ರವ್ಯಗಳ ಆಧಾರದ ಮೇಲೆ ಹತ್ತು ಪ್ರಕಾರಗಳಲ್ಲಿ ವಿಂಗಡಿಸಿದ. ರುಯ್ಯಕನು ವಿರೋಧದ ಪರಿಹಾರವಿಲ್ಲದಿದ್ದರೆ ಅದು ದೋಷವಾಗುವುದೆಂಬ ಸಂಗತಿಯನ್ನು ಸೇರಿಸುತ್ತಾನೆ. ಮುಂದಿನವರು ಹೆಚ್ಚು ಕಡಿಮೆ ಇವರ ಮತವನ್ನೇ ಅನುಸರಿಸುತ್ತಾರೆ.

ನಿಜವಾದ ವಿರೋಧವಿಲ್ಲದಿದ್ದಲ್ಲಿ ವಿರೋಧದ ಭ್ರಾಂತಿಯನ್ನು ಹುಟ್ಟಿಸುವುದು ಇಲ್ಲಿ ಚಮತ್ಕಾರಕ್ಕೆ ಕಾರಣವೆಂಬುದನ್ನು ಗಮನಿಸಿದ್ದೇವೆ. ಅಂಥ ವಿರೋಧವನ್ನು ಕವಿಯು ನಿರೂಪಿಸುವುದು ಎರಡು ರೀತಿಯಿಂದ – ಶಬ್ದದ ಮೂಲಕ ಮತ್ತು ಅರ್ಥದ ಮೂಲಕ. ಶಾಬ್ದಿಕ ವಿರೋಧವು ವಾಚ್ಯ. ಅಂದರೆ ಅಲ್ಲಿ ಕವಿಯು ಸ್ಪಷ್ಟವಾಗಿ 'ಹಾಗಿದ್ದೂ ಹೀಗೆ' ಎಂದು

ವಿರೋಧದತ್ತ ನಮ್ಮ ಗಮನವನ್ನು ಸೆಳೆಯುತ್ತಾನೆ. ಉದಾ :– ''ಬೇಡಿದವರಿಗೆ ಬೇಕಾದ ಐಶ್ವರ್ಯವನ್ನು ಕೊಡುವ ಶ್ರೀಮಂತನಾಗಿದ್ದರೂ ತಾನು ಗಜಚರ್ಮಾಂಬರ'' ಕೆಲವೊಮ್ಮೆ ಕವಿಯು ವಿರೋಧವಾಚಕ ಪದಗಳನ್ನು ಬಳಸದೆಯೂ ಇರಬಹುದು. ಆಗ ಅದು ಅರ್ಥವೆನಿಸುತ್ತದೆ.

ವಿರೋಧವು ಹತ್ತು ಪ್ರಕಾರಗಳಲ್ಲಿರುತ್ತದೆಂದು ಮಮ್ಮಟನು ಹೇಳುತ್ತಾನೆ. ಜಾತಿ, ಗುಣ, ಕ್ರಿಯೆ, ಮತ್ತು ದ್ರವ್ಯಗಳಲ್ಲಿ ಪರಸ್ಪರ ವಿರೋಧವನ್ನು ಹೇಳುವುದರಿಂದ ಇದು ಸಾಧ್ಯವಾಗುತ್ತದೆ. – ಜಾತಿ – ಜಾತಿ, ಜಾತಿ – ಗುಣ, ಜಾತಿ– ಕ್ರಿಯೆ, ಜಾತಿ – ದ್ರವ್ಯ; ಗುಣ – ಗುಣ, – ಗುಣ – ಕ್ರಿಯೆ ; ಗುಣ– ದ್ರವ್ಯ ; ಕ್ರಿಯೆ – ಕ್ರಿಯೆ, ಕ್ರಿಯೆ – ದ್ರವ್ಯ, ದ್ರವ್ಯ – ದ್ರವ್ಯ . ಹೀಗೆ ಹತ್ತು ಪ್ರಕಾರಗಳಾಗುತ್ತವೆ . ವಿರೋಧವು ಒಂದು ತತ್ತ್ವವೂ ಹೌದು ; ಅಲಂಕಾರವೂ ಹೌದು. ವಿರೋಧಮೂಲವಾದ ಅಲಂಕಾರಗಳಲ್ಲೆಲ್ಲಾ ವಿರೋಧವು ಕಂಡು ಬರುತ್ತದೆ . ವಿಷಮ, ವಿಭಾವನಾ, ವಿಶೇಷೋಕ್ತಿ ಮುಂತಾದ ಅಲಂಕಾರಗಳಲ್ಲಿಯೂ ವಿರೋಧವಿದೆ. ಹಾಗಾಗಿ ವಿರೋಧದ ಸೀಮಾ ರೇಖೆಯನ್ನು ಸ್ಪಷ್ಟಪಡಿಸಲು ಈ ಪ್ರಭೇದಗಳ ಅರಿವು ಅವಶ್ಯ. ಆದರೆ ಜಗನ್ನಾಥನು ಹೇಳುವಂತೆ ಈ ರೀತಿಯ ಪ್ರಭೇದಗಳನ್ನು ಕಲ್ಪಿಸುವಲ್ಲಿ ಸ್ವಾರಸ್ಯವಿಲ್ಲ. ಶುದ್ಧ ಮತ್ತು ಶ್ಲೇಷ ಮೂಲಕವೆಂಬ ಎರಡೇ ಭೇದಗಳು ಸಾಕು. ಶುದ್ಧದಲ್ಲಿ, ವಿರೋಧವು ಅರ್ಥದ ಮೂಲಕ ತಿಳಿದು ಬಂದರೆ, ಶ್ಲೇಷ ಮೂಲಕ ಪ್ರಭೇದದಲ್ಲಿ ಶ್ಲಿಷ್ಟಪದಗಳು ವಿರೋಧದ ತೋರ್ಕೆಯನ್ನು ಹುಟ್ಟಿಸುತ್ತವೆ.

ಉದಾ :

**ಕನಕನಗೇಂದ್ರ ಧರ್ಮಕರನಾಗಿಯುಮುನ್ನತಧರ್ಮ ಹಂತ್ರುಸಂ**
**ಜನಿತ ಪರಾರ್ಥನಾಗಿಯು ಮುದಗ್ರ ಪರಾರ್ಥಹರಂ ಪ್ರದತ್ತಕಾ ।**
**ಮನುಮೆನಿಸಿರ್ದು ಕಾಮಮಥನಂ ಪರಮೋಕ್ಷದನಾಗಿಯುಂ ಸನಾ ।**
**ತನ ಪರಮೋಕ್ಷಲುಬ್ಧನೆನಿಸಿರ್ದನಹೀಂದ್ರ ಭೂಷಣಂ ॥**

ಈ ಪದ್ಯದಲ್ಲಿ ಶಿವನ ಸ್ತುತಿಯಿದೆ. 'ಮೇರು ಪರ್ವತದಷ್ಟು ಧರ್ಮವನ್ನು ಮಾಡುವವನಾಗಿಯೂ ಉನ್ನತವಾದ ಧರ್ಮವನ್ನು ನಾಶಪಡಿಸುವವನು ' ಎಂದಾಗ ವಿರೋಧ. ಧರ್ಮ ಎಂಬ ಶಬ್ದಕ್ಕೆ ಧನಸ್ಸು ಮತ್ತು ಯಮಧರ್ಮ ಎಂಬ ಅರ್ಥಗಳಿವೆ. 'ಮೇರು ಪರ್ವತರೂಪದ ಧನಸ್ಸನ್ನು ಹಿಡಿದವನೂ, ಯಮಧರ್ಮನನ್ನು ನಿಯಂತ್ರಿಸುವವನೂ' ಎಂದು ಹೇಳಿದರೆ ವಿರೋಧ ಪರಿಹಾರ. 'ಪರಾರ್ಥವನ್ನುಂಟು ಮಾಡುವವನಾಗಿಯೂ ಪರರ ಅರ್ಥವನ್ನು ಅಪಹರಿಸುವವನು ಎಂದರೆ ವಿರೋಧ, ಪರಾರ್ಥವೆಂಬ ಪದಕ್ಕೆ ಪರರ ಪ್ರಯೋಜನ ಮತ್ತು ಪರವಸ್ತು ಎಂಬ ಅರ್ಥಗಳಿವೆ. ಪರಾರ್ಥವನ್ನುಂಟು ಮಾಡುವವನೂ, ಪರವಸ್ತುವೂ ಆದ ಹರ' ಎಂದರೆ ವಿರೋಧ ಪರಿಹಾರ. ' ಕಾಮನೆಗಳನ್ನು ನೀಡಿಯೂ ಕಾಮನೆಗಳನ್ನು ನಾಶ ಮಾಡುವವ' ನೆಂದರೆ ವಿರೋಧ. ಕಾಮ ಎಂಬ ಶಬ್ದಕ್ಕೆ ಇಷ್ಟಾರ್ಥ ಮತ್ತು ಮನ್ಮಥ ಎಂಬ ಅರ್ಥಗಳಿವೆ. 'ಇಷ್ಟಾರ್ಥಗಳನ್ನು ನೀಡುವವನೂ ಮನ್ಮಥನನ್ನು ನಾಶಪಡಿಸಿದವನೂ' ಎಂದರೆ ವಿರೋಧ ಪರಿಹಾರ. ಹಾಗೆಯೇ 'ಪರಮ ಮೋಕ್ಷವನ್ನು ಕೊಡುವವನಾಗಿದ್ದರೂ ಸನಾತನವಾದ

ಪರಮೋಕ್ಷದಲ್ಲಿ ಆಸಕ್ತಿಯುಳ್ಳವನು ' ಎಂದರೆ ವಿರೋಧ. ಪರಮೋಕ್ಷ ಎಂಬ ಪದಕ್ಕೆ ಪರಮ ಮೋಕ್ಷ ಹಾಗೂ ಪರಮ ಉಕ್ಷ, ಶ್ರೇಷ್ಠವಾದ ಎತ್ತು ಎಂಬ ಅರ್ಥಗಳಿವೆ. ' ಪರಮ ಮೋಕ್ಷವನ್ನು ಕೊಡುವವನೂ ಸನಾತನವಾದ ಶ್ರೇಷ್ಠವಾದ ಎತ್ತನ್ನು (ನಂದಿಯನ್ನು) ವಾಹನವಾಗಿಸಿಕೊಂಡವನೂ, ಎಂದರೆ ವಿರೋಧ ಪರಿಹಾರವಾಗುತ್ತದೆ.

ಮೇಲಿನ ಶ್ಲೋಕವು ಶ್ಲೇಷವನ್ನು ಆಧರಿಸಿದೆ. ಕೆಲವೆಡೆ ಅಭಂಗ ಶ್ಲೇಷವಿದ್ದರೆ ಕೆಲವೆಡೆ ಸಭಂಗ ಶ್ಲೇಷವೂ ಇದೆ. ವಿರೋಧವು ಶಬ್ದಗಳಲ್ಲಿದೆಯೇ ಹೊರತು ಅರ್ಥದಲ್ಲಿ ಇಲ್ಲ. ಇದು ಹೆಚ್ಚು ಅವಲಂಬಿಸಿದ್ದು ಶಬ್ದ ಚಮತ್ಕಾರವನ್ನು. ಅಪಾರ್ಥವನ್ನೂ, ಅರ್ಥವನ್ನೂ, ನಾವೇ ಮಾಡಿಕೊಳ್ಳಬೇಕಾಗುತ್ತದೆ. ಇದು ಸಾಕಷ್ಟು ಕ್ಲೇಶದಾಯಕವೂ ಹೌದು. ಇಂಥಲ್ಲಿ ಪ್ರತಿಭೆಗಿಂತ ಪಾಂಡಿತ್ಯದ ಪಾಲು ಹೆಚ್ಚು. ಶುದ್ಧ ವಿರೋಧದಲ್ಲಿ ಶ್ಲೇಷಕ್ಕೆ ಸ್ಥಾನವಿಲ್ಲ.

ಉದಾ:—

> ಆರವಮಂ ನಿರ್ಜಿತ ಕಂ
> ಠೀರವರವಮಂ ನಿರಸ್ತ ಘನರವಮಂಕೋ ।
> ಪಾರುಣ ನೇತ್ರಂ ಕೇಳ್ದಾ
> ನೀರೊಳಗಿರ್ದುಂ ಬೆಮರ್ತನುರಗಪತಾಕಂ ॥

— ಗದಾ. ಸಂ. ೬ – ೩೭.

ಇಲ್ಲಿ ಸಿಂಹದ ಗರ್ಜನೆಯನ್ನು ಮೀರಿಸಿದ, ಗುಡುಗಿನ ಧ್ವನಿಯನ್ನೂ ಮೀರಿಸಿದ್ದ ಭೀಮನ ಗರ್ಜನೆಯನ್ನು ಕೇಳಿ ಕೋಪದಿಂದ ಕೆಂಪಾದ ಕಣ್ಣುಗಳುಳ್ಳವನಾದ ಉರಗ ಪತಾಕನು ನೀರಿನೊಳಗಿದ್ದೂ ಬೆವರಿದನು — ಎನ್ನುತ್ತಾನೆ ಕವಿ. ' ನೀರಿನೊಳಗಿರುವುದಕ್ಕೂ ಬೆವರುವುದಕ್ಕೂ' ಇರುವ ವಿರೋಧವು ಸ್ಪಷ್ಟ. ಅದಕ್ಕೆ ಅವನ ಕೋಪಾತಿಶಯವೇ ಕಾರಣವೆಂದು ಇಟ್ಟುಕೊಂಡಾಗ ವಿರೋಧ ಪರಿಹಾರವಾಗುತ್ತದೆ. ಇಲ್ಲಿ ವಿರೋಧವು ಅತಿಶಯೋಕ್ತಿಯ ನೆರವಿನಿಂದ ಪುಷ್ಟವಾಗಿದೆ. ನೀರಿನೊಳಗಿರುವುದಕ್ಕೂ ಬೆವರುವುದಕ್ಕೂ ಸಂಬಂಧವಿಲ್ಲದಿದ್ದರೂ ಸಂಬಂಧವನ್ನು ಕವಿಯು ಕಲ್ಪಿಸಿದ್ದಾನೆಂದು ಹೇಳಲು ಸಾಧ್ಯವಿದೆ. ಆದರೆ ಇಲ್ಲಿ ವಿರೋಧವು ಸ್ಪಷ್ಟವಾಗಿ ಗೋಚರವಾಗುವುದರಿಂದ ಇದನ್ನು ವಿರೋಧವೆನ್ನುವುದು ಸೂಕ್ತ.

ವಿರೋಧವು ಒಂದು ಅಲಂಕಾರವಷ್ಟೇ ಅಲ್ಲ, ಒಂದು ತತ್ತ್ವವೂ ಹೌದು — ಎನ್ನುವ ಅಂಶವನ್ನು ಹಿಂದೆಯೇ ಪ್ರಸ್ತಾವಿಸಲಾಗಿದೆ. ಒಂದು ತತ್ತ್ವವಾಗಿ ಅದು ಅನೇಕ ಅಲಂಕಾರಗಳಿಗೆ ಮೂಲವಾಗಿದೆ. ವಿಷಮ, ವಿಭಾವನಾ, ವಿಶೇಷೋಕ್ತಿ, ಅಸಂಗತಿ, ವಿಚಿತ್ರ, ಅಧಿಕ, ಅನ್ಯೋನ್ಯ, ವಿಶೇಷ, ವ್ಯಾಘಾತಗಳನ್ನು ವಿರೋಧ ಮೂಲಕವಾದ ಅಲಂಕಾರಗಳೆಂದು ರುಯ್ಯಕನು ಹೆಸರಿಸುತ್ತಾನೆ. ಇದೇ ವರ್ಗಕ್ಕೆ ವಿಷಮದ ವಿರುದ್ಧವಾದ ಸಮವನ್ನೂ, ಅತಿಶಯೋಕ್ತಿಯ ಒಂದು ಪ್ರಭೇದವನ್ನೂ, ಸೇರಿಸುತ್ತಾನೆ. ಅವುಗಳ ಸ್ಥೂಲವಾದ ಪರಿಚಯವನ್ನು ಮಾಡಿಕೊಳ್ಳುವುದು ಅವಶ್ಯ.

ಅನ್ಯ ಉದಾಹರಣೆಗಳು:

ಕಡಿಗಳ್ ಕೆಚ್ಚನೆಯಾಲಿಕಲ್ಲುರಿಯ ಮೊತ್ತಂ ಕೆಂಡದೊಂ
ದಡಕಿಲ್ ಮಾಣಿಕದಿಂಡೆ ಕಾಯ್ವ ತಪನಂ ಚಂದ್ರಂ ಪೊದಳ್ದಾತಪಂ।
ಗಡ ಬೆಳ್ದಿಂಗಳೆನಿಪ್ಪುದೊಂದು ಪೆಸರಂ ತಾಂ ಮಾಡಿದಂತಿರ್ದುದಾ
ಕಡುಪಿಂ ತನ್ನಯ ಕಾಲದಲ್ಲಿ ಹಿಮರಾಜಂ ಧಾರಿಣೀ ಚಕ್ರದೊಳ್ ॥

— ಗಿರಿಜಾ. ೯–೭೦.

ಉಂಡುಪವಾಸಿ ಬಳಸಿ ಬ್ರಹ್ಮಚಾರಿ ಭೂ
ಮಂಡಲವಿದ್ದು ನಿಸ್ಸಂಗ
ಮಂಡೆ ಬೆಳೆದು ಮನಬೋಳಾದ ತವಸಿಯ
ಕೊಂಡಾಡಲಳವೆ ಚಕ್ರಿಯ

— ಭರತೇಶ. ೮–೧೧೧.

ನಿಜವು ವಿಷ್ಣು ವಿಶ್ವದರಸು ವಿಶ್ವಧಾಮನು,
ಒಂದೆ ಹೆಜ್ಜೆಯಿಟ್ಟು ಬುವಿಯ ನಾಕವಳೆದನು,
ಎಷ್ಟು ಚಿಕ್ಕದೆನ್ನ ಹೃದಯ; ಏನು ಹೊಲಸದು
ಇಲ್ಲು ನೆಲೆಯ ಬೇಡುವವನ ದೈನ್ಯವೆಂಥದು?

— ಪು. ತಿ. ನ. 'ಸಮಗ್ರಕಾವ್ಯ' (ಪುಟ–೧೪೨).

ಕಂಪುಗಾಳಿ ಸುಳಿಯೊಡೆಯಿತು, ಹರಡಿತು
ಅದರ ಶಾಖೆ ಶಾಖೆ!
ಮೈ ತಂಪಾಯಿತು ಎದೆ ಉರಿ ಬೆಂಕಿಯ
ಕೊಂಡವಾಯ್ತಿದೇಕೆ?

— ಗೋಪಾಲಕೃಷ್ಣ ಅಡಿಗ 'ಸಮಗ್ರಕಾವ್ಯ' (ಪುಟ–೧೭೨).

ನೋಡು ಇದೊ ಇಲ್ಲರಳಿ ನಗುತಿದೆ
ಏಳುಸುತ್ತಿನ ಮಲ್ಲಿಗೆ
ಇಷ್ಟು ಹಚ್ಚನೆ ಹಸುರ ಗಿಡದಿಂ
ದೆಂತು ಮೂಡಿತೊ ಬೆಳ್ಳಗೆ.

— ಜಿ. ಎಸ್. ಶಿವರುದ್ರಪ್ಪ. 'ಚೆಲುವು ಒಲವು'

ಮಾವು ಬೇವಾಯ್ತೆನಗೆ ಸವಿಯು ಕಹಿಯಾಯ್ತೆನಗೆ
ಕೊಳುನೀರೆನಗೆ ನಂಜಾಯ್ತು ತಾಯೀ!
ಜೀವ ಸಾಕಾಯ್ತೆನಗೆ ಸಾವು ಬೇಕಾಯ್ತೆನಗೆ
ಜಗವು ಕಿಚ್ಚಿನ ಕೊಂಡವಾಯ್ತು ತಾಯೀ

— ಮಧುರಚೆನ್ನ 'ನನ್ನ ನಲ್ಲ'

# ೨೭. ವಿಷಮ.

ಲಕ್ಷಣ :- ಅನನುರೂಪ ಸಂಸರ್ಗವೇ ವಿಷಮ.

( ಅನನುರೂಪ ಸಂಸರ್ಗೋ ವಿಷಮಮ್ - ರಸಗಂಗಾಧರ ).

ವಿಷಮವೆಂದರೆ ಸಮವಲ್ಲದ್ದು : ವಿಸದೃಶವಾದುದು. ಅಥವಾ ಅನನುರೂಪವಾದುದು. ಈ ವಿಷಮತೆಯು ಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ಕಾಣುವಂಥದೆ. ಅಂತೆಯೇ ಬದುಕಿನಲ್ಲಿ ಸಹಜವಾದುದು ಸಮವೋ? ವಿಷಮವೋ? ಆಲಂಕಾರಿಕರನ್ನು ಈ ಸಮಸ್ಯೆ ಕಾಡಿದಂತಿದೆ. ಕಾವ್ಯಪ್ರಕಾಶಕಾರನಾದ ಮಮ್ಮಟನು ಸಮಕ್ಕೆ ವಿರುದ್ಧವಾದುದು ವಿಷಮವೆನ್ನುತ್ತಾನೆ. (ಸಮ ವಿಪರ್ಯಯಾತ್ಮ) ಆದರೆ ಅಲಂಕಾರ ಸರ್ವಸ್ವಕಾರನು ವಿಷಮಕ್ಕೆ ವಿರುದ್ಧವಾದುದು ಸಮವೆನ್ನುತ್ತಾನೆ. (ತದ್ವಿಪರ್ಯಯಃ ಸಮಂ) ಬಹುಶಃ ರುಯ್ಯಕನ ಅಭಿಪ್ರಾಯವೇ ಸತ್ಯಕ್ಕೆ ಹತ್ತಿರವಾಗಿರಬಹುದು.

ಹೆಚ್ಚಿನ ಆಲಂಕಾರಿಕರು ವಿಷಮದ ಪ್ರಕಾರಗಳನ್ನು ಹೇಳುತ್ತಾರೆಯೇ ಹೊರತು ಲಕ್ಷಣವನ್ನು ಹೇಳಲು ಹೋಗುವುದಿಲ್ಲ. ಬಹುಶಃ ವಿಷಮದ ವಿವರಣೆಯು ಬೇಕಿಲ್ಲವೆಂದಿರಬಹುದು. ರುಯ್ಯಕನು ತನ್ನ ಅನನುರೂಪ ಸಂಸರ್ಗವೇ ವಿಷಮವೆಂದು ವೃತ್ತಿಯಲ್ಲಿ ಹೇಳಿರುವನಾದರೂ ವಿಷಮಾಲಂಕಾರದ ಲಕ್ಷಣವಾಗಿ ಅದನ್ನು ಹೇಳಿಲ್ಲ. ಅದಕ್ಕೆ ಜಗನ್ನಾಥನ ವರೆಗೆ ಕಾಯಬೇಕಾಯಿತು. ಜಗನ್ನಾಥನು ಅನನುರೂಪ ಸಂಸರ್ಗವನ್ನೇ ವಿಷಮವೆಂದು ಹೇಳಿ ಸಂಸರ್ಗದಲ್ಲಿ ಎರಡು ಪ್ರಕಾರಗಳನ್ನು ಹೇಳುತ್ತಾನೆ. ಉತ್ಪತ್ತಿರೂಪ ಮತ್ತು ಸಂಯೋಗಾದಿರೂಪ. ಉತ್ಪತ್ತಿರೂಪವಾದ ಸಂಸರ್ಗದ ಅಯೋಗ್ಯತೆಯ ಕಾರಣದಿಂದ ತನ್ನ ಗುಣಕ್ಕೆ ಅನುರೂಪವಲ್ಲದ ಕಾರ್ಯವು ಹುಟ್ಟುತ್ತದೆ. ಅಂತೆಯೇ ಸಂಯೋಗಾದಿ ರೂಪದ ಸಂಸರ್ಗದ ಅಯೋಗ್ಯತೆಯ ಕಾರಣದಿಂದ ಇಷ್ಟಾರ್ಥ ಪ್ರಾಪ್ತಿಯಾಗದಿರುವುದು, ಅನರ್ಥೋತ್ಪತ್ತಿ ಮುಂತಾದವುಗಳು ಸಂಭವಿಸುತ್ತವೆ - ಎಂದು ವಿವರಿಸಿದ್ದಾನೆ. ಹೀಗೆ ಅನುರೂಪವಲ್ಲದ ಸಂಸರ್ಗ ಅಥವಾ ಸಂಬಂಧವೇ ವಿಷಮವಾಗುತ್ತದೆ.

ಜೀವನದಲ್ಲಿ ಕಂಡು ಬರುವ ನಿಜವಾದ ವಿಷಮತೆಯ ವರ್ಣನೆಯು ಅಲಂಕಾರದ ಪರಿಧಿಯೊಳಗೆ ಬರುತ್ತದೆಯೋ? ಇಲ್ಲವೋ? ವಾಸ್ತವವಾದ ವಿಷಮತೆಯನ್ನು ಬಣ್ಣಿಸಿದರೆ ಅದು ಅಲಂಕಾರವಾಗಲಾರದೆಂದು ಜಗನ್ನಾಥನು ಅಭಿಪ್ರಾಯಪಡುತ್ತಾನೆ ವಾಸ್ತವವಾದ ವಿಷಮತೆಯು ಲೋಕಸಿದ್ಧವಾಗಿರುವುದರಿಂದ ಅಲ್ಲಿ ಅಲಂಕಾರತ್ವಯೋಗ ಬರುವುದಿಲ್ಲ. ಕಲ್ಪಿತವಾದ ಅರ್ಥಗಳಿಗೆ ಕಾವ್ಯದಲ್ಲಿ ಹೊರಗಡೆಯಲ್ಲಿ ಇಲ್ಲವಾದರೂ ಕವಿಪ್ರತಿಭೆಯಿಂದ ಅಲಂಕಾರತ್ವ ಬರುತ್ತದೆಂದು ಹೇಳುತ್ತಾನೆ. ಆದರೆ ರುದ್ರಟನ ಕಾವ್ಯಾಲಂಕಾರದಲ್ಲಿ ವಿಷಮವನ್ನು ವಾಸ್ತವ ಮತ್ತು ಅತಿಶಯ ಎಂಬ ಎರಡು ವರ್ಗಗಳಲ್ಲಿ ಹೇಳಿದ್ದನ್ನು ಕಾಣುತ್ತೇವೆ. ಬಹುತೇಕ ಆಲಂಕಾರಿಕರು ಕವಿ ಪ್ರತಿಭಾ ಕಲ್ಪಿತವಾದ ಅಥವಾ ಕವಿಪ್ರೌಢೋಕ್ತಿಸಿದ್ಧವಾದ ವಿಷಮತೆಯೇ ಅಲಂಕಾರಕ್ಕೆ ವಿಷಯವೆಂದು ಅಭಿಪ್ರಾಯಪಡುತ್ತಾರೆ.

ಅಂದರೆ ನಿಜವಾದ ವಿಷಮತೆಯ ಯಥಾವತ್ತಾದ ವರ್ಣನೆಯು ಅಲಂಕಾರವಾಗುವುದಿಲ್ಲವೆಂದು ಮಾತ್ರ ತಿಳಿಯಬೇಕಾಗುತ್ತದೆ. ಯಥಾವತ್ತಾದ ವರ್ಣನೆಯೇನಿದ್ದರೂ ವರದಿಯ ಕೆಲಸ. ಅಲ್ಲಿಯ ಸೂಕ್ಷ್ಮಾಂಶವನ್ನು ಗ್ರಹಿಸಿ ಸುಂದರವಾಗಿ ವರ್ಣಿಸಿದರೆ ಸ್ವಭಾವೋಕ್ತಿಯಾದೀತು. ವಾಸ್ತವವಾದ ವಿಷಮತೆಯ ವರ್ಣನೆಗೆ ಕಾವ್ಯದ ಪರಿಧಿಯಿಂದ ಬಹಿಷ್ಕಾರ ಹಾಕುವುದು ಆಲಂಕಾರಿಕರ ಉದ್ದೇಶವಿರಲಿಕ್ಕಿಲ್ಲ. ವಾಸ್ತವವಾದ ವೈಷಮ್ಯವೂ ಕಾವ್ಯದಲ್ಲಿ ಪ್ರವೇಶ ಪಡೆಯುವಾಗ ಕವಿಪ್ರತಿಭೆಯ ಮಂತ್ರದಂಡದ ಸ್ಪರ್ಶವನ್ನು ಪಡೆದಿರಬೇಕು. ಅಲ್ಲಿ ಚಮತ್ಕಾರವಿರಬೇಕು. ಅಂದರೆ ನಮ್ಮ ಮನಸ್ಸನ್ನು ಮುಟ್ಟುವಂತಿರಬೇಕು ಎಂಬುದು ತಾತ್ಪರ್ಯ.

ಉದಾ:-

**ಹಾರೋ ನಾರೋಪಿತಃ ಕಂಠೇ ಮಯಾವಿಶ್ಲೇಷಭಿರುಣಾ ।**
**ಇದಾನೀಮಾವಯೋರ್ಮಧ್ಯೇ ಸರಿತ್ಸಾಗರ ಪರ್ವತಾಃ ।।**

" ನೀನು ನನ್ನಿಂದ ದೂರವಾಗಬಹುದೆಂಬ ಭಯದಿಂದ ನಿನ್ನ ಕೊರಳಿಗೆ ಹಾರವನ್ನು ತೊಡಿಸಲಿಲ್ಲ. ಇಂದು ನಮ್ಮಿಬ್ಬರ ನಡುವೆ ನದಿ, ಸಮುದ್ರ, ಪರ್ವತಗಳೇ ಇವೆ " ಇಲ್ಲಿ ಹಿಂದಿನ ಸ್ಥಿತಿಗೂ ಇಂದಿಗೂ ಇರುವ ವೈಷಮ್ಯದ ಚಿತ್ರಣವೇ ಇದೆ. ಅಂದು ಅಷ್ಟು ಹತ್ತಿರವಾಗಿದ್ದವರು ಇಂದು ಇಷ್ಟು ದೂರವಾಗಿರುವಲ್ಲಿ ವಿಷಮತೆಯು ಇಲ್ಲವೆನ್ನುವಂತಿಲ್ಲ. ವಾಸ್ತವವಾದ ವಿಷಮತೆಯನ್ನೇ ಮನಮುಟ್ಟುವಂತೆ ವರ್ಣಿಸುವಲ್ಲಿ ಕವಿಪ್ರತಿಭೆಯು ಕೆಲಸ ಮಾಡಿದೆ. ವಿಷಮತೆಯ ವರ್ಣನೆಯನ್ನು ಮನಮುಟ್ಟುವಂತೆ ಮಾಡಿದಲ್ಲಿ ವಿಷಮಾಲಂಕಾರವಿದೆಯೆಂದು ಹೇಳುವುದು ಸೂಕ್ತ. ಅದಕ್ಕೆ ಆಲಂಕಾರಿಕರ ಆಕ್ಷೇಪವೂ ಇರಲಾರದು.

ವಿಷಮತೆಗೆ ಸೀಮೆಯನ್ನು ಕಲ್ಪಿಸುವುದು ಸಾಧ್ಯವಿಲ್ಲವಾದರೂ, ವಿಷಮಾಲಂಕಾರಕ್ಕೆ ಸೀಮೆಯುಂಟು. ಮುಖ್ಯವಾದ ಮೂರು ಬಗೆಗಳೊಂದಿಗೆ ವಿಷಮದ ನಂಟು :-

(೧) **ಕಾರ್ಯ - ಕಾರಣಗಳು ಅನನುರೂಪವಾಗಿರುವುದು : -** ಸಾಮಾನ್ಯವಾಗಿ ಕಾರಣ ಗುಣಗಳು ಕಾರ್ಯದಲ್ಲಿಯೂ ಕಾಣಬರುತ್ತವೆ. ಮಾವಿನ ಗಿಡದಲ್ಲಿ ಮಾವಿನ ಕಾಯಿಯೇ ಬಿಡುತ್ತದಲ್ಲವೇ? ಆದರೆ ಅದಕ್ಕೆ ಅಪವಾದಗಳೂ ಉಂಟು. ಅಂಥ ಅಪವಾದಗಳೂ ಈ ಪ್ರಕಾರಕ್ಕೆ ಆಹಾರ. ಕಾರ್ಯ- ಕಾರಣಗಳೆರಡೂ ಒಂದೆಡೆಗಿದ್ದರೂ ಅವುಗಳ ಗುಣ ಕ್ರಿಯೆಗಳಲ್ಲಿ ಅನನುರೂಪತೆಯನ್ನು ಕಂಡುಕೊಳ್ಳುವುದು ಇಲ್ಲಿ ಮುಖ್ಯ.

ಉದಾ :-

**ಎನಗಾಲೋಕನ ಮಾತ್ರದಿ**
**ನನುರಾಗಮನುಂಟು ಮಾಡಿ ನೀಲಚ್ಛವಿಯಿಂ**
**ಮನಮಂ ಋಜುಮಾಡಿದುವೀ**
**ವನಿತೆಯ ಕೊಂಕಿದ ಕುರುಳ್ಗಳಿದು ಬಿಸವಂದಂ ।।**

ಇಲ್ಲಿ ವನಿತೆಯ ಕಪ್ಪಾದ ಹಾಗೂ ಕೊಂಕಿದ ಕುರುಳುಗಳು ಆಲೋಕನ ಮಾತ್ರದಿಂದ ರಾಗ (ಕೆಂಪು) ವನ್ನೂ ಮನಸ್ಸಿನಲ್ಲಿ ಋಜುತ್ವವನ್ನೂ ಉಂಟುಮಾಡಿದವೆಂದು ಕವಿಯು ಳುತ್ತಾನೆ. ನೀಲಚ್ಛವಿಯು ಗುಣ; ಆದರೆ ಅದು ಕೆಂಪು ಎಂಬ ಗುಣವನ್ನು ಹುಟ್ಟಿಸಿದೆ. ಇದು ಣವೈಲಕ್ಷಣ್ಯ. ಅಂತೆಯೇ ಕೊಂಕಿದ ಕುರುಳುಗಳು ಮನಸ್ಸನ್ನು ನೇರಗೊಳಿಸಿವೆ. ಇದು ರಣ ಗುಣಕ್ಕಿಂತ ಕಾರ್ಯಗುಣವು ವಿಪರೀತವಾಗಿರುವುದಕ್ಕೆ ಉದಾಹರಣೆ. ಇದು ಕವಿ ಪ್ರೌಢೋಕ್ತ ಸಿದ್ಧವಾದ ವಿಷಮತೆಯ ವರ್ಣನೆಯೆಂಬುದನ್ನು ಗಮನಿಸಬಹುದು. ಇಲ್ಲಿ ಷಮಾಲಂಕಾರದ ಸಿದ್ಧಿಗಾಗಿ ಶ್ಲೇಷದ ಸಹಾಯವನ್ನು ಪಡೆಯಲಾಗಿದೆ.

(೨) ಇಷ್ಟಾರ್ಥ ಸಿದ್ಧಿಗಾಗಿ ಹವಣಿಸುವಾಗ ಅದು ಪ್ರಾಪ್ತವಾಗದಿರುವುದು :– ನೊಂದ ಬಗೆದರೆ ದೈವ ಮತ್ತೊಂದನ್ನು ಬಗೆಯಿತು ಎಂಬಂತೆ ನಡೆಯುತ್ತದೆ. ಈ ಪ್ರಕಾರದಲ್ಲಿ ರಡು ಉಪಭೇದಗಳುಂಟು. ಕೇವಲ ಇಷ್ಟಾರ್ಥ ಪ್ರಾಪ್ತಿಯಾಗದಿರುವುದು ಮತ್ತು ಅದರ ಜೊತೆಗೆ ಅನರ್ಥ ಪ್ರಾಪ್ತಿಯೂ ಆಗುವುದು ; 'ಪ್ರಥಮ ಚುಂಬನೇ ದಂತಭಗ್ನ' ದಂತೆ – ಚುಂಬನ ಪ್ರಾಪ್ತಿಯಿಲ್ಲ, ಜೊತೆಗೆ ಹಲ್ಲೂ ಮುರಿಯಿತು.

**ಬೆಳಗಂ ಕಳ್ತಲಿಸುವ ಮೆಳೆ**
**ಯೊಳಗಂ ಪೊಕ್ಕಲ್ಲಿ ತನ್ನ ಕಣ್ಗಳ ಬೆಳಗಿಂ**
**ಬೆಳಗಾಗಿರೆ ಬೆಳಗಿಲ್ಲದ**
**ಮೆಳೆಯಿಲ್ಲೆಂದ ಬಳೆಶಬರಿ ಸೊಬಗಳೆದಿರ್ದಳ್ ॥**

— ಗಿರಿಜಾ. ೧–೧೨೭.

ಇಲ್ಲಿ ಶಬರಿಗೆ ಬೇಕಾದುದು ಕತ್ತಲೆಯಿರುವ ಸ್ಥಳ. ಅದಕ್ಕಾಗಿ ಬೆಳಕನ್ನು ಕತ್ತಲೆಯನ್ನಾಗಿಸುವ ಮೆಳೆಯೊಂದನ್ನು ಹೊಕ್ಕರೆ ಅವಳ ಕಣ್ಣುಗಳ ಬೆಳಕಿನಿಂದ ಮೆಳೆಯು ಬೆಳಗಿತು. ಅಯ್ಯೋ ಬೆಳಗಿಲ್ಲದ ಮೆಳೆಯಿಲ್ಲವಲ್ಲ! ಎಂದು ಅವಳು ಶೋಕಿಸಿದಳು ಎನ್ನುತ್ತಾನೆ. ಇಲ್ಲಿ ಇಷ್ಟಾರ್ಥ ಪ್ರಾಪ್ತಿಯಾಗಲಿಲ್ಲವೆಂಬುದನ್ನು ಕವಿಯು ಚಮತ್ಕಾರಿಕವಾಗಿ ವರ್ಣಿಸಿದ್ದಾನೆ.

**ಭಾವಿಸಿ ಭವನಂ ಕುಸುಮಾ**
**ಸ್ತ್ರಾವಳಿಯಿಂದೆಚ್ಚು ಗೆಲ್ವೆಯೆಂದಿರ್ದೆ ನಿದಿಂ।**
**ತೋರ್ಪೊ ನಿಟಲಾಗ್ನಿಯಿಂದಂ**
**ಬೇವುದ ನಾನೆತ್ತ ಬಲ್ಲೆನಲರ್ವಿಲ್ಲರಸಾ ॥**

ನೀನು, ಶಿವನನ್ನು ನಿನ್ನ ಹೂಬಾಣಗಳಿಂದ ಗೆಲ್ಲುವೆಯೆಂದು ತಿಳಿದಿದ್ದರೆ ಅದಕ್ಕೆ ಬದಲಾಗಿ ಹರನ ಹಣೆಗಣ್ಣಿನುರಿಯಿಂದ ಬೆಂದುಹೋಗುವೆಯೆಂಬುದನ್ನು ನಾನು ತಿಳಿದಿರಲಿಲ್ಲವಲ್ಲ! ಎಂದು ರತಿಯು ಮನ್ಮಥನನ್ನುದ್ದೇಶಿಸಿ ಹೇಳುತ್ತಾಳೆ. ಇಲ್ಲಿ ಇಷ್ಟಾರ್ಥ ಸಿದ್ಧಿಯಾಗಲಿಲ್ಲವಷ್ಟೇ ಅಲ್ಲ ಅನರ್ಥ ಪ್ರಾಪ್ತಿಯೂ ಆಗಿದೆ. ಇಂಥ ಇಷ್ಟಾರ್ಥಾ ಸಿದ್ಧಿ – ಅನರ್ಥ ಪ್ರಾಪ್ತಿಗಳು ಕವಿಕಲ್ಪಿತವಾಗಿದ್ದರೂ ವಿಷಮಾಲಂಕಾರವೇ.

(೩) ಅನನುರೂಪವಾದ ವಸ್ತುಗಳ ಸಂಘಟನೆಯು ಇನ್ನೊಂದು ಪ್ರಕಾರ :- ಅನುರೂಪವಾದ ವಸ್ತುಗಳ ಯೋಗವು ಯೋಗ್ಯ. ಪರಸ್ಪರ ಸೇರಬಾರದ ವಸ್ತುಗಳು ದೈವಯೋಗದಿಂದ ಸೇರಿದರೆ ಅದು ವಿಷಮ. ಸಾಮಾನ್ಯವಾಗಿ ಇಂಥ ಅನನುರೂಪವಾದ ಯೋಗವನ್ನು ವ್ಯಕ್ತಗೊಳಿಸಲು ಅದೆತ್ತ? ಇದೆತ್ತ? ಎಂದು ಸೇರಿಸುವುದುಂಟು. ಇಲ್ಲಿ ಅನನುರೂಪ ಸಂಸರ್ಗದ ಕಲ್ಪನೆಯು ಅತ್ಯಂತ ವಿಸ್ತೃತವಾಗಿದೆಯೆಂಬುದನ್ನು ಲಕ್ಷಿಸಬೇಕು.

ಉದಾ :-

**ಎಳೆಗೆಂಪನುಗುಳ್ವ ಮೃದು ಕೋ**
**ಮಲ ಪದಕಮಲಂಗಳಿಗೀಗತಿ ಕಠಿನಮೆನಿ।**
**ಪ್ಪಿಳೆಯೊಳ್ ಹರಹರ ಕಲ್ನೆಲ**
**ಕಳವಟ್ಟುವಿವೆಂತು ಬಾಲಹಂಸೀಯಾನೇ॥**

ಇಲ್ಲಿ ಎಳೆಗೆಂಪಾದ ಮೃದುವಾದ ಪದಕಮಲ ಮತ್ತು ಅತಿ ಕಠಿನವಾದ ಕಲ್ನೆಲಗಳ ಸಂಘಟನೆಯಲ್ಲಿ ಅನನುರೂಪತೆಯಿದೆ. ಇದು ವಿಷಮತೆ.

ವಿಷಮಾಲಂಕಾರದ ಮೂರು ಪ್ರಕಾರಗಳು ಸಾಕಷ್ಟು ವ್ಯಾಪಕವಾಗಿವೆ. ವಿಷಮತೆಯು ಜೀವನದ ಕ್ಷೇತ್ರಗಳನ್ನೆಲ್ಲಾ ವ್ಯಾಪಿಸಿದ್ದು ಕ್ಷಣಕ್ಷಣಕ್ಕೂ ಅನುಭವಕ್ಕೆ ಬರುವಂಥದಾದುದರಿಂದ ಅಭಿವ್ಯಕ್ತಿಗೆ ಹವಣಿಸುತ್ತಲೇ ಇರುತ್ತದೆ. ಈ ಕಾರಣದಿಂದಲೇ ಅದು ವಿರೋಧಾಭಾಸಕ್ಕಿಂತ ಆಳವಾದುದಾಗಿದೆ. ವಿರೋಧಾಭಾಸದಲ್ಲಿ ವಿರೋಧವು ತೋರಿಕೆಯದು. ಅನಂತರ ಅದನ್ನು ಪರಿಹರಿಸಬಹುದು. ವಿಷಮದಲ್ಲಿನ ವಿಷಮತೆಯನ್ನು ಪರಿಹರಿಸಲಾಗುವುದಿಲ್ಲ. ಯಾಕೆಂದರೆ ಅಲ್ಲಿ ಕವಿಕಲ್ಪನೆಯ ಮೆರಗಿದ್ದರೂ ಅದು ವಾಸ್ತವವನ್ನು ಆಧರಿಸಿರುತ್ತದೆ. ಅಂತೆಯೇ ಅದು ಆಧುನಿಕರಿಗೂ ಪ್ರಿಯವಾದುದಾಗಿದೆ.

**ಅನ್ಯ ಉದಾಹರಣೆಗಳು:**

**ಶಶಿರುಚಿಗೆ ಸ್ಮರಿಸದ ಸಿರಿಮುಡಿ**
**ಬಿಸಿಲ ಸೆಕೆಗಾಂತುದೆ ಸುಗಂಧ**
**ಪ್ರಸರಪೂರ್ಣಘ್ರಾಣವೀ ಹಳವೆಣನ ಹೊಲಸಿನಲಿ।**
**ಉಸುರುದೆಗಹಾದುದೆ ಸುಗೀತದ**
**ರಸದ ಮಧುವಿಂಗಾಂತ ಕಿವಿವಾ**
**ಯಸ ಸೃಗಾಲ ಧ್ವನಿಗೆ ಸೊಗಸಿತೆ ತಂದೆ ಕುರುರಾಯ॥**

— ಕುಮಾರ. ಗದಾ. ೩-೨೦.

ಪಿಡಿದಡಸಿ ತಿನಲ್ ಬಂದಿ
ರ್ದಡೆಯೊಳ್ ನಿನಗಾಗಿ ಮದನನೆನ್ನನ ತಿನೆಕೇಳ್ ।
ಪಡೆನೋಡಲ್ ಬಂದವರಂ
ಗುಡಿವೊರಿಸಿದರೆಂಬುದಾಯ್ತು ನಿನ್ನೆನ್ನೆಡೆಯೊಳ್ ॥

— ಪಂ. ಭಾ.

ಬಚ್ಚಲ ಬಳಿಯೇ ಬಳ್ಳಿ ಮಲ್ಲಿಗೆ
ಚರಂಡಿ ಬಳಿಯೇ ಚಂಪಕ :
ಕೊಳೆವ ತಿರುಳ ತಳಕಿರಲಿ ಬೀಜ ಚಿರ
ಸುಪ್ತಸುರಭಿ ಸಂಗೋಪಕ .
ಒಡಕು ಮಡಕೆ ದನಿ ಕೆಳಗೆ ಪಿಟೀಲು
ಕಾಗೆ ಗೂಗೆ ಬಳಿಯೇ ಪಿಕ:
ಬಧಿರಗಲಭೆಗಳ ದಡದಿವೇಣುರವ
ಶಿವೋಗ್ರಪದ ಪರಿಪೋಷಕ .

— ಗೋಪಾಲಕೃಷ್ಣ ಅಡಿಗ. 'ಸಮಗ್ರಕಾವ್ಯ'(ಪುಟ – ೧೫೧).

ಸುಂದರ ಸುಪುಷ್ಟ ಮಾಂಸದ ಸೊಬಗಿನೇರುಗಳ
ತಗ್ಗುಗಳ ಹಿಗ್ಗುಗಳ ಚಲುವು
ಇಂದೆಲ್ಲಿ? ಕಠಿನ ಕರ್ಕಶ ಕೃಶಕಲೇವರವು
ಕಣ್ಣಿನಿರಿವ ಕಠಾರಿಯಲಗು !

— ಗೋಪಾಲಕೃಷ್ಣ ಅಡಿಗ. 'ಸಮಗ್ರಕಾವ್ಯ'(ಪುಟ – ೧೭೬).

## ೨೮. ಸಮ.

ಲಕ್ಷಣ :– ಅನುರೂಪವಾದ ವಸ್ತುಗಳ ಘಟನೆಯನ್ನು ಹೇಳುವುದು ಸಮ.

( ಸಮಂ ಸ್ಯಾದ್ವರ್ಣನಂ ಯತ್ರದ್ವಯೋರಪ್ಯನುರೂಪಯೋಃ – ಕುವಲಯಾನಂದ )

ಸಮವು ಹೆಸರೇ ಸೂಚಿಸುವಂತೆ ಸಮಾನವಾದ ವಸ್ತುಗಳ ಸಂಘಟನೆಯ ವರ್ಣನೆ. ವಿಷಮಕ್ಕೆ ಇದು ವಿರುದ್ಧವೆಂದು ರುಯ್ಯಕನು ಹೇಳುತ್ತಾನೆ . ಮಮ್ಮಟನು , ಸಮಕ್ಕೆ ವಿರುದ್ಧವಾದುದು ವಿಷಮವೆನ್ನುತ್ತಾನೆ. ವಿಷಮಾಲಂಕಾರದ ಎಲ್ಲ ಭೇದಗಳನ್ನು ಇಲ್ಲಿಯೂ ಹೇಳಬಹುದಾದರೂ ಅವುಗಳಲ್ಲಿ ಅಂಥ ಸೊಗಸಿಲ್ಲವೆಂದು ಮಮ್ಮಟ ಹೇಳಿದರೆ ಅಲ್ಲಿಯೂ ಚಮತ್ಕಾರವು ಸಾಧ್ಯವೆಂದು ಜಗನ್ನಾಥನು ಹೇಳುತ್ತಾನೆ. ಅಪ್ಪಯ್ಯ ದೀಕ್ಷಿತನು ಸಮಾಲಂಕಾರದ ಮೂರು ಬಗೆಗಳನ್ನು ಹೇಳಿದ್ದಾನೆ – ಎರಡು ವಸ್ತುಗಳು ಸಮಾನ ಯೋಗ್ಯತೆಯವುಗಳಾಗಿದ್ದರೆ ಅದು ಅನುರೂಪ ಸಂಬಂಧ. ಅವು ಒಳ್ಳೆಯವೂ ಇರಬಹುದು; ಕೆಟ್ಟವುಗಳೂ ಆಗಿರಬಹುದು. ಒಳ್ಳೆಯವಾಗಿದ್ದರೆ ಸದ್ವಸ್ತುಯೋಗ; ಕೆಟ್ಟವಾಗಿದ್ದರೆ ಅಸದ್ವಸ್ತುಯೋಗ.

ಉದಾ :–

**ಸ್ತ್ರೀರತ್ನಮೀಗಳೀಕೆಯ**
**ಧಾರಿಣಿಯೊಳ್ ಪುರುಷರತ್ನಮೀತನೇ ಸದೃಶಾ ।**
**ಕಾರನಿವರಂ ಕೂಡಿಪ**
**ಯೋರುಹಜಂಗಕ್ಕೆ ಸಮಸಮಾಯೋಗ ಯಶಂ ॥**

ಇವಳು ಸ್ತ್ರೀರತ್ನ ; ಅವನು ಪುರುಷರತ್ನ ; ಅವಳಿಗೆ ತಕ್ಕವನು . ಇವರನ್ನು ಸೇರಿಸಿದ ಬ್ರಹ್ಮನಿಗೆ ಸಮಾನರನ್ನು ಸೇರಿಸಿದ ಶ್ರೇಯಸ್ಸು ,ಎನ್ನುತ್ತಾನೆ ಕವಿ. ಇದು ಸದ್ವಸ್ತುಯೋಗ.

**ಸುಡದೆ ಕನಲ್ವ ಕಿಚ್ಚಿನೊಡನಾಡಿದ ತಂಬೆಲರಾತಪಂಗಳೊಳ್**
**ಪೊಡರ್ವ ಸರೋರುಹಂ ಸುಡದೇ ಪಾವಿನ ಪಲ್ಲ ನಂಜುಗಿ ।**
**ರ್ಚಿಡರ್ದಮೃತಾಂಶು ಮಂಡಲಮದೇಂ ಹಿಮಮುಂಡು ಬಾಳ್ವತ**
**ಣ್ಮಡುವಿನ ಪೂವೆ ಸುಟ್ಟುಪುದಿದಯ್ಯೋ ವಿಯೋಗಿಗಳದೆಂತು ಬಾಳ್ದಪರ್ ॥**

ಇಲ್ಲಿ ಅಗ್ನಿಯ ಒಡನಾಡಿಯಾದ ಗಾಳಿ, ಬಿಸಿಲಿನಲ್ಲಿ ಅರಳುವ ಕಮಲ , ಕಾಲಕೂಟ ವಿಷದ ಸಂಪರ್ಕವಿರುವ ಚಂದ್ರ , ಇವೆಲ್ಲ ಸುಡುವ ಸ್ವಭಾವವನ್ನು ಪಡೆದುದು ಸಹಜವೆನ್ನುವಲ್ಲಿ ಸಮವಿದೆ . ಅವುಗಳದು ಅನುರೂಪ ಕಾರ್ಯ. ಆದರೆ ಕೊನೆಯಲ್ಲಿರುವ ' ಹಿಮಮುಂಡು ಬಾಳ್ವ ಕಣ್ಮಡುವಿನ ಪೂವೆ ಸುಟ್ಟುಪುದು ' ಎನ್ನುವಲ್ಲಿ ವಿಷಮವಿದೆ . ಹೀಗೆಯೇ ಇತರ ಪ್ರಭೇದಗಳು.

ಉದಾಹರಣೆಗಳು:

ಬರಿಗೊಡಗಳಿಗೆ ಸಮಾಧಾನ ಹೇಳುತಿದೆ ನೀರಿಲ್ಲದ ನಲ್ಲಿ;
ಮಟಮಟ ಮಧ್ಯಾಹ್ನದಲ್ಲಿ

— ಕೆ. ಎಸ್. ನರಸಿಂಹಸ್ವಾಮಿ.

ಪ್ರತಿ ನಿಮಿಷವೂ ಮಹಾಜಾತ್ರೆ; ತೇರಿನ ಮಿಣಿಗೆ
ನನ್ನದೇ ತೋಳು, ನಿನ್ನದೇ ಘೋಷಣೆ
ಕೋಟಿ ಕೋಟಿಯ ಕಂಠ ಬಾಹು ಬಲಕೂ ಮೂಲ
ಬಲ ನನ್ನ ನಿನ್ನ ಸಂಯೋಗ ಘಟನೆ

— ಅಡಿಗ. 'ಸಮಗ್ರಕಾವ್ಯ' (ಪುಟ – ೩೦೯).

ಸರಿಯಾದ ಜೋಡಿಯೇ ಈ ಗಂಡ ಹೆಂಡಿರು
ಕೇಳಿದಳವನನು ಕಾಂತೆ
ಅಹುದಹುದೆಂದನು ಗೊರೆಯುವನೀತನು
ಈಕೆಯೋ ಶತಕೆಪ್ಪಿಯಂತೆ

— ಎಸ್. ವಿ. ಪರಮೇಶ್ವರ ಭಟ್. 'ಇಂದ್ರಚಾಪ' (ಪು–೧೨೭)

ಅತ್ತ ನೀನು, ಇತ್ತ ನಾನು
ರಜತಕರನು, ಚೆಲುವ ಮೊಗನು
ಸೋಮ ನೀನು, ಕಾಮ ನಾನು
ಸುತ್ತಲೆಲ್ಲ ಸಂತಸವನು
ಬಿತ್ತುತಿರುವೆವು;
ಸಂತಸದಲಿ ಬೆಳೆದ ಬೆಳಸ
ಹಂಚುತಿರುವೆವು

— ವಿ. ಸೀ. 'ಸ್ನೇಹ ವಿಶ್ವಾಸ' (ಪುಟ – ೬೯).

# ೨೯. ವಿಶೇಷೋಕ್ತಿ.

ಲಕ್ಷಣ :– ಕಾರಣವು ಸಮಗ್ರವಾಗಿದ್ದರೂ ಕಾರ್ಯವು ಹುಟ್ಟದಿರುವುದು ವಿಶೇಷೋಕ್ತಿ.

( **ಕಾರ್ಯಾ ಜನಿರ್ವಿಶೇಷೋಕ್ತಿಸ್ಸತಿ ಪುಷ್ಕಲಕಾರಣೇ** –ಕುವಲಯಾನಂದ )

ವಿಭಾವನೆಯಂತೆಯೇ ಇದೂ ಕೂಡ ಕಾರ್ಯ– ಕಾರಣ ಭಾವದ ವಿರೋಧವನ್ನೇ ಆಧರಿಸಿದೆ . ಕಾರಣಗಳೆಲ್ಲವೂ ಇರುವಾಗಲೂ ಕಾರ್ಯವು ಹುಟ್ಟಲಿಲ್ಲವೆನ್ನುವುದು ಇಲ್ಲಿ ಚಮತ್ಕಾರಕ್ಕೆ ಕಾರಣವಾಗಿದೆ. ಕಾರ್ಯವು ಹುಟ್ಟದಿರುವುದಕ್ಕಿರುವ ನಿಜವಾದ ಕಾರಣವನ್ನು ಕವಿ ಹೇಳಬಹುದು, ಹೇಳದಿರಬಹುದು, ಅಥವಾ ಹೇಳುವುದಕ್ಕೇ ಬಾರದಿರಬಹುದು . ಅದನ್ನೇ ಆಧರಿಸಿ ಉಕ್ತನಿಮಿತ್ತ , ಅನುಕ್ತನಿಮಿತ್ತ, ಮತ್ತು ಅಚಿಂತ್ಯ ನಿಮಿತ್ತಗಳೆಂದು ವಿಶೇಷೋಕ್ತಿಯ ಭೇದಗಳನ್ನು ಹೇಳಲಾಗಿದೆ.

ಉದಾ :–

**ಅಳಿಕುಲವೆಲ್ಲ ಪೀರ್ದೊಡರೆಯಾಗದ ಸನ್ಮಧು ಮಂದಮಾರುತಂ**
**ಸೆಳೆದೊಡೆ ಕುಂದದಿರ್ಪನರುಗಂಪಲರೊಳ್ ಗಿಳಿವಿಂಡು ಪೀರ್ದೊಡಂ ।**
**ಕಳೆಯದೆ ತುಂಬಿ ತೋರ್ಪ ರಸವಾ ಪೊಸಪಣ್ಣೊಳನೇಕ ಕೋಕಿಲಾ**
**ವಳಿ ಮುರಿದೊಟ್ಟೆ ಪಿಂಗದ ತಳಿರ್ ಕಿರುಮಾವುರದೊಳ್ ವಿರಾಜಿಕುಂ ॥**

ಇಲ್ಲಿ ಅಳಿಕುಲವು ಹೀರಿದರೂ ಕಡಿಮೆಯಾಗದ ಮಧು, ಗಾಳಿಯು ಸೆಳೆದರೂ ಕಡಿಮೆಯಾಗದ ಪರಿಮಳವೇ ಮುಂತಾದವುಗಳಿಂದ ಮಾಮರವು ತುಂಬಿತ್ತೆಂದು ಕವಿಯು ಹೇಳುತ್ತಾನೆ. ಇದು ಕಾರಣವಿದ್ದರೂ ಕಾರ್ಯೋತ್ಪತ್ತಿಯಾಗದಿರುವುದಕ್ಕೆ ಉದಾಹರಣೆ. ಇಲ್ಲಿ ನಿಜವಾದ ಕಾರಣವು ಮಾಮರದ ಸಮೃದ್ಧಿ . ಅದನ್ನು ಕವಿಯು ನಮ್ಮ ಊಹೆಗೆ ಬಿಟ್ಟಿದ್ದಾನೆ. ಇದು ಅನುಕ್ತನಿಮಿತ್ತ .

**ತೀರ್ದುದು ನೀರ್ ತೀರ್ದುದು ತೃಷೆ**
**ತೀರ್ದುದು ಕಡುಸೇದೆ ತೀರ್ದೊಡೇಂ ಪಥಿಕತಾ ।**
**ನಿರ್ದಂತಿರ್ದಂ ಸ್ತ್ರೀ ಮುಖ**
**ಮಿರ್ದಿರವಂ ನೋಡುವಾಸೆ ತೀರದೆ ಮನಕಂ ॥**

—— ಗಿರಿಜಾ.೨–೨೪.

ಇಲ್ಲಿ ಪಥಿಕನ ಬಾಯಾರಿಕೆ ಹಿಂಗಿದೆ; ದಣಿವು ನೀಗಿದೆ; ನೀರೂ ತೀರಿದೆ. ಆದರೂ ಅವನು ಇದ್ದಂತೆಯೇ ಇದ್ದ. ಇಲ್ಲಿ ಕಾರ್ಯವು ಹುಟ್ಟದಿರುವುದಕ್ಕೆ ನಿಜವಾದ ಕಾರಣ

...ಮಿರ್ದಿರವಂ ನೋಡುವಾಸೆ ತೀರದಿರುವುದು' ಈ ಕಾರಣವನ್ನು ಕವಿಯೇ ...ದ ಇದು ಉಕ್ತನಿಮಿತ್ತ.

ಉದಾಹರಣೆಗಳು:

ನಲ್ಲ ಮುಡಿದ ಮೊಲ್ಲೆಯರಳು
'ಇಲ್ಲ ನಿಲ್ಲಿ'ರೆಂದಿತು ;
ಓರೆಗಣ್ಣಿನೊಂದು ಹೊರಳು
'ಹೋಗಬೇಡಿ' ರೆಂದಿತು
ಇರುಳನಲ್ಲ ಕಳೆಯಲಿಲ್ಲ
ಅಪ್ಪಿಮುತ್ತನೊತ್ತಲಿಲ್ಲ ;
ಕಣ್ಣೀರನೊರೆಸಲಿಲ್ಲ
ಒರಟನಾದೆನೇತಕೆ?
ಸರಸ ವಿರಸವಾಯಿತಲ್ಲ
ಹೊರಟು ಬಂದೆನೇತಕೆ ?

—— ಕೆ. ಎಸ್. ನರಸಿಂಹಸ್ವಾಮಿ. 'ಮಲ್ಲಿಗೆಯ ಮಾಲೆ' ಪು–೪೧

ಬೇಕಾದ ಹಣ್ಣಿಹುದು , ಹೂವಿಹುದು ತೌರಿನಲಿ
ಹೊಸಸೀರೆ ರತ್ನದಾಭರಣ ;
ತಾಯಿ ಕೊರಗುವರಲ್ಲಿ ನೀವಿಲ್ಲ ದೂರಿನಲಿ
ನಿಮಗಿಲ್ಲ ಒಂದು ಹನಿ ಕರುಣ.

—— ಕೆ. ಎಸ್. ನರಸಿಂಹಸ್ವಾಮಿ. 'ಮಲ್ಲಿಗೆಯ ಮಾಲೆ' ಪುಟ –೪೭

ಕೂದಲೆಳೆ ಕತ್ತಿ ಕೆಳಕುಳಿತು ತೇದರು ಬೆರಳು
ಕೊರಡು ಸವೆದರೂ ಸೊಗಡು ಹರಡಲಿಲ್ಲ
ತುಟಿ ಕಚ್ಚಿ ಕೆಂಡಗಳ ಮೇಲೆ ನಡೆದದ್ದಕ್ಕೆ
ಬೊಕ್ಕೆಗಳ ಮಿಕ್ಕಿ ಸುಖ ದಕ್ಕಲಿಲ್ಲ.

—— ಗೋಪಾಲಕೃಷ್ಣ ಅಡಿಗ.

## ೩೦. ವಿಭಾವನಾ.

ಲಕ್ಷಣ :– ಕಾರಣವಿಲ್ಲದಿರುವಾಗಲೂ ಕಾರ್ಯವುಂಟಾಯಿತೆಂದರೆ ವಿಭಾವನಾ.

( ವಿಭಾವನಾ ವಿನಾಪಿಸ್ಯಾತ್ ಕಾರಣಂ ಕಾರ್ಯಜನ್ಮಚೇತ್ – ಕುವಲಯಾನಂದ )

ಇದು ಕಾರ್ಯ– ಕಾರಣ ಭಾವದಲ್ಲಿರುವ ವಿರೋಧವನ್ನು ಮೂಲವಾಗಿ ಹೊಂದಿರುವ ಅಲಂಕಾರ. ಕಾರಣವಿಲ್ಲದೆ ಕಾರ್ಯವು ಹುಟ್ಟಲಾರದು. ಬೆಂಕಿಯಿಲ್ಲದೆ ಹೊಗೆಯು ಹುಟ್ಟಲಾರದು. ಆದರೆ ಕವಿಯು ಅಸಾಧ್ಯವನ್ನು ಸಾಧ್ಯವಾಗಿಸಿ ತೋರಿಸುತ್ತಾನೆ. ಇದು ಕೇವಲ ತೋರಿಕೆಯ ವಿರೋಧವಾಗಿರುತ್ತದೆಯೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಿಲ್ಲವಷ್ಟೆ? ಕಾರಣವಿಲ್ಲದೆ ಕಾರ್ಯೋತ್ಪತ್ತಿ, ಪ್ರತಿಬಂಧಕವಿರುವಾಗಲೂ ಕಾರ್ಯೋತ್ಪತ್ತಿ ಅಸಮಗ್ರ ಕಾರಣದಿಂದ ಕಾರ್ಯೋತ್ಪತ್ತಿ, ಕಾರಣವಲ್ಲದ್ದರಿಂದ ಕಾರ್ಯೋತ್ಪತ್ತಿ, ವಿರುದ್ಧಕಾರಣದಿಂದ ಕಾರ್ಯೋತ್ಪತ್ತಿ ಮತ್ತು ಕಾರ್ಯದಿಂದ ಕಾರಣೋತ್ಪತ್ತಿ, ಎಂದು ಆರು ಪ್ರಭೇದಗಳಲ್ಲಿ ವಿಭಾವನೆಯಿರಲು ಸಾಧ್ಯವೆಂದು ಕುವಲಯಾನಂದಕಾರನು ಹೇಳುತ್ತಾನೆ.

ಉದಾ :–

ಮದನೋಗ್ರಾಗ್ನಿವಾಳ್ಪುದು ಮಹಾಸಂತಾಪಮಂಜ್ವಾಲೆಯಿ
ಲ್ಲದೆಯುಂ ಕಣ್ಮಲರ್ಗಳ್ಗೆ ಪೊಣ್ಮಸುವದಂಭೋಧಾರೆಯಂ ಧೂಮಮಿ ।
ಲ್ಲದೆಯುಂ ಮೆಯ್ಗೊಗೆಯಿಪ್ಪುದಗ್ಗಲಿಪ ಪಾಂಡುಚ್ಛಾಯೆಯಂ ಭಸ್ಮಮಿ
ಲ್ಲದೆಯುಂ ತಾನೆಣಿಸಲ್ ವಿಚಿತ್ರಮಿದನಂತಿಂತುಂತೆನಲ್ ಬರ್ಕುಮೆ ॥

ಇಲ್ಲಿ ಕಾಮಾಗ್ನಿಯ ವೈಚಿತ್ರ್ಯದ ವರ್ಣನೆಯಿದೆ. ಅದು ಜ್ವಾಲೆಯಿಲ್ಲದೆಯೂ ಸುಡುತ್ತದೆ. ಹೊಗೆಯಿಲ್ಲದೆಯೂ ಕಣ್ಣೀರನ್ನು ತರಿಸುತ್ತದೆ, ಬೂದಿಯಿಲ್ಲದೆಯೂ ಮೈ ಬಣ್ಣವನ್ನು ಬಿಳಿದಾಗಿಸುತ್ತದೆ –ಎಂದು ಕವಿಯು ಹೇಳುತ್ತಾನೆ. ಇಲ್ಲಿ ಜ್ವಾಲೆಯೇ ಮುಂತಾದವು ಕಾರಣಗಳು. ಅವಿಲ್ಲದಿರುವಾಗಲೂ ಸುಡುವುದೇ ಮುಂತಾದ ಕಾರ್ಯಗಳು ನಡೆದಿವೆ.

ಸ್ಫುರಿತ ಚಿತ್ರಭಾ ಪ್ರತತಿ ಕಳ್ತಲೆಯಂ ಸುರಗೋಪಕಾಂತಿಪಾಂ
ಡುರತೆಯ ನಂಬುವಾಹತತಿಶೋಷಣಮಂ ಘನವಾರಿಧಾರೆ ನಿ ।
ರ್ಭರ ಪರಿತಾಪಮಂ ಕುಟಜ ಕುಂದನವೋದ್ಗಮವಾಟಿ ರಾಗಮಂ
ವಿರಹಿ ಜನಕ್ಕೆ ಮಾಡಿದುದು ನೋಡುವೊಡೆಯ್ದೆ ವಿರುದ್ಧಮೆಂಬಿನಂ ॥

ಇಲ್ಲಿ ಹೊಳೆಯುವ ಮಿಂಚು ಕತ್ತಲೆಯನ್ನೂ, ಇಂದ್ರಗೋಪಕಾಂತಿಯು ಬಿಳುಪನ್ನೂ, ಮೋಡಗಳ ಸಮೂಹವು ಶೋಷಣವನ್ನೂ, ಜಲಧಾರೆಯು ಪರಿತಾಪವನ್ನೂ, ಕುಟಜ, ಕುಂದ ಮೊದಲಾದ ಅರಳಿದ ಹೂಗಳಿಂದ ಕೂಡಿದ ಉದ್ಯಾನವು ರಾಗ (ಕೆಂಪು, ಅನುರಾಗ) ವನ್ನು ಉಂಟು ಮಾಡಿತೆಂದು ಕವಿ ಹೇಳುತ್ತಾನೆ. ಇಲ್ಲಿ ಕಾರ್ಯಗಳು ವಿರುದ್ಧ ಕಾರಣಗಳಿಂದ ಹುಟ್ಟಿವೆ. ಹೀಗೆಯೇ ಇನ್ನಿತರ ಪ್ರಕಾರಗಳನ್ನೂ ಗಮನಿಸಬಹುದು.

ಉದಾಹರಣೆಗಳು :

ನಿನ್ನನರಿತಿರಲಿಲ್ಲ , ಕಂಡು ಕೇಳಿರಲಿಲ್ಲ
ಬಂಧು ಬಳಗವು ಮೊದಲೆ ನೀನಲ್ಲವು
ಬಾಲ್ಯದಲಿ ನಿನ್ನೊಡನೆ ಕಲೆತು ವಿಹರಿಸಲಿಲ್ಲ
ಮತ್ತೆ ಚಿರಪರಿಚಯವು ನಮಗಿಲ್ಲವು
ನಿನಗೆ ನಾನುಪಕಾರವೆಸಗಲಿಲ್ಲವು ನೀನು
ನನ್ನ ಕಷ್ಟದ ದಿನದ ಬಗೆಯನರಿಯೆ
ಸಂಬಂಧವಿಂತಿರಲು ನಮ್ಮನಿಬ್ಬರನೆಂತು
ಹೊಂದಿಸಿತು ಪ್ರೇಮದಲಿ ವಿಧಿಲಿಖಿತವು ?

— ತೀ. ನಂ. ಶ್ರೀ 'ಒಲುಮೆ '

ಪುಸ್ತಕ ಓದದೆ ಪ್ರೀತಿಯನರಿತೆವು
ಗೆಲ್ಲದೆ ಹೆಮ್ಮೆಯ ಗಳಿಸಿದೆವು
ನಾವೀ ಶಾಲೆಯನೆಂದೂ ಬಿಡೆವು
ನಮ್ಮದಿಯಾಗಿಯೆ ಉಳಿಯುವೆವು .

— ಕೆ. ಎಸ್. ನರಸಿಂಹಸ್ವಾಮಿ. 'ಮಲ್ಲಿಗೆಯ ಮಾಲೆ' (ಪುಟ – ೨೮೩).

ತುಟಿಗೆ ತುಟಿಯ ಸೋಂಕಿಸದೆಯೆ
ಎದೆಗೆ ಎದೆಯ ತಾಗಿಸದೆಯೆ
ಕಣ್ಣ ಕಣ್ಣ ಕೂಡಿಸದೆಯೆ
ಎದೆಯನೆಲ್ಲ ಗೆದ್ದಳು
ಮನವನೆಲ್ಲ ಕದ್ದಳು
ಕನಸಿನಲ್ಲು ಸಿದ್ಧಳು

— ಅಡಿಗ ' ಸಮಗ್ರಕಾವ್ಯ ' (ಪುಟ – ೧೭೪).

## ೩೧. ಅಸಂಗತಿ.

ಲಕ್ಷಣ :– ಕಾರ್ಯ – ಕಾರಣಗಳು ಭಿನ್ನ ದೇಶದಲ್ಲಿದ್ದರೆ ಅಸಂಗತಿ

( ತಯೋರ್ಭಿನ್ನ ದೇಶತ್ವೇಽಸಂಗತಿ : –ರುಯ್ಯಕ )

ಕಾರ್ಯ – ಕಾರಣಗಳಲ್ಲಿ ಸಾಂಗತ್ಯವಿಲ್ಲದಿರುವುದು ಅಸಂಗತಿ . ಕಾರಣವಿರುವಲ್ಲಿ ಕಾರ್ಯವು ಇರಬೇಕಾದುದು ಅಂದರೆ ಕಾರ್ಯ – ಕಾರಣಗಳಲ್ಲಿ ಹೊಂದಾಣಿಕೆಯಿರಬೇಕಾದುದು ಸಾಮಾನ್ಯ ನಿಯಮ. ಈ ನಿಯಮದ ಉಲ್ಲಂಘನೆಯೇ ಅಸಂಗತಿಯ ಚಮತ್ಕಾರಕ್ಕೆ ಕಾರಣ. ಮೇಲ್ನೋಟಕ್ಕೆ ಕಾಣಬರುವ ಅಸಂಗತ ವ್ಯವಹಾರಗಳ ವರ್ಣನೆ ಈ ಅಲಂಕಾರದಲ್ಲಿದೆ. ಆದರೆ ಬೆದಕಿ ನೋಡಿದಾಗ ಅಸಂಗತವೂ ಸಂಗತವಾಗಿ ಕಾಣಬರುತ್ತದೆ. ಅಂದರೆ ಇಂಥ ಅಸಂಗತ ವ್ಯವಹಾರಕ್ಕೂ ಕಾರಣವೊಂದು ಇದ್ದೇ ಇರುತ್ತದೆ.

ಉದಾ :–

ಮೃಗಮದ ಜಲಮಂ ಸವತಿಯ
ಮೊಗದೊಳ್ ಪತಿಸೂಸೆ ಸತಿಯ ಮೊಗದೊಳ್ ಮಿಗೆ ಕ ।
ರ್ಪೊಗೆದು ಪೊಗೆ ಮಗುಳ್ದಾಕೆಯ
ಮೊಗಮುಜ್ವಳಮಾಯ್ತು ಬಗೆವೊಡೇನಚ್ಚರಿಯೋ ॥

— ಲೀಲಾ. ೧೩ – ೧೪೫.

ಇದು ಜಲಕ್ರೀಡೆಯ ವರ್ಣನೆ. ಪತಿಯು ಸವತಿಯ ಮುಖಕ್ಕೆ ಕಸ್ತೂರಿಯ ಜಲವನ್ನು ಎರಚಿದಾಗ ಇವಳ ಮುಖವು ಕಪ್ಪಾಗಿ ಹೊಗೆಯಾಡಿತು . ಅವಳ ಮುಖವು ಬೆಳಗಿತು. ಇದು ಆಶ್ಚರ್ಯ! ಎಂದು ಕವಿಯು ಉದ್ಗಾರವೆತ್ತುತ್ತಾನೆ. ಇಲ್ಲಿ ಕಾರಣ – ಕಾರ್ಯಗಳಲ್ಲಿ ಹೊಂದಾಣಿಕೆ ಇಲ್ಲ. ಆದರೆ ಬೆದಕಿ ನೋಡಿದರೆ ಈ ವೈಪರೀತ್ಯಕ್ಕೆ ಸವತಿ ಮಾತ್ಸರ್ಯವೇ ಕಾರಣವೆಂಬುದು ಗೋಚರವಾಗುತ್ತದೆ. ಅದು ಗಮ್ಯವಾಗಿದೆ.

**ಅನ್ಯ ಉದಾಹರಣೆಗಳು :**

ಮುಳಿಸು ಮಾವನ ಮೇಲೆ ಮಗಳೇನು ಮಾಡಿದಳು?
ನಿಮಗೇತಕೀ ಕಲ್ಲು ಮನಸು?

— ಕೆ. ಎಸ್. ನರಸಿಂಹಸ್ವಾಮಿ.' ಮಲ್ಲಿಗೆಯ ಮಾಲೆ ' (ಪುಟ – ೮೨)

ಮದರಾಸಿನಲ್ಲಿ ..........
ಬಿರುಗಾಳಿ ಎದ್ದು ಮೈಸೂರಿನಲಿ ಹತ್ತು ಹನಿ
ಮಳೆ ಬಿದ್ದಿತೆನ್ನಿ ಇವಳಿಗೆ ನಗಡಿ ; ಬೀದಿಯಲಿ

ಬೇಸಗೆಯ ಬಿಸಿಲು ಸುಳಿದರೆ ಉಷ್ಣ – – – –

— ಕೆ. ಎಸ್. ನರಸಿಂಹಸ್ವಾಮಿ. 'ಮಲ್ಲಿಗೆಯ ಮಾಲೆ' (ಪುಟ – ೧೩೬).

ಈ ರೈತ
ಉಳುವುದು ಅಲ್ಲಿ ಆಕಾಶ
ಬೆಳೆಯುವುದು ಇಲ್ಲಿ ಭೂಮಿ.

— ಶಾ. ಬಾಬುರಾವ್. 'ಸೂರ್ಯ ಇವನೊಬ್ಬನೇ' (ಪುಟ– ೧೫)

ಇವಳು ಉಳ್ಳಾಗಡ್ಡಿ, ಜೀವನ ವಿಚಿತ್ರ
ಇವಳ ಮೈ ಎನ್ನುವುದು ಪತ್ರದಲಿ ಪತ್ರ
ಇವಳು ನೊಂದರೆ ನಮ್ಮ ಕಣ್ಣಿನಲಿ ನೀರು
ಇವಳು ಬೆಂದರೆ ಇಲ್ಲ ಯಾವ ತಕರಾರು

— ದಿನಕರ ದೇಸಾಯಿ.' ದಿನಕರಚೌಪದಿ' (೨೪೩).

## ೩೨. ವಿಶೇಷ.

**ಲಕ್ಷಣ** :– ಪ್ರಸಿದ್ಧವಾದ ಆಧಾರವು ಇಲ್ಲದಿದ್ದರೂ ಆಧೇಯವು ಇರುವುದೆಂದು ವರ್ಣಿಸಿದರೆ ವಿಶೇಷ.

( **ವಿಶೇಷ : ಖ್ಯಾತಮಾಧಾರಂ ವಿನಾಪ್ಯಾಧೇಯಸ್ಯ ವರ್ಣನಮ್** –ಕುವಲಯಾನಂದ )

ಆಧಾರವಿಲ್ಲದೆಯೇ ಆಧೇಯವು ಇರುವುದು ಅಸಂಭವ. ಪಾತ್ರೆಯಿಲ್ಲದೆ ತುಪ್ಪವಿರಲಾರದಷ್ಟೇ? ಆದರೆ ಅಂಥ ಅಸಂಭವವನ್ನು ಸಂಭವವೆನ್ನುವಂತೆ ವರ್ಣಿಸುವುದು ವಿಶೇಷ. ಉದಾ :– 'ಕವಿಗಳು ಸ್ವರ್ಗಸ್ಥರಾಗಿದ್ದರೂ ಅವರ ಮಾತುಗಳು ಆನಂದವನ್ನು ನೀಡುತ್ತಿವೆ' ಇಲ್ಲಿ ಕವಿಗಳು ಆಧಾರ; ಅವರ ಮಾತುಗಳು ಆಧೇಯ. ಆಧಾರವಿಲ್ಲದಿದ್ದರೂ ಆಧೇಯವಿದೆಯೆಂದಾಗ ವಿರೋಧ. ಪರ್ಯಾಲೋಚಿಸಿದಾಗ ಅದಕ್ಕೆ ಪರಿಹಾರ. ಇದು ವಿಶೇಷದಲ್ಲಿರುವ ಚಮತ್ಕಾರ.

ಈ ಎಲ್ಲ ಅಲಂಕಾರಗಳ ಹಿನ್ನೆಲೆಯಲ್ಲಿರುವ ತತ್ತ್ವ, ವಿರೋಧ. ಅದು ಕಾಣಿಸಿಕೊಳ್ಳುವ ರೀತಿಯಲ್ಲಿ ವ್ಯತ್ಯಾಸ. ವಸ್ತು–ವಸ್ತುಗಳಲ್ಲಿ, ಕಾರ್ಯ–ಕಾರಣಗಳಲ್ಲಿ, ಆಶ್ರಯ–ಆಶ್ರಯಿಗಳಲ್ಲಿ, ಆಧಾರ–ಆಧೇಯಗಳಲ್ಲಿ ಹೀಗೆ ಹಲವಾರು ಬಗೆಗಳಲ್ಲಿ ಅದು ಕಾಣಿಸಿಕೊಳ್ಳುತ್ತದೆ. ಆದರೆ ಈ ಅಲಂಕಾರಗಳಲ್ಲಿ ನಿಜವಾದ ವಿರೋಧಕ್ಕೆ ಸ್ಥಾನವಿಲ್ಲ. ನಿಜವಾಗಿ ಇಲ್ಲದ ವಿರೋಧವನ್ನು ಕಲ್ಪಿಸಿ ಚಮತ್ಕಾರವನ್ನು ಹುಟ್ಟಿಸುವ ಚಾತುರ್ಯಕ್ಕೇ ಸ್ಥಾನ. ಅದಕ್ಕೇ ವಿರೋಧವು ಕವಿ ಪ್ರೌಢೋಕ್ತಿಸಿದ್ಧವಾಗಿರಬೇಕೆಂಬುದು ನಿಯಮ. ಹಾಗಾಗಿ ವಿರೋಧ ಮೂಲವಾದ ಅಲಂಕಾರಗಳಲ್ಲಿ ಹೆಚ್ಚಿನವು ಆಧುನಿಕರಿಗೆ ಕೃತಕವೆನಿಸುತ್ತವೆಯಾದರೂ ಅವುಗಳಲ್ಲಿರುವ ಚಮತ್ಕಾರವು ಅಲಕ್ಷಿಸುವಂಥದಲ್ಲ.

**ಉದಾಹರಣೆಗಳು:**

**ಋಣ ಹೊತ್ತು ನಿಂತಾಗ, ಋಣ**
**ತೀರಿತೆನಲಾರ**
**ಇರದಿದ್ದರೂ, ನನಗೆ ಇರುಳಲ್ಲಿ ಪ್ರತ್ಯಕ್ಷ**
**ನಿರ್ಭಯದ ಧ್ರುವತಾರೆ.**

—— ಕೆ. ಎಸ್. ನಿಸಾರ‍ಅಹಮ್ಮದ್ 'ಆಯ್ದ ಕವನಗಳು' (ಪುಟ–೭೫)

**ಹೋದನಯ್ಯೋ, ಬಾರನಿನ್ನು ಆ ಅಜಾತಶತ್ರುವು**
**ನಮ್ಮ ತಾಯಿ, ನಮ್ಮ ತಂದೆ, ನಮ್ಮ ಬಂಧು ಬಳಗವು।**
**ಆದರಿನ್ನು ಇಲ್ಲೆ ಇಹುದು ಅವನ ಜೀವಸಾರವು।**
**ಮೊರೆಯುತಿಹುದು ಇನ್ನು ಇಲ್ಲೆ ಅವನ ದನಿ ಉದಾರವು :**

—— ಅಡಿಗ 'ಸಮಗ್ರಕಾವ್ಯ' (ಪುಟ–೧೪೪)

# ಶೃಂಖಲಾಬಂಧ ಮೂಲ ಅಲಂಕಾರಗಳು

## ೩೩. ಏಕಾವಲೀ.

ಲಕ್ಷಣ :– ಹಿಂದು ಹಿಂದಿನದು ಮುಂದು ಮುಂದಿನದಕ್ಕೆ ವಿಶೇಷಣ ರೂಪದಲ್ಲಿ ಸ್ಥಾಪಿತವಾದರೆ ಅಥವಾ ನಿಷೇಧಿಸಲ್ಪಟ್ಟಿದ್ದರೆ ಏಕಾವಲೀ.

( ಯಥಾ ಪೂರ್ವ ಪರಸ್ಯ ವಿಶೇಷಣತಯಾಸ್ಥಾಪನಾಪೋಹನೇ ಏಕಾವಲೀ – ರುಯ್ಯಕ).

ಏಕಾವಲಿಯು ಶೃಂಖಲಾಬಂಧವನ್ನು ಅವಲಂಬಿಸಿದ ಅಲಂಕಾರ. ಪಂಕ್ತಿರೂಪದಲ್ಲಿ ಬರಿಸಿರುವ ವಸ್ತುಗಳಲ್ಲಿ ಮೊದಲನೆಯದು ಮುಂದಿನದಕ್ಕೆ, ಅದು ಮತ್ತೆ ಮುಂದಿನದಕ್ಕೆ ಅಥವಾ ಮುಂದಿನದು ಹಿಂದಿನದಕ್ಕೆ ಮತ್ತೆ ಅದು ತನ್ನ ಹಿಂದಿನದಕ್ಕೆ ಸಂಬಂಧಿಸಿರುವುದು ಶೃಂಖಲೆ. ಸರಪಳಿಯ ಕೊಂಡಿಗಳಂತೆ ಇಲ್ಲಿ ಹಿಂದಿನದಕ್ಕೂ ಮುಂದಿನದಕ್ಕೂ ಸಂಬಂಧ. ವಿಶೇಷ್ಯ -ವಿಶೇಷಣರೂಪದ ಶೃಂಖಲೆಯೇ ಏಕಾವಲಿಯಲ್ಲಿ ಚಮತ್ಕಾರಕ್ಕೆ ಕಾರಣವಾಗಿರುತ್ತದೆ. ಏಕಾವಳಿಯೆಂದರೆ ಒಂದೆಳೆಯ ಮುತ್ತಿನ ಸರ. ಇದನ್ನೇ ದೀಕ್ಷಿತನು ಗೃಹೀತ–ಮುಕ್ತ ರೀತಿಯೆಂದೂ ಬಣ್ಣಿಸುತ್ತಾನೆ.

ಉದಾ :–

ನನೆಯನೆ ಪೇರಿ ಕೆಂದಳಿರೊಳೆಯ್ದೆ ಬಳಲ್ದಳಮಾವು ಬಂದ ಮಾ
ವನೆ ಮರೆಗೊಂಡು ಬಗ್ಗಿಸುವ ಕೋಗಿಲೆ ಕೋಗಿಲೆಯಿರ್ಕೆ ದಾಣದೊಳ್ ।
ಜಿನುಗುವ ತುಂಬಿ ತುಂಬಿಯೊಳರಲ್ದರಲೆಂದಿವರಂ ಬಸಂತರಾ
ಜನ ಮನೆಯಂತೆ ಕಣ್ಗೆಸೆದು ತೋರುಗುಮಲ್ಲಿಯ ನಂದನಾಳಿಗಳ್ ॥

ಇಲ್ಲಿ ಮಾವನ್ನು ವರ್ಣಿಸಲಾರಂಭಿಸಿ, ಅದನ್ನು ಬಿಟ್ಟು ಕೋಗಿಲೆಯನ್ನು – ಹೀಗೆ ವರ್ಣಿಸುತ್ತ ಹೋಗುವುದನ್ನು ಕಾಣಬಹುದು. ಇದು ಗೃಹೀತ – ಮುಕ್ತರೀತಿ. ಅದರಂತೆಯೇ ಇಲ್ಲಿರುವ ಮಾವು, ಕೋಗಿಲೆ, ತುಂಬಿ ಮುಂತಾದವುಗಳು ವಿಶೇಷ್ಯ – ವಿಶೇಷಣ ಭಾವದಿಂದ ಸಂಬಂಧಿಸಿರುವುದನ್ನೂ ಕಾಣಬಹುದು. ಇನ್ನೊಂದು ಪ್ರಕಾರವನ್ನು ಗಮನಿಸಿ.

ಇಲ್ಲಿ ಮರಾಳನಿಲ್ಲದ ಕೊಳಂ ಕೊಳನಿಲ್ಲದ ಪಾಣೆ ಪಾಣೆಪಾ
ಡಿಲ್ಲದ ತುಂಬಿ ತುಂಬಿಗಳ ಗೊಂದಣಮಿಲ್ಲದ ಪೂವಲರ್ದ ಪೂ ।
ವಿಲ್ಲದ ಮಲ್ಲಿಕಾಲತಿಕೆ ಮಲ್ಲಿಗೆಯಿಲ್ಲದ ಮಾವು ಬಂದಮಾ
ವಿಲ್ಲದ ನಂದನಂ ಕುಳಿರ್ವ ನಂದನಮಿಲ್ಲದ ಜಾತಿಜಾಂಗಳಂ ॥
—— ಅನಂತ. ೩ – ೯.

ಇಲ್ಲಿ ನಿಷೇಧ ರೂಪದಲ್ಲಿ ವಿಶೇಷ್ಯ –ವಿಶೇಷಣ ಭಾವವು ಶೃಂಖಲೆಯಾಗಿರುವುದನ್ನು ಕಾಣಬಹುದು.

ಅನ್ಯ ಉದಾಹರಣೆಗಳು:

ಅಂಚೆವಿಂಡಾಡದ ಕೊಳಂ ಕೊಳಂಗಳೊಳು ಸಲೆಪ
ಳಂಚಿ ಸುಳಿಯದ ಗಾಳಿ ಗಾಳಿಗಳ ಬಳಿಪಿಡಿದು
ಸಂಚರಿಸದೆಳೆದುಂಬಿ ದುಂಬಿಗಳ ಬಿಡೆಯಕಿಂಪೆನಿಸದಚ್ಚಲರಲರ್ಗಳ ।
ಗೊಂಚಲೆರಗಿಸದಲತೆ ಲತೆಗಳಡರದ ತಳ್ಳಿ
ನಿಂಚಿಗುರದಿಮ್ಮಾವು ಮಾವುಗಳ ಚೆಂದಳಿ
ರ್ಮಿಂಚದ ಬನಂ ಬನಗಳಿಂ ಬಳಸದೂರೂರ್ಗಳಿಲ್ಲದೆಡೆಯಿಲ್ಲಳೆಯೊಳು ॥

—— ಜೈ.ಭಾ.೩–೩

ಬೆನ್ನಿಗಂಟದ ಹೊಟ್ಟೆ ; ಹೊಟ್ಟೆಗಂಟದ್ದ ತಲೆ ;
ತಲೆಯಲಿ ಠಳಾಯಿಸಿತ್ತೊಂದು ತೋಳ.

—— ಗೋಪಾಲಕೃಷ್ಣ ಅಡಿಗ.

ವೀಣೆಗೆ ತಂತಿಯ ಚಿಂತೆ ; ತಂತಿಗೆ ತನ್ನ ಹುಡುಕುವ ಬೆರಳಿನ ಚಿಂತೆ ;
ಬೆರಳಿಗೆ ಉಂಗುರದ ಚಿಂತೆ ; ಚಿಂತೆಗೆ ತನ್ನ
ಮಡಿಲ ತುಂಬುವುದೊಂದೇ ಚಿಂತೆ .

—— ಕೆ . ಎಸ್. ನರಸಿಂಹಸ್ವಾಮಿ . 'ಮಲ್ಲಿಗೆಯ ಮಾಲೆ' (ಪುಟ –೨೩೯).

ಮಾಸದ ಗುಣಂ , ಕಿಡದ ನಡೆ ನಡೆಯೊಳಾವಗಂ
ಸೂಸುವಾಗಾಂಭೀರ್ಯ, ಗಾಂಭೀರ್ಯವಂ ಕರಂ
ಭೂಷಿಪನಯಂ ನಯದಕೂಡೆ ಬೆಂಬಳಿಯ ವಿನಯಂ ಭಯಂ ಬೆರಸದಿರುವ ;
ಹಾಸಮಯವಾದ ವದನಂ ವದನದೊಳ್ ಸತಿ ವಿ
ಲಾಸಿಸುವ ಮೃದು ಮಧುರ ಭಾಷಿತಂ ಭಾಷಿತದೊ
ಳೋಸರಿಸದಾರ್ಪು ಮುಂತಪ್ಪ ಸದ್ಗುಣಗಣಂ ಭೂಷಣಂ ನೇಹಿಗಂಗೆ .

—— ಗೋಪಾಲಕೃಷ್ಣ ಅಡಿಗ .' ಸಮಗ್ರಕಾವ್ಯ ' (ಪುಟ –೧೦೩)

## ೩೪. ಸಾರ.

**ಲಕ್ಷಣ** :– ಉತ್ತರೋತ್ತರ ಉತ್ಕರ್ಷವೇ ಸಾರ. ( **ಉತ್ತರೋತ್ತರಮುತ್ಕರ್ಷ: ಸಾರ:** )

ಹಿಂದಿನದಕ್ಕಿಂತ ಮುಂದಿನದು ಅದಕ್ಕಿಂತ ಮುಂದಿನದು ಹೀಗೆ ಶ್ರೇಷ್ಠವೆನ್ನುತ್ತ ಕೊನೆಯದು ಎಲ್ಲಕ್ಕಿಂತ ಶ್ರೇಷ್ಠವೆಂದು ಪ್ರತಿಪಾದಿಸುವುದು ಸಾರಾಲಂಕಾರ. ಏಕಾವಲಿಯಂತೆ ಇಲ್ಲಿಯೂ ಶೃಂಖಲಾಬಂಧವಿದೆ. ಜಗನ್ನಾಥನು ಹೇಳುವಂತೆ ಏಕಾವಲಿಯೇ ಉತ್ಕರ್ಷಾಪಕರ್ಷಭಾವದಿಂದ ಕೂಡಿದ್ದರೆ ಸಾರವೆನಿಸುತ್ತದೆ. ಇದೇ ಏಕಾವಲಿಗೂ ಸಾರಕ್ಕೂ ಇರುವ ಭೇದ. ಉತ್ತರೋತ್ತರ ಉತ್ಕರ್ಷದ ವರ್ಣನೆಯಂತೆಯೇ ಅಪಕರ್ಷದ ವರ್ಣನೆಯೂ ಸಾರವೇ ಆಗುತ್ತದೆಂದು ಅಪ್ಪಯ್ಯ ದೀಕ್ಷಿತ, ಜಗನ್ನಾಥ, ಮುಂತಾದವರು ಅಭಿಪ್ರಾಯಪಡುತ್ತಾರೆ. ಒಂದೇ ವಸ್ತುವು ಹಂತಹಂತವಾಗಿ ಉತ್ಕರ್ಷಾಪಕರ್ಷಗಳನ್ನು ಹೊಂದಿದ್ದರೆ ವರ್ಣನೆಯಿದ್ದರೂ ಸಾರವಾಗುತ್ತದೆಂದು ಜಗನ್ನಾಥನು ಹೇಳುತ್ತಾನೆ. ಹೀಗಾಗಿ ಸಾರವು ನಾಲ್ಕು ಪ್ರಕಾರಗಳಲ್ಲಿ ಸಂಭವಿಸುತ್ತದೆ.

ಉದಾ :–

**ಕಲಿಪಾರ್ಥಂ ಪಾರ್ಥನಿಂದಂಕಲಿ ರವಿತನಯಂ ಪಾರ್ಥನಿಂ ಕರ್ಣನಿಂದಂ**
**ಕಲಿ ಭೀಮಂ ಪಾರ್ಥನಿಂ ಕರ್ಣನಿನನಿಲಜನಿಂ ರಾಘವಾದೀಶಭೃತ್ಯಂ ।**
**ಕಲಿ ಶಕ್ರಾಪತ್ಯನಿಂ ಕರ್ಣ ನಿನನಿಲಜನಿಂದಂಜನಾ ಪುತ್ರನಿಂದಂ**
**ಕಲಿ ಧಾತ್ರೀ ಚಕ್ರದೊಳ್ ವಿಕ್ರಮ ಗುಣ ನಿಲಯಂ ವೀರ ಮಾರ್ತಾಂಡದೇವಂ ॥**

ಇದು ಅನೇಕ ವಿಷಯಕವಾಗಿದೆ.

**ನಸುಗಳ್ತಲೆಯರೆಗಳ್ತಲೆ**
**ಮುಸುಂಕುಗಳ್ತಲೆ ಪೊದಳ್ದ ಪೆರ್ಗಳ್ತಲೆ ನಾ ।**
**ಲ್ದೆಸೆ ಗಳ್ತಲೆ ಪೊಸಗಳ್ತಲೆ**
**ರಸಗಳ್ತಲೆಯೆನಿಸಿ ಕೂಡೆ ತೀವಿತು ತಿಮಿರಂ ॥**

— ಗಿರಿಜಾ.೪–೭೩.

ಇದು ಏಕವಿಷಯಕವಾಗಿದೆ. ಕತ್ತಲೆಯು ಕ್ರಮವಾಗಿ ವ್ಯಾಪಿಸುತ್ತ ಹೋಗುವುದನ್ನು ವರ್ಣಿಸಲಾಗಿದೆ.

**ಅನ್ಯ ಉದಾಹರಣೆಗಳು:**

**ಸಾರಂ ಸಂಸಾರದೊಳಬ**
**ಲಾರತ್ನಂ ಸಾರಮಲ್ಲಿ ಜವ್ವನಮದರೊಳ್ ।**

ಸಾರಂ ಮಧುರಾಕಾರಂ
ಸಾರಂ ಮತ್ತಂತ ದಕ್ಕ ಮನುಕೂಲರಸಂ ||
ಹೊಳೆ ಹೊಳೆದುದಾಭರಣ ರತ್ನಾ
ವಳಿಯ ರುಚಿ ತನ್ಮಣಿ ರುಚಿಯಮು
ಕ್ಕುಳಿಸಿತಂಗಚ್ಛವಿ ತದಂಗ ಪ್ರಭೆಯ ನಡಹಾಯ್ದು|
ಥಳಥಳಿಸಿದುದುವದನ ಮುಖವುಂ
ಚಲದ ಕಾಂತಿಯನೊದೆದು ಕಂಗಳ
ಬೆಳಗುವಿಸಟಂಬರಿದುದೇನೆಂಬೆನು ನಿತಂಬಿನಿಯ ||

— ಕುಮಾರ. ಆದಿ. ೧೩–೨೪.

ಎದುರಿಗಿಲ್ಲದಿರಲು ನೋಡುವಷ್ಟೇ ಹಂಬಲು
ನೋಡಿದಾಗ ಕೂಡುವೊಂದೇ ಸುಖದ ಕೋರಿಕೆ
ಸೇರೆಗಣ್ಣ ಸತಿಯನಪ್ಪಿಕೊಂಡ ಬಳಿಕವೋ
ದೇಹವೆರಡು ಒಂದೇ ಆಗಲೆಂದು ಬಯಸುವೆ.

— ತೀ. ನಂ. ಶ್ರೀ.

ಅಪ್ಪ ಹಾಕಿದ ಆಲದ ಗಿಡ
ಮಗನ ಕಾಲಕ್ಕೆ ಬರಿಯ ಬುಡ ;
ಮೊಮ್ಮಗನಿಗಿರಲಿಲ್ಲ ಅದರ ಕಲ್ಪನೆ ಕೂಡ
ಹೀಗೆ ಬೆಳದಿದ್ದೇವೆ ನಾವು

— ಕೆ. ಎಸ್. ನರಸಿಂಹಸ್ವಾಮಿ.

ಚಂದನ ಬಹುಕಂಪು ಚಂದನಕಿಂತಲು
ಬಹುತಂಪು ಚಂದ್ರಮಂಡಲವು
ಮತ್ತಿನ ಚಂದನ ಚಂದ್ರರಿಗಿಂತಲು
ಬಹುತಂಪು ಶಿಷ್ಟರ ಮನವು

— ಎಸ್. ವಿ. ಪರಮೇಶ್ವರಭಟ್. 'ಇಂದ್ರಚಾಪ' (ಪುಟ–೭೬)

ಗಾಂಧೀ ಇದ್ದಾಗ್ಗೆ ಅಪರಂಜಿ ಬೇಕಾಗಿತ್ತು
ಈಗ ಹದಿನಾಲ್ಕು ಕ್ಯಾರೆಟ್ಟೇ ಸಾಕು
ನಾಳೆ ಹಿತ್ತಾಳೆ ; ಬಂಗಾರ ಸ್ವರ್ಣ ಪರೀಕ್ಷೆ
ಮರೆತು ಬಿಟ್ಟರೆ ಸಾಮ್ಯ ಯೋಗ ಸುಲಭ .

— ಅಡಿಗ. 'ಸಮಗ್ರಕಾವ್ಯ' (ಪುಟ–೩೧೬)

# ೩.೫. ತರ್ಕ ನ್ಯಾಯ ಮೂಲಕ ಅಲಂಕಾರಗಳು.

## ೩.೫. ಕಾವ್ಯಲಿಂಗ.

ಲಕ್ಷಣ:– ಕಲ್ಪಿತವಾದ ಕಾರಣದಿಂದ ಸಂದಿಗ್ಧವೋ ಅಸಂಭಾವ್ಯವೋ ಆದ ವಿಷಯವನ್ನು ಸಮರ್ಥಿಸುವುದು ಕಾವ್ಯಲಿಂಗ.

( ಸಮರ್ಥನೀಯಸ್ಯಾರ್ಥಸ್ಯ ಕಾವ್ಯಲಿಂಗಂ ಸಮರ್ಥನಮ್ – ಕುವಲಯಾನಂದ )

ಕಾವ್ಯಲಿಂಗವೆಂದರೆ ಕಾವ್ಯದಲ್ಲಿರುವ ಕಾರಣ. ಲಿಂಗವೆನ್ನುವುದು ನ್ಯಾಯಶಾಸ್ತ್ರದ ಪಾರಿಭಾಷಿಕ ಪದ. ಗುರುತು ಅಥವಾ ಚಿಹ್ನೆಯೆಂಬುದರ ಜೊತೆಗೆ ಹೇತು ಅಥವಾ ಕಾರಣವೆಂಬ ಅರ್ಥವೂ ಅದಕ್ಕುಂಟು. ಅದೇ ಪದವನ್ನು ಇಲ್ಲಿಯೂ ಬಳಸಲಾಗಿದೆ. ತರ್ಕಶಾಸ್ತ್ರದ ಲಿಂಗವು ಕಾರ್ಯ – ಕಾರಣಗಳನ್ನು ತಿಳಿವ ಸಂದರ್ಭದಲ್ಲಿ ಪ್ರಯುಕ್ತವಾದರೂ ಅಲ್ಲಿ ಚಮತ್ಕಾರವಿಲ್ಲ. ಆದರೆ ಇಲ್ಲಿನ ಕಾರಣವು ಕಾವ್ಯಾತ್ಮಕವಾಗಿರುವುದರಿಂದ ಚಮತ್ಕಾರಿಕವಾಗಿರುತ್ತದೆ. ಆದ್ದರಿಂದ ಇದನ್ನು ಕಾವ್ಯಲಿಂಗವೆಂದು ಕರೆಯುತ್ತಾರೆ.

ಹೇತು ಅಥವಾ ಕಾರಣವು ಎರಡು ಬಗೆಯದು. ಕಾರಕ ಮತ್ತು ಜ್ಞಾಪಕ. ವಸ್ತುವೊಂದರ ನಿಷ್ಪಾದನೆಗೆ ಕಾರಣವಾದುದು ಕಾರಕಹೇತು. ಉದಾ:– 'ಬಂಗಾರದಿಂದ ಬಳೆ ಮಾಡುತ್ತಾನೆ' ಇಲ್ಲಿ ಬಂಗಾರವು ಕಾರಕಹೇತುವಾಗುತ್ತದೆ. ಬಳೆಯನ್ನು ನಿಷ್ಪಾದಿಸುವುದಕ್ಕೆ ಅದು ಕಾರಣ. ಜ್ಞಾಪಕ ಹೇತುವು ನಡೆದು ಹೋದುದನ್ನು ನಮಗೆ ನೆನಪಿಸುತ್ತದೆ. 'ಪರ್ವತದಲ್ಲಿ ಹೊಗೆಯಿರುವುದರಿಂದ ಬೆಂಕಿಯಿದೆ'. ಇಲ್ಲಿ ಹೊಗೆಯು ಬೆಂಕಿಯನ್ನು ತಿಳಿಯಲು ಹೇತು. ಆದರೆ ಅದು ಬೆಂಕಿಯನ್ನು ಹುಟ್ಟಿಸುವುದಿಲ್ಲ. ಇದ್ದುದನ್ನು ನೆನಪಿಸುತ್ತದೆ. ಅಥವಾ ನಮ್ಮ ಗಮನಕ್ಕೆ ತರುತ್ತದೆ. ಇವುಗಳಲ್ಲಿ ಕಾರಕ ಹೇತುವು ಕಾವ್ಯಲಿಂಗದಲ್ಲಿಯೂ, ಜ್ಞಾಪಕ ಹೇತುವು ಅನುಮಾನವೆಂಬ ಅಲಂಕಾರದಲ್ಲಿಯೂ ಇರುತ್ತದೆಂದು ರುಯ್ಯಕ, ವಿಶ್ವನಾಥ, ಮುಂತಾದವರು ಹೇಳುತ್ತಾರೆ. *

ಕಾವ್ಯಲಿಂಗವು ಕಾರ್ಯ–ಕಾರಣಭಾವ ಅಥವಾ ಹೇತು –ಹೇತುಮದ್ಭಾವವನ್ನು ಅವಲಂಬಿಸಿದ್ದರೂ ಅದು ಕಾರಣವನ್ನು ವಾಚ್ಯವಾಗಿ ಹೇಳುವುದಿಲ್ಲ. ಕಾರಣವು ಗಮ್ಯವಾಗಿರುತ್ತದೆ. ಅಂದರೆ ಕವಿಯು ಕಾರಣವನ್ನು ಹೇಳಿದ್ದರೂ ಅದು ಕಾರಣವೆಂಬುದನ್ನು ಹೇಳಿರುವುದಿಲ್ಲ. ಸಹೃದಯನು ಪರ್ಯಾಲೋಚಿಸಿದಾಗ ಅದು ತಿಳಿದು ಬರುತ್ತದೆ. ನಿರ್ದಿಷ್ಟವಾದ ವಾಕ್ಯವನ್ನೋ ಪದವನ್ನೋ ಕುರಿತು ಪರ್ಯಾಲೋಚಿಸಿದಾಗ ಕಾರಣವನ್ನು ಹೇಳಿರುವುದು ಗೊತ್ತಾಗುತ್ತದೆ. ವಾಕ್ಯದ ಅರ್ಥವನ್ನು ಪರ್ಯಾಲೋಚಿಸಿದಾಗ ತಿಳಿದು ಬಂದರೆ ವಾಕ್ಯಾರ್ಥ ಕಾವ್ಯಲಿಂಗ, ಪದ

ಅಥವಾ ಪದಗಳ ಮೂಲಕ ತಿಳಿದು ಬಂದರೆ ಪದಾರ್ಥ ಕಾವ್ಯಲಿಂಗ ಎಂಬ ಎರಡು ಪ್ರಕಾರಗಳನ್ನು ಹೇಳಲಾಗಿದೆ.

ಉದಾ :-

**ಬಾಣಂ ವಲ್ಲಭನಕ್ಕುಮೆಂದು ಪಡೆದಾವಾಗ್ದೇವಿಗಬ್ಜೋದ್ಭವಂ**
**ಜಾಣಿಂಬಾಣಿಯೆನಿಪ್ಪದೊಂದು ಪೆಸರಂ ಮುನ್ನಿತ್ತನೆಂದಂದು ಪೋ ।**
**ಮಾಣೆನ್ನನ್ಯ ಕವಿಸ್ತುತಿ ವ್ಯಸನಮಂ ವಾಗ್ಜಾತಚಾತುರ್ಯಗೀ**
**ರ್ವಾಣಂ ತಾನೆನೆ ಸಂದ ಬಾಣನೆವಲಂ ವಂದ್ಯಂ ಪೆರರ್ ವಂದ್ಯರೇ ॥**

ಇಲ್ಲಿ ಇತರರು ವಂದ್ಯರಾಗದೆ ಬಾಣನೊಬ್ಬನೇ ವಂದ್ಯನೆಂದು ಕವಿಯು ಹೇಳಿದ್ದು ಸಂದಿಗ್ಧ ವಿಷಯ. ಇದಕ್ಕೆ ಸಮರ್ಥನೆಯು ಅಗತ್ಯ. ಅದಕ್ಕೆ ಕವಿಯು '' ಬಾಣನು ವಲ್ಲಭನಾಗುತ್ತಾನೆಂದು ತಿಳಿದ ಬ್ರಹ್ಮನು ವಾಗ್ದೇವಿಯನ್ನು ಸೃಷ್ಟಿಸಿದಾಗಲೇ ಬಾಣಿ(ವಾಣಿ) ಎಂಬ ಹೆಸರನ್ನಿಟ್ಟಿದ್ದಾನೆ ''. ಎಂಬುದು ಕವಿಯ ಸಮರ್ಥನೆ. ಈ ಕವಿಕಲ್ಪಿತವಾದ ಕಾರಣವು ಬಾಣನ ವಂದ್ಯತ್ವವೆಂಬ ಕಾರ್ಯವನ್ನು ಸಮರ್ಥಿಸಿದೆ.

ಆಲಂಕಾರಿಕರು ಕಾವ್ಯಲಿಂಗದಲ್ಲಿ ಕಾರ್ಯ-ಕಾರಣಭಾವವನ್ನು ಹೇಳಿದ್ದಾರೆಂದು ಕಾರ್ಯ-ಕಾರಣಗಳನ್ನು ಹುಡುಕತೊಡಗಿದರೆ ಗೊಂದಲವಾಗುತ್ತದೆ. ಅದಕ್ಕೆ ಕುವಲಯಾನಂದಕಾರನು ಕಾರ್ಯ ಎನ್ನುವುದರ ಬದಲಾಗಿ 'ಸಮರ್ಥನೀಯವಾದ ಅರ್ಥ' ಎನ್ನುತ್ತಾನೆ. ಕಾರಣವೆನ್ನುವುದರ ಬದಲಿಗೆ 'ಸಮರ್ಥನೆ' ಯೆನ್ನುತ್ತಾನೆ. ಇದು ಅಲಂಕಾರದ ಸ್ವರೂಪವನ್ನು ತಿಳಿಯಲು ಹೆಚ್ಚು ಸಹಕಾರಿ.

ಕಾವ್ಯಲಿಂಗದ ಚಮತ್ಕಾರವಿರುವುದು ಕಾರಣ ನಿರೂಪಣೆ ಅಥವಾ ಸಮರ್ಥನೆಯಲ್ಲಿ. ಕವಿಯು ನಿಜವಾದ ಕಾರಣವನ್ನೇ ಹೇಳಿರಲಿ, ಕಲ್ಪಿತವಾದ ಕಾರಣವನ್ನೇ ಹೇಳಿರಲಿ ಅದು ಇಲ್ಲಿ ಮುಖ್ಯವಲ್ಲ. ಕಲ್ಪಿತವಾದ ಕಾರಣವಾಗಿದ್ದರೂ ನಿಜವೆನ್ನುವಂತಿರಬೇಕು. ಸಹೃದಯರೂ ತಲೆದೂಗುವಂತಿರಬೇಕು. ನಿಜವಾದ ಕಾರಣವಾಗಿದ್ದರೆ ಅದು ಚಮತ್ಕಾರಿಕವಾಗಿರಬೇಕು ಎಂಬುದು ಮುಖ್ಯ. ಅದಿಲ್ಲವಾದರೆ ಅದಕ್ಕೆ ಅಲಂಕಾರತ್ವವಿಲ್ಲ.

**ಅನ್ಯ ಉದಾಹರಣೆಗಳು:**

**ಇದರೊಳ್ ಶ್ವೇತಾತಪತ್ರಸ್ಥಗಿತ ದಶದಿಶಾಮಂಡಲಂ ರಾಜಚಕ್ರಂ**
**ಪುದಿದಳ್ಕಾಡಿತ್ತಡಂಗಿತ್ತಿದರೊಳ್ ಕುರುರಾಜಾನ್ವಯಂ ಮತ್ಪ್ರತಾಪ ।**
**ಕ್ಕಿದರಿಂದಂ ನೋಡಗುರ್ವಿರ್ವಿದುದಿದುವೆ ಮಹಾಭಾರತಕ್ಕಾದಿಯಾಯ್ತು**
**ಬ್ಗದಳಾಕ್ಷಿ ಪೇಳ ಸಾಮಾನ್ಯಮೆ ಬಗೆಯ ಭವತ್ಕೇಶಪಾಶ ಪ್ರಪಂಚಂ ॥**

— ಪಂ. ಭಾ. ೧೨-೧೫೬

**ನಗೆಗಣ್ಣಲ್ಲಳ ಕೂಟಮಂಪಡೆದು ವಿಂಪಶ್ರೋತ್ರ ಮೀಂಟಿತ್ತು ಮಾಂ**
**ತುಗಳಿಂ ನಾಸಿಕೆಗಾಯ್ತುವಳ್ಸಳಿದ ಸೂಳೋಳ್ ಸೌರಭಂಸ್ವಾದುನಾ ।**

ಲಗೆಗಾಯ್ತಾತ್ಕೆಯ ಹಸ್ತಪಲ್ಲವರ ಸಾನ್ನಾದ್ಯಂಗಳಿಂ ಸೋಂಕುವಾ
ಸೆಗೆ ಪಕ್ಕಾಗದೇ ನಿಂದ ಪಲ್ಲವ ಕನಂಗಕಾಯ್ತನಂಗಜ್ವರಂ ||

— ಅನಂತ. ೧೧–೨೯.

ನಿಃ ಶಸ್ತ್ರವೀರ, ಸಾಮ್ಯೈಕಶೂರ, ದಾಂತವಿನಯಧೀರ,
ವ್ಯಾಪಾರ ಚತುರ, ಉತ್ತೀರ್ಣನಾದ ಶಾಂತಿಯ ಅಪಾರ ತೀರ
ಇಲ್ಲವರ ಕೂಡ ಉಳ್ಳವರ ಜೋಡಿ ಸರಿಸಮವು ಇವಗೆ ನಂಟು
ಇವನ ವರ್ಣನೆಯೇ ಅಮರವಹುದು , ಅಂಥವನು ಮರ್ತ್ಯನೆಂತು?

— ದ . ರಾ. ಬೇಂದ್ರೆ .

ದೇವರಿಗೆ ಮುಡಿಪಾಗಲೆಂದು ಹುಟ್ಟಿದ ಹೂವು
ಸೃಷ್ಟಿ ನಿಯಮದ ಯಾವ ಸಲಿಕೆಗಾಗಿಯೊ ಅರಳಿ
ದೇವನಡಿ ಸೇರಿದರೆ ಅದರರಿವು ಪುಣ್ಯತಮ; ಆ ಪುಣ್ಯವಾಕಸ್ಮಿಕ

— ಕೆ. ಎಸ್. ನಿಸಾರಅಹಮದ್ ' ಆಯ್ದ ಕವನಗಳು ' (ಪುಟ–೭೦).

# ೩೬. ಅನುಮಾನ.

**ಲಕ್ಷಣ** :– ಕಾರ್ಯದಿಂದ ಕಾರಣವನ್ನು ಊಹಿಸಿ ತಿಳಿದಲ್ಲಿ ಅನುಮಾನಾಲಂಕಾರ.

( **ಲಿಂಗಜ್ಞಾನಾತ್ ಸಾಧ್ಯಸಿದ್ಧಿರನುಮಾನಮಿಹೋಚ್ಯತೇ** –ಕುವಲಯಾನಂದ )

ತರ್ಕ ನ್ಯಾಯವನ್ನು ಅವಲಂಬಿಸಿದ ಇನ್ನೊಂದು ಅಲಂಕಾರ ಅನುಮಾನ. ಕಾವ್ಯಲಿಂಗದಂತೆಯೇ ಇಲ್ಲಿಯೂ ಕಾರ್ಯ – ಕಾರಣ ಭಾವವಿರುವುದಾದರೂ ಅವುಗಳ ಸ್ಪಷ್ಟವಾದ ನಿರ್ದೇಶವಿರುತ್ತದೆ. ಅಲ್ಲಿಯಂತೆ ಕಾರಣವು ಗಮ್ಯವಲ್ಲ. ವಾಚ್ಯವಾಗಿರುತ್ತದೆ. ಕಾವ್ಯಲಿಂಗದಲ್ಲಿ ಕಾರಕ ಹೇತುವಿದ್ದರೆ ಇಲ್ಲಿ ಜ್ಞಾಪಕ ಹೇತುವಿರುತ್ತದೆ. ಜ್ಞಾಪಕ ಹೇತುವೆಂದರೆ ಕಾರ್ಯದಿಂದ ಕಾರಣವನ್ನು ಊಹಿಸುವುದು. ಉದಾ:– ಹೊಳೆಯಲ್ಲಿ ಕೆನ್ನೀರಿನ ಪ್ರವಾಹವನ್ನು ಕಂಡಾಗ ಮಳೆ ಬಿದ್ದುದನ್ನು ಊಹಿಸಿಕೊಳ್ಳುವುದು. ಕಾರ್ಯ – ಕಾರಣ ಅಥವಾ ಸಾಧ್ಯ – ಸಾಧನಗಳೆರಡರ ನಿರ್ದೇಶವೂ ಇಲ್ಲಿರುವುದರಿಂದ ಅನುಮಾನಾಲಂಕಾರವನ್ನು ಸುಲಭವಾಗಿ ಗುರುತಿಸಬಹುದು.

ಉದಾ :–

**ಸುದತಿಯ ಸುಯ್ಗಳಿಂ ಬನಮ ಬೆಂದುದು ಬೇಯದೊಡೇಕೆ ಕೆಚ್ಚನಾ**
**ದುದೊ ತನಿವಣ್ಗಳಂ ಸವಿದ ಕೀರದ ಚಂಚುವುದೇಕೆ ಮೂಗುವ ।**
**ಟ್ಟುದೊ ಮಧು ಪೋಪುದುಂ ಕಳಿಕೆಗರ್ಚಿದ ಕೋಗಿಲೆಯೇಕೆ ಪಾರಿಪೋ**
**ದುದೊ ಶಿಶಿರಾಂಬುಜಾಕರಕೆ ತುಂಬಿ ತುಡುಂಕಿ ನವಪ್ರಸೂನಮಂ ॥**

ಇಲ್ಲಿ ' **ಸುದತಿಯ ಸುಯ್ಗಳಿಂದ ಬನಮ ಬೆಂದುದು** '– ಎಂಬುದು ಸಾಧ್ಯ. ಅದನ್ನು ಸಾಧಿಸುವುದಕ್ಕಾಗಿ ಕವಿಯು ಅನೇಕ ಸಾಧನ ಅಥವಾ ಕಾರಣಗಳನ್ನು ಕೊಟ್ಟಿದ್ದಾನೆ. ತನಿವಣ್ಣುಗಳನ್ನು ಸವಿಯುವ ಗಿಳಿಯ ಚುಂಚು ಕೆಂಪಾಗಿದೆ. ಬೆಂಕಿಯಲ್ಲಿ ಬೆಂದರೆ ಕೆಂಪಾಗುವುದು ಸಹಜ. ಹಾಗಾಗಿ ಗಿಳಿಯೂ ಬೆಂದಿರಬೇಕು. ಕಳಿಕೆಗರ್ಚಿದ ಕೋಗಿಲೆಯು ವಸಂತನ ನಿರ್ಗಮನದೊಂದಿಗೆ ಮೂಕವಾಗಿದೆ. ಅದಕ್ಕೂ ಬಿಸಿ ತಟ್ಟಿರಬೇಕು. ಹೊಸ ಹೂವನ್ನು ಹುಡುಕಿಕೊಂಡು ದುಂಬಿಯು ತಂಪಾದ ಕೊಳಕ್ಕೆ ಧಾವಿಸಿದೆ. ಅದಕ್ಕೆ ಬಿಸಿ ತಟ್ಟದಿದ್ದರೆ ಕೊಳಕ್ಕೆ ಹೋಗುತ್ತಿತ್ತೆ? ಹೀಗೆ ಕಲ್ಪಿತವಾದ ಕಾರಣಗಳನ್ನು ಕೊಟ್ಟು ಕವಿಯು ಸಾಧ್ಯವನ್ನು ಸಮರ್ಥಿಸಿದ್ದಾನೆ. ಇಲ್ಲಿ ಸಾಧ್ಯವನ್ನು ಮೊದಲು ನಿರ್ದೇಶಿಸಿ ಅನಂತರ ಸಾಧನವನ್ನು ನಿರ್ದೇಶಿಸಿದ್ದಾನೆ. ಹೀಗಲ್ಲದೆ ಮೊದಲು ಸಾಧನವನ್ನು ನಿರ್ದೇಶಿಸಿ ಅನಂತರ ಸಾಧ್ಯವನ್ನು ನಿರ್ದೇಶಿಸುವುದೂ ಅನುಮಾನವೇ.

ಉದಾ :–

**ನುಡಿ ತಡವಪ್ಪುದೊಂದು ಮೊಗದೊಳ್ ಮುರುಕಂ ದೊರೆಕೊಳ್ವುದೊಂದು ನಾ**
**ಣ್ಗಡೆಗುಡದಿರ್ಪುದೊಂದು ನುಡಿಗಳ್ ಮೊರೆಯಂ ಮರೆಯಿಪ್ಪುದೊಂದು ಕ ।**

ಳ್ದುಡಿದವರಂದ ಮಿಂತು ಸಿರಿ ಸಾರ್ತರೆ ಸಾರ್ವುದದರ್ಕೆ ಸಂದೆಯಂ
ಬಡದೆ ಜಲಕ್ಕನೀಗಳರಿದೆಂಸಿರಿ ಕಳ್ಳೊಡವುಟ್ಟಿತೆಂಬುದಂ ||

— ಪಂ. ಭಾ. ೨–೪೯.

ಇಲ್ಲಿ 'ಸಿರಿಕಳ್ಳೊಡವುಟ್ಟಿತು' ಎಂಬುದು ಸಾಧ್ಯ. ಅದನ್ನು ಸಾಧಿಸುವ ಸಾಧನಗಳನ್ನು ಕವಿ ಮೊದಲಿನ ಮೂರು ಪಾದಗಳಲ್ಲಿಟ್ಟಿದ್ದಾನೆ. ಇಲ್ಲಿ ಸಾಧನ ನಿರ್ದೇಶ ಮೊದಲು ಬಂದು ಸಾಧ್ಯ ನಿರ್ದೇಶವು ಅನಂತರ ಬಂದಿದೆ.

ಅನುಮಾನ ಮತ್ತು ಉತ್ಪ್ರೇಕ್ಷೆಗಳಲ್ಲಿ ಸಾಮ್ಯವಿದೆ. ಕೆಲವೊಮ್ಮೆ ಅವುಗಳನ್ನು ತಿಳಿಸುವ ಪದಗಳು ಅವೇ ಆಗಿರುವುದುಂಟು. ಕಾರಣ, ಫಲಗಳನ್ನು ತಿಳಿಸುವ ಕ್ರಮವೂ ಉಂಟು. ಆದರೆ ಉತ್ಪ್ರೇಕ್ಷೆಯಲ್ಲಿ ಸಂಭಾವನೆಯು ಮಾತ್ರ ಇರುತ್ತದೆ. ಸಾಧನಗಳ ನೆರವಿನಿಂದ ಸಾಧ್ಯವನ್ನು ಸಮರ್ಥಿಸುವ ಅಪೇಕ್ಷೆ ಇರುವುದಿಲ್ಲ. ಆದರೆ ಅನುಮಾನದಲ್ಲಿ ಸಾಧ್ಯ –ಸಾಧನಗಳ ನಿರ್ದೇಶವಿರುತ್ತದೆ. ಉತ್ಪ್ರೇಕ್ಷೆಯಲ್ಲಿ ಸಂಭಾವನೆಯು ಸಾದೃಶ್ಯ ಮೂಲವಾಗಿದ್ದರೆ ಇಲ್ಲಿ ಕಾರ್ಯ–ಕಾರಣಭಾವವನ್ನು ಆಧರಿಸಿರುತ್ತದೆ.

ಅನ್ಯ ಉದಾಹರಣೆಗಳು:

ನನೆ ಮಸಿವಣ್ಣ ಮಾದುವು ಮುಗುಳ್ ಮಿಗೆ ಸೀದುವು ಬಂಡುಸೋರ್ದಪೂ
ವಿನ ಪೊಸಗೊಂಚಲುಂ ಕೊರಗಿ ಪೋದವು ಕೋರಕ ಪಲ್ಲವಂಗಳುಂ |
ಮೊನೆ ಪೊಗೆಯುತ್ತಮಿರ್ದಪುವು ಬೀಸುವೆಲರ್ ಬಿಸುಸುಯ್ಯನೆತ್ತಿ ಸೊಂ
ಕಿನೊಳಲುರ್ದಪ್ಪುದೀ ಬನದೊಳಿರ್ದ ಪರಕ್ಕುಮನಂಗ ತಾಪಸರ್ ||

— ಲೀಲಾ. ೧೧–೬.

ಬನಗಳ್ತಲೆಯುಂ ಕಮಳಾ
ಪ್ತನ ಕದಿರುಂ ಕಾದಿ ಮಡಿವುತಳಿಯುಂ ಚಾಂಪೇ |
ಯನಿಕಾಯಮಾದುವಲ್ಲದೊ
ಡೆನಸುಂ ತದ್ವಯಕೆ ಪಗೆತನಂ ಸಮನಿಪುದೇ ||

— ರಾ. ವಿ. ೨–೫೪.

ಚಳಿಗಾಲ ಬಂದಾಗ 'ಎಷ್ಟು ಚಳಿ' ಎಂದರು
ಬಂತಲ್ಲ ಬೇಸಿಗೆ 'ಕೆಟ್ಟ ಬಿಸಿಲೆಂದರು';
ಮಳೆ ಬಿತ್ತೋ 'ಬಿಡದಲ್ಲ ಶನಿ' ಎಂಬ ಟೀಕೆ;
ಇವರು ಮೆಚ್ಚುವ ವಸ್ತು ಇಲ್ಲಿಲ್ಲ ಜೋಕೆ!

— ಕೆ. ಎಸ್. ನರಸಿಂಹಸ್ವಾಮಿ.

ಎಲ್ಲಿಹುದಯೋಧ್ಯೆ? ಎಲ್ಲಿಹುದು ದ್ವಾರಾವತಿಯು? ಎಲ್ಲಿ ಗೋಕುಲವದೀಗ?
ರಾಮಕೃಷ್ಣರ ಕೀರ್ತಿ ನಾಮಶೇಷವು ತಾನೆ, ಕಾಲವಶವೆಲ್ಲ ಬೇಗ !
ನೆಲ ಮುಗಿಲುಗಳು ಇರುವ ವರೆಗೆ ಗಂಗೆಯು ಉಂಟು ,
ಉಂಟವಳ ಧವಲಮೂರ್ತಿ
ಶ್ರೀಭಗೀರಥ ಸಾರ್ವಭೌಮ ನಿನ್ನದು ಒಂದೇ ನಿಜವಾದ ಕೀರ್ತಿ

— ದ. ರಾ. ಬೇಂದ್ರೆ.'ಗಂಗಾವತರಣ'

ಪ್ರಿಯೆ,
ನಾನು ಖಂಡಿತ ಕುಡಿದಿಲ್ಲ
ಕಳ್ಳು
ಕುಡಿದಿದ್ದರೆ ಹೇಳಲಾಗುತ್ತದೆಯೇ
ಸುಳ್ಳು ?

— ಎಸ್. ಎಸ್.ಲಕ್ಷ್ಮೀನಾರಾಯಣಭಟ್ 'ಸೂಜಿಮಲ್ಲಿಗೆ '(ಪುಟ–೯೪)

ನಮ್ಮ ಯೋಜನೆಗಳೆಲ್ಲ ಸ್ವಲ್ಪ ನಿಧಾನ ; ಯೋಚನೆ ಮಾಡುವುದಂತೂ
ಅದಕ್ಕೂ ನಿಧಾನ ; ಗದ್ದಕ್ಕೆ ಬೆಂಕಿ ಹತ್ತಿದ ಮೇಲೆ
ಬಾವಿಯ ತೋಡುವ ಜನ
ಅದಕ್ಕೇ ಇಂದು ಎಲ್ಲಿ ನೋಡಿದರೂ ಕಣ್ಣು ತಿವಿಯುತ್ತಿದೆ
ಕೆಂಪು ತ್ರಿಕೋನ .

— ಚೆನ್ನವೀರ ಕಣವಿ ' ಸಮಗ್ರಕಾವ್ಯ ' (ಪುಟ – ೩೪೫).

# ೩೭. ಯಥಾಸಂಖ್ಯಾ.

ಲಕ್ಷಣ :– ಸಂಖ್ಯಾಕ್ರಮವನ್ನು ಅನುಸರಿಸಿರುವ ಅನ್ವಯ ಕ್ರಮವೇ ಯಥಾಸಂಖ್ಯಾ.

( **ಯಥಾಸಂಖ್ಯಂ ಕ್ರಮೇಣೈವ ಕ್ರಮಿಕಾಣಾಂ ಸಮನ್ವಯಃ** – ಕುವಲಯಾನಂದ )

ಸಂಖ್ಯಾಕ್ರಮವನ್ನು ಅನುಸರಿಸಿ ಹೇಳುವುದು ಯಥಾಸಂಖ್ಯಾ. ಅಂದರೆ ಮೊದಲು ಹೇಳಿದ ಕ್ರಮದಲ್ಲಿಯೇ ಮುಂದಿನವುಗಳನ್ನು ಹೇಳಲಾಗುತ್ತದೆ.

ಉದಾ :–

**ಕಳಕಂಠಗಳ ಬಗ್ಗಣೆ**
**ಗಿಳಿಗಳ ಚಪ್ಪರಣೆಯಳಿಗಳಿಂಚರ ಮೆಸೆಗುಂ।**
**ತಳಿರ್ಗಳ್ ತನಿವಣ್ಗಳ್ ಸುಮ**
**ಕುಳಂಗಳಿಡಿಕಿರಿದ ಚೂತಶಾಖಾಂತರದೊಳ್ ॥**

ಇಲ್ಲಿ ಮೊದಲು ಯಾವ ಕ್ರಮವನ್ನು ಅನುಸರಿಸಿ ಹೇಳಲಾಗಿದೆಯೋ ಅದನ್ನೇ ಮುಂದೆಯೂ ಇಟ್ಟುಕೊಳ್ಳಲಾಗಿದೆ. ಕಳಕಂಠಗಳ ಬಗ್ಗಣೆ ತಳಿರುಗಳಲ್ಲಿ, ಗಿಳಿಗಳ ಚಪ್ಪರಣೆ ತನಿವಣ್ಣುಗಳಲ್ಲಿ, ಅಳಿಗಳ ಇಂಚರ ಸುಮಕುಳಂಗಳಲ್ಲಿ ಎಂದು ಅನ್ವಯಿಸಿಕೊಳ್ಳಬೇಕು.

ಭಾಮಹ, ಉದ್ಭಟ, ವಾಮನರಂಥ ಪ್ರಾಚೀನರು ಯಥಾಸಂಖ್ಯವನ್ನು ಅಲಂಕಾರವೆಂದೇ ಹೇಳಿದ್ದರೂ ಹೇಮಚಂದ್ರನು ಇದಕ್ಕೆ ಅಲಂಕಾರತ್ವವನ್ನೊಪ್ಪುವುದಿಲ್ಲ. ಜಗನ್ನಾಥನು ಸ್ಪಷ್ಟವಾಗಿ ಈ ಅಲಂಕಾರದಲ್ಲಿ ಯಾವ ಸೊಗಸೂ ಇಲ್ಲವೆಂದು ಹೇಳುತ್ತಾನೆ. ಅಪಕ್ರಮವೆಂಬ ದೋಷನಿವಾರಣೆಯಷ್ಟೇ ಇಲ್ಲಿರುವುದು. ಕವಿಪ್ರತಿಭೆಗೆ ಅವಕಾಶವಿಲ್ಲವೆಂದು ಇದಕ್ಕೆ ಅಲಂಕಾರತ್ವವನ್ನು ನಿರಾಕರಿಸಿದ್ದಾನೆ. ಅದು ಒಪ್ಪತಕ್ಕ ಮಾತು. fine

## ೩೮. ಪರ್ಯಾಯ.

ಲಕ್ಷಣ :– ಒಂದೇ ಆಧೇಯವು ಕ್ರಮವಾಗಿ ಅನೇಕ ಆಧಾರಗಳಲ್ಲಿರುವುದು ಅಥವಾ ಅನೇಕ ಆಧೇಯಗಳು ಒಂದೇ ಆಧಾರದಲ್ಲಿರುವುದು ಪರ್ಯಾಯ.

( ಏಕಮನೇಕಸ್ಮಿನ್ನನೇಕಮೇಕಸ್ಮಿನ್ ಕ್ರಮೇಣ ಪರ್ಯಾಯಃ –ರುಯ್ಯಕ )

ಒಂದೇ ವಸ್ತುವು ಕ್ರಮವಾಗಿ ಅನೇಕ ಸ್ಥಳಗಳಲ್ಲಿರುವಂತೆ ವರ್ಣಿಸುವುದು ಅಥವಾ ಅನೇಕ ವಸ್ತುಗಳು ಕ್ರಮವಾಗಿ ಒಂದೇ ಸ್ಥಳವನ್ನು ಆಶ್ರಯಿಸಿರುವಂತೆ ವರ್ಣಿಸುವುದು ಪರ್ಯಾಯವಾಗುತ್ತದೆ. ಈ ಆಧಾರ–ಆಧೇಯಗಳು ನಿಜವಾದವೂ ಆಗಿರಬಹುದು ; ಕಲ್ಪಿತವಾದವುಗಳೂ ಆಗಿರಬಹುದು.

ಜಳನಿಧಿಯಲ್ಲಿ ಪುಟ್ಟಿ ಜಳಜಾಕ್ಷನ ಪೇರುರಮೆಂಬ ತೊಟ್ಟಿಲೊಳ್
ಬಳೆದು ವಿಳಾಸದಿಂಜಳಜದೊಳ್ ನಲಿದಾಡಿ ಬಳಿಕ್ಕೆ ಯೌವನಂ
ಮೊಳೆವುದು ಮಾರುಮಂ ಬಗೆಯದಾ ನೃಪನೊಳ್ ಸಿರಿಕೂರ್ತು ಬಂದುಕೋ
ಮಳೆ ನೆರದಿರ್ದಳಂತೆ ವಧು ಕೂರ್ತೊಡೆ ಪೆತ್ತಳ ಮಾತು ಗೇಳ್ಪಳೇ ||

— ಲೀಲಾ. ೭–೩೨.

ಇಲ್ಲಿ ಸಿರಿ ಆಧೇಯ, ಜಲನಿಧಿ, ಜಲಜಾಕ್ಷನ ಪೇರುರವೇ ಮುಂತಾದವು ಆಧಾರಗಳು. ಅವು ವಾಸ್ತವವಾಗಿ ಭಿನ್ನವಾಗಿವೆ.

ಪೊಸ ಜಡೆಯೊಳ್ ತೊಡಂಕಿ ನೊಸಲೊಳ್ ನಡೆಪಾಡಿಕಪೋಲ ಭಾಗದೊಳ್
ಪಸರಿಸಿ ಲೋಚನಂಗಳೊಳಮರ್ಚಿ ತದಾಸ್ಯದೊಳೊಂದಿ ಕಂಠದೊಳ್ |
ಮಿಸುಗೆ ಭುಜಾಗ್ರದೊಳ್ ತೊಳಗಿ ವಕ್ಷದೊಳಾಳ್ದು ಕರಂಗಳೊಳ್ವಿರಾ
ಜಿಸಿ ಪದದಲ್ಲಿ ಬಿಳ್ದುವು ಭವಾನಿಯ ಮಾನಿಯ ದೈನ್ಯ ದೃಷ್ಟಿಗಳ್ ||

— ಗಿರಿಜಾ. ೫–೮೬.

ಇಲ್ಲಿ ಆಧಾರಭೇದ ಕಲ್ಪಿತ.

ಅನ್ಯ ಉದಾಹರಣೆಗಳು :

ತುಟಿ ದಡಕ್ಕಂಟಿ ಮೊಲೆ ಬಳಿ ಲಂಗರಿಟ್ಟಾಡಿ ಹೊಕ್ಕುಳಿನ ಸುಳಿಯಲ್ಲಿ ಹೊಕ್ಕು ಜಾರಿ
ಸೊಂಟ ಸುಂಟರಗಾಳಿಯಲ್ಲಿ ಗಿರಗಿರ ಬುಗುರಿ : ತೊಡೆ ಬಂಡೆಗಪ್ಪಳಿಸಿ ಭಗ್ನ ನೌಕೆ.

— ಗೋಪಾಲಕೃಷ್ಣ ಅಡಿಗ.

ಇಳಿದು ಬಾ ತಾಯೆ ಇಳಿದು ಬಾ
ಹರನ ಜಡೆಯಿಂದ
ಹರಿಯ ಅಡಿಯಿಂದ
ಋಷಿಯ ತೊಡೆಯಿಂದ
ನುಸುಳಿ ಬಾ

—— ದ. ರಾ. ಬೇಂದ್ರೆ. ' ಗಂಗಾವತರಣ '

ಆಗಾಗ ಮುಂಗೋಪದಲಿ
ತಂದೆ ಜರೆದರೆ ಇವಳು ತಾಯ ಬಳಿ ಸೇರುವಳು
ತಾಯಿ ಬೇಸರದಿಂದ ಮತ್ತೊಮ್ಮೆ ಗದರಿದರೆ
ಕಂಬನಿಯೊಂದನುರುಳಿಸುತ
ಬಂದು ತಂದೆಯ ತೊಡೆಯನೇರುವಳು .

—— ಕೆ . ಎಸ್.ನರಸಿಂಹಸ್ವಾಮಿ .' ಮಲ್ಲಿಗೆಯ ಮಾಲೆ ' (ಪುಟ – ೧೩೭)

ಆ ಹುಡುಗಿ ಪಾಪ
ಆಟದ ಬಯಲಲ್ಲಿ ಬಾಲ್ಯವನ್ನ
ಶಾಲೆಗಳಲ್ಲಿ ಮುಗ್ಧತೆಯನ್ನ
ಸೀರೆಯಂಗಡಿಯಲ್ಲಿ ಕನಸುಗಳನ್ನ
ದಿನಸಿ ಅಂಗಡಿಯಲ್ಲಿ ಕೋಪವನ್ನ
ಮಾರುಕಟ್ಟೆಯಲ್ಲಿ ಸಂಕೋಚವನ್ನ
ದಟ್ಟಕೂದಲ ಎದೆಪೊದೆಯಲ್ಲಿ ಸ್ವತಃ ತನ್ನನ್ನ
ಕಳೆದುಕೊಂಡು ಬಿಟ್ಟಳು .

—— ಎಚ್. ಎಸ್. ವೆಂಕಟೇಶಮೂರ್ತಿ ' ಸೂಜಿಮಲ್ಲಿಗೆ ' (ಪುಟ – ೧೦೦)

## ೩೯. ಪರಿವೃತ್ತಿ.

**ಲಕ್ಷಣ:**– ಸಮ, ನ್ಯೂನ, ಅಧಿಕ ವಸ್ತುಗಳನ್ನು ಸಮ, ಅಧಿಕ, ನ್ಯೂನ ವಸ್ತುಗಳೊಂದಿಗೆ ವಿನಿಮಯ ಮಾಡಿಕೊಳ್ಳುವುದು ಪರಿವೃತ್ತಿ.

( **ಸಮನ್ಯೂನಾಧಿಕಾನಾಂ ಸಮಾಧಿಕ ನ್ಯೂನೈರ್ವಿನಿಮಯಃ ಪರಿವೃತ್ತಿಃ** –ರುಯ್ಯಕ ).

ಪರಿವೃತ್ತಿಯೆಂದರೆ ವಿನಿಮಯ. ವಿನಿಮಯ ವ್ಯವಹಾರದ ವರ್ಣನೆ, ಇಲ್ಲಿ ಸ್ವಾರಸ್ಯದ ಕಾರಣ. ಇದು ಮೂರು ವಿಧ. ಸಮವಸ್ತುಗಳ ವಿನಿಮಯ, ನ್ಯೂನ ವಸ್ತುವನ್ನು ಕೊಟ್ಟು ಅಧಿಕವಾದುದನ್ನು ಪಡೆಯುವುದು ಮತ್ತು ಅಧಿಕ ವಸ್ತುವನ್ನು ಕೊಟ್ಟು ನ್ಯೂನವಾದ ವಸ್ತುವನ್ನು ಪಡೆಯುವುದು. ಒಟ್ಟಾರೆ ಕಲ್ಪಿತವಾದ ವಿನಿಮಯದ ಚಮತ್ಕಾರಪೂರ್ಣವರ್ಣನೆ ಅವಶ್ಯ.

**ಲಲನಾ ಸಂತತಿ ಪಲ್ಲವಾಧರದ ಕೆಂಪಂ ಕಣ್ಮಲರ್ಗಿತ್ತು ಕ**
**ಣ್ಮಲರ್ಬೆಳ್ಪಂ ನಿಜಪಲ್ಲವಾಧರಕೆ ಕೊಟ್ಟಂದೀಗ ಮಾರಾಡಿದರ್ ।**
**ಸಲಿಲ ಕ್ರೀಡೆಯೊಳೆಂಬಿನಂ ವನಿತೆಯರ್ ನೀರಾಟದಿಂದಾದಕ**
**ಣ್ಮಲರ್ಗೆಂಪಿಂ ನಿಜ ಪಲ್ಲವಾಧರದ ಬೆಳ್ಪಿಂನಾಡೆ ಕಣ್ಗೊಪ್ಪಿದರ್ ॥**

— ಜ. ವಿ. ೧೪–೧೧೨.

ಇಲ್ಲಿ ಅಧರದ ಕೆಂಪನ್ನು ಕಣ್ಣಿಗೂ, ಕಣ್ಣಿನ ಬಿಳುಪನ್ನು ಅಧರಕ್ಕೂ, ಕೊಟ್ಟು ಮಾರಾಟ ಮಾಡಿಕೊಂಡರೆಂಬ ವರ್ಣನೆಯಿದೆ. ಇದು ಸಮ ವಸ್ತುಗಳ ವಿನಿಮಯ.

**ಪರಿಪರಿಯ ಕೈದುವಿಂದಂ**
**ಧುರದೊಳ್ ಪಡೆಯುತ್ತೆ ಹತಿಯನುದ್ಧ್ವನಿನಾದಂ ।**
**ಪೊರಪೊಣ್ಮವಿನಂ ಪಗೆಗಳ್**
**ಧರೆಯಂ ನಿನಗಿತ್ತರಲ್ತೆನಿಚ್ಚಂ ಸುಖಿಸಲ್ ॥**

— ಕ. ಕಾ. ಪ್ರ. (ಪುಟ –೪೦೫)

ಇಲ್ಲಿ ಹತಿಯನ್ನು ಪಡೆದು ಧರೆಯನ್ನು ಕೊಟ್ಟ ವಿಷಯ ವರ್ಣಿತವಾಗಿದೆ. ಇದು ನ್ಯೂನಾಧಿಕ ವಿನಿಮಯ. ಅಂತೆಯೇ ' ಪತಿಗಳೆನ್ನನು ಮಾರಿ ಧರ್ಮ ಸ್ಥಿತಿಯ ಕೊಂಡರು' (ಕುಮಾರ. ಸಭಾ ೧೪–೧೦೮) ಎಂಬಲ್ಲಿ ಅಧಿಕ ವಸ್ತುವನ್ನು ಮಾರಿ ನ್ಯೂನ ವಸ್ತುವ ಕೊಂಡರೆಂಬ ಸೂಚನೆಯಿದೆ. ಹೀಗೇ ವಿನಿಮಯ ವ್ಯವಹಾರವಿರುವಲ್ಲೆಲ್ಲಾ ಪರಿವೃತ್ತಿಯನ್ನು ಹೇಳಬಹುದು.

ಅನ್ಯ ಉದಾಹರಣೆಗಳು:

ನೀನು ಈವೆ ನನಗೆ ದವನ
ನಾನು ಈವೆ ನಿನಗೆ ಕವನ

— ದ. ರಾ. ಬೇಂದ್ರೆ ' ಗಂಗಾವತರಣ '

ಕೊಡುವುದೇನು? ಕೊಂಬುದೇನು?
ಒಲವು, ಸ್ನೇಹ, ಪ್ರೇಮ
ಹೊರಗೆ ಬರಿದು ಒಳಗೆ ಬರಿದು
ಇದ್ದವರಿಗೆ ನೇಮ.

— ದ. ರಾ. ಬೇಂದ್ರೆ. ' ಗಂಗಾವತರಣ '.

ನಿನ್ನ ಪ್ರೀತಿಗೆ ಅದರ ರೀತಿಗೆ
ಕಣ್ಣ ಹನಿಗಳೇ ಕಾಣಿಕೆ

— ಕೆ. ಎಸ್. ನರಸಿಂಹಸ್ವಾಮಿ. ' ಮಲ್ಲಿಗೆಯ ಮಾಲೆ ' (ಪುಟ– ೩೫೬)

ಸ್ನಾನ ಮಾಡಿ ಎಂಟು
ದಿನವಾಯಿತು ಪ್ರಿಯೆ
ಬಳಿ ಸುಳಿಯಬೇಡ
ಎಂದ ಪ್ರಿಯಕರನಿಗೆ
ಹೀಗೆಂದಳು ಪ್ರಿಯೆ,
ಸ್ನಾನದ ಚಿಂತೆ ಏಕೆ
ಬಾ ಪ್ರಿಯಾ ನಿನ್ನ
ಮೈ ವಾಸನೆ ನನ್ನದಾಗಲಿ
ನನ್ನ ಮೈ ಪರಿಮಳ
ನಿನಗಂಟಲಿ

— ಎಚ್. ಎಸ್. ಮುಕ್ತಾಯಕ್ಕ ' ನಾನು ಮತ್ತು ಅವನು ' (ಪುಟ –೧೧)

# ೪೦. ಪರಿಸಂಖ್ಯೆ.

ಲಕ್ಷಣ:– ಒಂದೇ ವಸ್ತುವು ಅನೇಕ ಕಡೆಗಳಲ್ಲಿರುವಾಗ ಒಂದೆಡೆಯಲ್ಲಿ ನಿಯಮಿಸುವುದು ಪರಿಸಂಖ್ಯೆ.

( ಏಕಸ್ಯಾನೇಕತ್ರ ಪ್ರಾಪ್ತಾವೇಕತ್ರ ನಿಯಮನಂ ಪರಿಸಂಖ್ಯಾ – ರುಯ್ಯಕ )

ಒಂದು ವಸ್ತುವು ಅನೇಕ ಕಡೆಗಳಲ್ಲಿರುವಾಗ ಕವಿಪ್ರತಿಭೆಯಿಂದ ಕಲ್ಪಿತವಾದ ಒಂದು ಸ್ಥಾನದಲ್ಲಿ ನಿಯಂತ್ರಿಸುವುದು ಪರಿಸಂಖ್ಯೆ. ಸಮಾನ ಲಕ್ಷಣವುಳ್ಳ ಬೇರೆ ಬೇರೆ ವಸ್ತುಗಳಿದ್ದರೂ ಶ್ಲೇಷದಿಂದ ಅಭೇದವನ್ನು ಕಲ್ಪಿಸಿ ಒಂದೆಡೆಗೆ ನಿಯಮಿಸುವುದು ಇಲ್ಲಿಯ ಸ್ವಾರಸ್ಯ.

ಪರಿಸಂಖ್ಯೆಯೆಂಬ ಪದವನ್ನು ಮೀಮಾಂಸಾ ಶಾಸ್ತ್ರದಿಂದ ತೆಗೆದುಕೊಳ್ಳಲಾಗಿದೆ. ಒಂದಕ್ಕಿಂತ ಹೆಚ್ಚು ವಿಕಲ್ಪಗಳಿರುವಾಗ ಒಂದನ್ನು ಆಯ್ದುಕೊಂಡು ಉಳಿದವುಗಳನ್ನು ಬಿಡುವುದಕ್ಕೆ ಅಥವಾ ಹೊರತುಪಡಿಸುವುದಕ್ಕೆ ಪರಿಸಂಖ್ಯಾ ವಿಧಿಯೆಂದು ಹೆಸರು. ಉದಾ:– 'ಪಂಚಪಂಚನಖಾ ಭಕ್ಷ್ಯಾಃ' ಐದು ಉಗುರುಗಳುಳ್ಳ ಐದು ಪ್ರಾಣಿಗಳನ್ನು ತಿನ್ನಬೇಕು. ಇಲ್ಲಿ ಎರಡು ವಿಕಲ್ಪಗಳು: ಅಪಂಚನಖಭಕ್ಷಣ ಮತ್ತು ಪಂಚನಖಭಕ್ಷಣ. ಮಾಂಸ ಭಕ್ಷಣವನ್ನು ಮಾಡುವವರಾದರೂ ಪಂಚನಖಗಳಲ್ಲದವುಗಳನ್ನು ತಿನ್ನಬಾರದೆಂಬುದಕ್ಕೆ ಇಲ್ಲಿ ಪ್ರಾಶಸ್ತ್ಯ. ಮಾಂಸ ಭಕ್ಷಣವನ್ನು ಮಾಡದಿರುವವರಿಗೆ ಈ ವಿಧಿಯು ಅನ್ವಯಿಸುವುದಿಲ್ಲ. ತಿನ್ನುವವರಿಗೆ ನಿಯಂತ್ರಣ ಹೇರುವುದಕ್ಕಾಗಿ ಇದೆ.

ಈ ಪರಿಸಂಖ್ಯಾ ವಿಧಿಯನ್ನೇ ಹೋಲುವ ಅಲಂಕಾರ ಇದು. ಇದರಲ್ಲಿ ಪ್ರಶ್ನಪೂರ್ವಕ ಮತ್ತು ಅಪ್ರಶ್ನಪೂರ್ವಕವೆಂಬ ಎರಡು ಪ್ರಕಾರಗಳಿವೆ. ಪ್ರಶ್ನ ಪೂರ್ವಕವೆಂದರೆ ಪ್ರಶ್ನೋತ್ತರ ರೂಪದಲ್ಲಿರುತ್ತದೆ. ಅಪ್ರಶ್ನಪೂರ್ವಕದಲ್ಲಿ ಕೇವಲ ಕಥನವಿರುತ್ತದೆ. ಸಾಮಾನ್ಯವಾಗಿ ಶ್ಲೇಷದ ನೆರವನ್ನು ಪಡೆದು ಪರಿಸಂಖ್ಯೆಯು ರಂಜಕವಾಗುತ್ತದೆ.

ಉದಾ :–

**ಮೇದರೊಳಲ್ಲದೆ ವಂಶ**
**ಚ್ಛೇದಂ ಗಾರುಡದೊಳಲ್ಲದ ಹಿತತ್ವಂ ಪೂ।**
**ಗೇದಗೆಯ ಪೊದರೊಳಲ್ಲದಿ**
**ಳಾದುರ್ಧರ ಕಂಟಕತ್ವ ಮಿಲ್ಲಾ ನಾಡೊಳ್ ॥**

ಇಲ್ಲಿ ವಂಶಚ್ಛೇದವು ಮೇದರಲ್ಲಲ್ಲದೇ ಬೇರೆಡೆ ಇರಲಿಲ್ಲ. ಗಾರುಡದೊಳಲ್ಲದೆ ಅಹಿತತ್ವವಿರಲಿಲ್ಲ. ಕೇದಗೆಯ ಪೊದರೊಳಲ್ಲದೆ ಇಳಾದುರ್ಧರ ಕಂಟಕತ್ವವು ಆ ನಾಡಿನಲ್ಲಿರಲಿಲ್ಲ ವೆಂದು ಕವಿ ಹೇಳುತ್ತಾನೆ. 'ವಂಶಚ್ಛೇದಕ್ಕೆ' ಸಂತತಿನಾಶ, ಬಿದಿರನ್ನು ತುಂಡಿಸುವುದೆಂಬ ಅರ್ಥಗಳಿವೆ. ಇದರಿಂದ ಬಿದಿರನ್ನು ತುಂಡಿಸುವುದೆಂಬ ವಂಶಚ್ಛೇದವು ಮೇದರಲ್ಲಿ ಇತ್ತೇ

ಹೊರತೂ ಸಂತತಿ ನಾಶವೆಂಬ ವಂಶಚ್ಛೇದವಿರಲಿಲ್ಲ ಎಂದು ಅರ್ಥವಾಗುತ್ತದೆ. ಹಾಗೆಯೇ ಇತರ ಕಡೆಗಳಲ್ಲಿಯೂ ಊಹಿಸಿಕೊಳ್ಳಬೇಕು.

ಅನ್ಯ ಉದಾಹರಣೆಗಳು:

ಹಕ್ಕಿ ಹುಲಿ ಜೇನಾಗುವಾಸೆಗೆ
ಕಾಡು ಹುಟ್ಟಿದೆ ನೆಲದಲಿ
ಹುಚ್ಚು ಹೊಳೆ ಮೀನಾಗುವಾಸೆಗೆ
ನೀರು ಹುಟ್ಟಿದೆ ನೆಲದಲಿ

— ಕೆ. ಎಸ್. ನರಸಿಂಹಸ್ವಾಮಿ.' ಮಲ್ಲಿಗೆಯ ಮಾಲೆ ' (ಪುಟ-೩೫)

ಮಾತುಗಳಿಗಿಲ್ಲ ಕೊನೆ; ಇರಲಿ ಮೌನ !
ಬೇಟವಲ್ಲದೆ ಬೇರೆ ಬೇಡ ಜಾನ;
ಒಲವಲ್ಲದೇ ಬೇರೆ ಬೇಡ ತ್ರಾಣ
ಒಡಲಲ್ಲದಿನ್ನೇಕೆ ಬೇರೆ ತಾಣ

— ಗೋಪಾಲಕೃಷ್ಣ ಅಡಿಗ 'ಸಮಗ್ರಕಾವ್ಯ ' (ಪುಟ-೪೦)

ದುರ್ದೈವವಾವುದೋ ? ದುರ್ಮದರ ಹಿಡಿಗೂಳಿ
ಗೊಡ್ಡಿ ಕೈಗಳ ದಿನವ ದಬ್ಬುತಿಹುದು;
ಬರ್ದಿಲದ ಸೊಗವೆಂದರೇನು ? ಗುಣಿಗಳ ಗುಣವ
ಮೆಚ್ಚಿ ಹರಸುವರೊಡನೆ ಬಾಳುತಿಹುದು

— ಬಿ. ಎಚ್. ಶ್ರೀಧರ.

ಆಕಾಶ ಅಂದರೆ ಏನು?
ಏನೂ ಒಳಗೊಳ್ಳದ ಶೂನ್ಯವಲ್ಲ; ಅದು
ಮಾನವನ ಆಸೆ ಆಕಾಂಕ್ಷೆಗಳ ವಾಸಸ್ಥಳ.

— ಚೆನ್ನವೀರ ಕಣವಿ.' ಸಮಗ್ರಕಾವ್ಯ ' (ಪುಟ-೪೦೭).

# ೪೧. ಸಮುಚ್ಚಯ.

ಲಕ್ಷಣ :– ೧. ಗುಣ ಕ್ರಿಯೆಗಳು ಏಕಕಾಲದಲ್ಲಿರುವುದು ಸಮುಚ್ಚಯ.

( ಗುಣಕ್ರಿಯಾಯೌಗ ಪದ್ಯಂ ಸಮುಚ್ಚಯ : — ರುಯ್ಯಕ )

೨. ಕಾರ್ಯಸಿದ್ಧಿಗೆ ಒಂದು ಕಾರಣವಿರುವಾಗ ಇನ್ನೊಂದು ಕಾರಣವೂ ಅದೇ ಕಾರ್ಯಸಿದ್ಧಿಗೆ ಹವಣಿಸುವುದು. ( ಎರಡನೆಯ ) ಸಮುಚ್ಚಯ.

( ಏಕಸ್ಯ ಸಿದ್ಧಿ ಹೇತುತ್ವೇಽನ್ಯಸ್ಯ ತತ್ಕರತ್ವಂ ಚ )

ಸಮುಚ್ಚಯವೆಂದರೆ ಸಮೂಹ ಅಥವಾ ಒಂದೆಡೆಗೆ ಸೇರುವುದೆಂದರ್ಥ. ಸಮುಚ್ಚಯದ ಮೊದಲನೆಯ ಪ್ರಕಾರದಲ್ಲಿ ಗುಣ – ಕ್ರಿಯೆಗಳು ಏಕಕಾಲದಲ್ಲಿದ್ದುವೆಂದು ವರ್ಣಿಸಲಾಗುತ್ತದೆ. ಇಲ್ಲಿ ಕೇವಲ ಗುಣಗಳು, ಕೇವಲ ಕ್ರಿಯೆಗಳು ಅಥವಾ ಗುಣ – ಕ್ರಿಯೆಗಳೆರಡೂ ಏಕಕಾಲದಲ್ಲಿ ಇದ್ದವೆಂದು ಹೇಳಬಹುದು . ಇಲ್ಲಿ ಏಕಕಾಲಿಕವಾದ ಪದಾರ್ಥಗಳ ವರ್ಣನೆ ಮುಖ್ಯ. ಏಕಕಾಲಿಕವಾದ ಪದಾರ್ಥ ವರ್ಣನೆಯನ್ನು ಒಂದೇ ವಸ್ತುವಿಗೆ ಸಂಬಂಧಿಸಿದಾಗಲೂ ಮಾಡಬಹುದು ಅಥವಾ ಹಲವಾರು ವಸ್ತುಗಳಿಗೆ ಸಂಬಂಧಿಸಿದಂತೆಯೂ ಹೇಳಬಹುದು . ಒಂದೇ ವಸ್ತುವಿಗೆ ಸಂಬಂಧಿಸಿದಂತೆ ಅನೇಕ ಕ್ರಿಯೆಗಳು ಏಕಕಾಲದಲ್ಲಿ ನಡೆಯುವುದು ಕಷ್ಟ . ಆದ್ದರಿಂದ ಏಕಕಾಲಿಕವೆಂಬ ಪದವು ಸಾಧಾರಣವಾದ ಅರ್ಥದಲ್ಲಿದೆ. ಅದಕ್ಕಿಂತ ಹೆಚ್ಚಾಗಿ ಅವು ಕ್ರಮ ಪ್ರಕಾರವಾಗಿ ನಡೆಯುವುದಿಲ್ಲವೆಂಬುದನ್ನು ಹೇಳಲಿಕ್ಕಾಗಿ ಇದೆ.

ಉದಾ :–

**ಎಲರಿಂದೆಳ್ಚೆತ್ತು ಲೀಲಾವತಿ ನಿಜಪತಿಯಂ ಮಂಚದೊಳ್ ಕಾಣದಾಗಳ್**
**ಚಲೆಯಾದಳ್ ಮೂರ್ಛೆವೋದಳ್ ಮರೆದಳೊರಗಿದಳ್ ಕಂದಿದಳ್ ಕುಂದಿದಳ್**
**ಕೋ।ಟಲೆಗೊಂಡಳ್ ಸಾವುಗಂಡಳ್ ಕಳವಳಿಸಿದಳಾಸತ್ತಳತ್ತಳ್ ಬೆಮರ್ತಳ್**
**ನೆಲೆಯಿಂದಂ ಬಿಳ್ದಳೆಳ್ದಳ್ ವಿರಹದುರಿಯ ಸಂಭ್ರಾಂತಿಯಿಂದಂ ॥**

— ಲೀಲಾ.

ಇಲ್ಲಿ ಒಬ್ಬಳೇ ಲೀಲಾವತಿಗೆ ಸಂಬಂಧಿಸಿದಂತೆ ಹಲವಾರು ಕ್ರಿಯೆಗಳ ವರ್ಣನೆಯಿದೆ . ಇದು ಕಾರಕದೀಪಕವನ್ನು ಹೋಲುತ್ತದೆ. ಕಾರಕದೀಪಕದಲ್ಲಿ ಹಲವಾರು ಕ್ರಿಯೆಗಳು ಕ್ರಮವಾಗಿ ನಡೆಯುತ್ತವೆಯಾದರೆ ಇಲ್ಲಿ ಹಾಗಲ್ಲ . ಅನೇಕ ಕ್ರಿಯೆಗಳು ನಡೆಯುತ್ತವೆ ಎಂಬುದಿಷ್ಟೇ ಮುಖ್ಯವೆಂದು ಭೇದವನ್ನು ಹೇಳಲಾಗಿದೆ. ಈ ಏಕಕಾಲಿಕವಾದ ಕ್ರಿಯೆಗಳು ಒಂದೇ ವಸ್ತುವನ್ನು ಆಶ್ರಯಿಸದೆ ಬೇರೆ ಬೇರೆ ಕಡೆಯಲ್ಲಿ ನಡೆದಂತೆ ವರ್ಣಿತವಾಗಿದ್ದರೂ ಸಮುಚ್ಚಯವೇ ಆಗುತ್ತದೆ.

ಉದಾ :–

ನನೆಯಂಬಂ ಘುದವೇರೆ ಕೈರವಕುಳಂನೀರೇರೆ ಕಾಮಾರ್ಥಿಯ
ಪ್ಪನ ಜೀವಂ ನಡುನೆತ್ತಿಗೇರೆ ಖರದಂಡಶ್ರೀಗೆ ಕರ್ಪೇರೆ ಕಾ।
ಮಿನಿಯರ್ ಸಂತಸದುಯ್ಯಲೇರೆ ನೆಲೆಯಿಂದಂಬೋಧಿಮಿಕ್ಕೇರೆ ಭೋಂ
ಕನೆ ಬಂದೇರಿದನಲ್ತೆವಾಸವದಿಶಾ ಶೈಲೇಂದ್ರಮಂ ಚಂದ್ರಮಂ ॥

—— ಸೂಕ್ತಿಸುಧಾ. ೮–೨೧೭.

ಇಲ್ಲಿ ಚಂದ್ರೋದಯದ ವರ್ಣನೆಯಿದೆ. ಇಲ್ಲಿನ ಹಲವಾರು ಕ್ರಿಯೆಗಳು ಏಕಕಾಲದಲ್ಲಿ ನಡೆದಿವೆಯಾದರೂ ಅವುಗಳ ಆಶ್ರಯವು ಬೇರೆ ಬೇರೆಯಾಗಿ, ಇದು ಅನೇಕಾಶ್ರಿತ ಕ್ರಿಯಾ ಯೌಗ ಪದ್ಯ ಸಮುಚ್ಚಯ.

ಅದೇ ರೀತಿಯಲ್ಲಿ ಗುಣಗಳ ಯೌಗ ಪದ್ಯವೂ ಸಮುಚ್ಚಯವೇ. ಇದೂ ಕೂಡಾ ಏಕಾಶ್ರಿತ, ಅನೇಕಾಶ್ರಿತ ಎಂಬ ಭೇದಗಳನ್ನು ಹೊಂದಬಹುದು. ಒಂದೇ ವಸ್ತುವಿನಲ್ಲಿರುವ ಗುಣಗಳನ್ನು ವರ್ಣಿಸಿದಾಗಲೂ ಅನೇಕ ವಸ್ತುಗಳಲ್ಲಿರುವುದನ್ನು ವರ್ಣಿಸಿದಾಗಲೂ ಸಮುಚ್ಚಯವಾಗುತ್ತದೆ.

ಉದಾ :–

ಧರಣೀ ಕಾಂತೆಗೆ ಸಂತಸಂ ರಿಪುಮಹೀಕಾಂತರ್ಗೆ ಸಂತಾಪಮಿಂ
ದಿರೆಗಾನಂದರಸಂ ಬುಧ ಪ್ರಕರದಾರಿದ್ರ್ಯಕ್ಕೆ ವಿಚ್ಛೇದಮೀ।
ಶ್ವರ ಭಕ್ತರ್ಗತಿ ಸಮ್ಮದಂ ನೆಗಳೆ ಸತ್ಯೇಂದ್ರ ಚೋಳನಾ।
ದರದಿಂದಾತ್ಮಭವಂಗೆ ಪಟ್ಟಮನಂದೋತ್ಸಾಹದಿಂ ಕಟ್ಟಿದಂ ॥

—— ರಾ. ವಿ. ೪–೧೧೮.

ಇಲ್ಲಿ ಸಂತಸ, ಸಂತಾಪ, ಆನಂದವೇ ಮುಂತಾದ ಗುಣಗಳು ಭಿನ್ನಭಿನ್ನ ಪದಾರ್ಥಗಳಲ್ಲಿ ಏಕಕಾಲದಲ್ಲಿ ಉದಯಿಸುತ್ತವೆ. ಇದು ಅನೇಕಾಶ್ರಿತಗುಣ ಯೌಗ ಪದ್ಯ ಸಮುಚ್ಚಯ.

ಇಲ್ಲಿ ಕೊಟ್ಟಿರುವ ಉದಾಹರಣೆಗಳಲ್ಲಿ ಗುಣ ಕ್ರಿಯೆಗಳು ಬಹಳಷ್ಟಿರುವುದನ್ನು
ಕಾಣಬಹುದಾದರೂ ಹೀಗೇ ಇರಬೇಕೆಂದೇನೂ ಇಲ್ಲ. ಒಂದಕ್ಕಿಂತ ಹೆಚ್ಚು ಗುಣ ಅಥವಾ
ಕ್ರಿಯೆಗಳು ಏಕಕಾಲದಲ್ಲಿ ಇದ್ದವೆಂಬ ವರ್ಣನೆಯು ಸಮುಚ್ಚಯವೇ ಆಗುತ್ತದೆಂಬುದನ್ನು
ಗಮನಿಸಬೇಕು. ಎರಡಕ್ಕಿಂತ ಹೆಚ್ಚು ಗುಣ–ಕ್ರಿಯೆಗಳನ್ನು ವರ್ಣಿಸುವುದರಿಂದ ಮತ್ತಿಷ್ಟು
ಸೊಗಸೆಂದು ತಿಳಿದು ಕವಿಗಳು ಹಾಗೆ ಮಾಡುತ್ತಾರಷ್ಟೇ!.

೨. ಎರಡನೆಯ ಪ್ರಕಾರದ್ದು ಕಾರಣಸಮುಚ್ಚಯ. ಒಂದು ಕ್ರಿಯೆಯನ್ನು ಸಾಧಿಸಲು
ಒಂದು ಕಾರಣವು ಸಾಕಾಗಿದ್ದರೂ ಮತ್ತಿಷ್ಟು ಕಾರಣಗಳು ಅಥವಾ ಕಾರಣವು ಬಂದು ಸೇರುವುದು
ಇಲ್ಲಿನ ವೈಶಿಷ್ಟ್ಯ. ಇದನ್ನು ' **ಖಲೇಕಪೋತನ್ಯಾಯ** 'ವೆನ್ನುತ್ತಾರೆ. ಅಂಗಳದಲ್ಲಿ ಹರಡಿದ
ಕಾಳುಗಳನ್ನು ಹೆಕ್ಕಲು ಪಾರಿವಾಳಗಳು ಸ್ಪರ್ಧಿಸುವಂತೆ ಇಲ್ಲಿ ಕಾರಣಗಳ ಸ್ಪರ್ಧೆ ನಡೆಯುತ್ತದೆ.

ಉದಾ:—

ಪಾಡುವ ತುಂಬಿ ತೀಡುವೆಲರಾಡುವ ಸೋಗೆ ಕೊಳಂಗಳೊಳ್ ತುಳುಂ
ಕಾಡುವ ಬಾಳೆ ಕೋಡುವ ಪುಳಿರ್ಸಲೆ ಕೂಡುವ ಕೊಂಚೆ ಮುಚ್ಚಿಮು ।
ದ್ದಾಡುವ ಜಕ್ಕವಕ್ಕಿ ನಲಿದಾಡುವ ಕನ್ನಡವಕ್ಕಿ ಮುದ್ದುಮಾ
ತಾಡುವ ಜಾಣವಕ್ಕಿ ನಡೆನೋಡು ವರ್ಗಳ್ತಿಯನುಂಟು ಮಾಡುಗುಂ ॥

ಇಲ್ಲಿ ಅಳ್ತಿಯನ್ನುಂಟು ಮಾಡುವ ಕಾರ್ಯವಲ್ಲಿ ಹಾಡುವ ತುಂಬಿ, ಬೀಸುವ ಗಾಳಿ, ಆಡುವ ನವಿಲು ಮೊದಲಾದ ಅನೇಕ ಪದಾರ್ಥಗಳು ಸೇರಿವೆ. ಇವೆಲ್ಲ ಸತ್ಕಾರಣಗಳು. ಅಸತ್ಕಾರಣಗಳಿದ್ದರೂ ಸಮುಚ್ಚಯವೇ.

ಪಿತೃಗಳುಪಾರ್ಜಿಸಿಟ್ಟ ಸಿರಿ ಜವ್ವನದೇಳ್ಗೆ ಪೆರಂಗಿದಿಲ್ಲೆನಿ
ಪ್ಪತಿಶಯ ರೂಪುಶಕ್ತಿಗಳಿವಲ್ಲವೇ ಹಾನಿಯ ಬಳ್ಳಿವಳ್ಳಿನಿ ।
ಶ್ಚಿತ ಮಿವನೊಂದುನೊಂದನೇ ವಿಚಾರಿಪೊಡುಳ್ಳ ವಿನೀತಿಗೆಲ್ಲಮಾ
ಯತನಮೆನಿಪ್ಪುದೋರ್ವನೊಳಿವೆಲ್ಲ ಮಿರಲ್ ಬಳಿಕೇನನೆಂಬುದೋ ॥

—— ಕಾದಂ. ೩–೬೮.

ಇಲ್ಲಿ ಹಾನಿಯೆಂಬ ಕಾರ್ಯವನ್ನು ಹುಟ್ಟಿಸಲು ಪಿತುರುಪಾರ್ಜಿತ ಸಿರಿಯೇ ಮೊದಲಾದವುಗಳಲ್ಲಿ ಒಂದೊಂದೇ ಸಾಕಾಗಿದ್ದರೂ ಅನೇಕ ಕಾರಣಗಳು ಬಂದು ಸೇರಿವೆ. ಇದು ಅಸತ್ಕಾರಣಗಳ ಸಮುಚ್ಚಯವೇ ಆಗಿದೆ. ಇಲ್ಲಿಯೂ ಹಿಂದಿನಂತೆ ಎರಡು ಕಾರಣಗಳನ್ನು ಹೇಳಿದರೆ ಸಾಕಾಗುತ್ತದೆ. ಅದನ್ನು ಸಮುಚ್ಚಯವೆಂದೇ ಹೇಳಲಾಗುತ್ತದೆ. ಕಾರಣ ಬಾಹುಳ್ಯವು ಚಮತ್ಕಾರವನ್ನು ಹೆಚ್ಚಿಸುತ್ತವೆ.

ಅನ್ಯ ಉದಾಹರಣೆಗಳು:

ಸಂಜೆ ಕೊನೆಗೆಂಪಾರೆ, ತಾರೆಗಳು ಬಿರಿಯೆ
ಯಾಮಿನಿಗೆ ಮುತ್ತಿಡುತ ಚಂದಿರನು ಮೆರೆಯೆ
ಕಣಿವೆಯೊಳು ತೊರೆ ಬನಕೆ ಜೋಗುಳವನುಲಿಯೆ
ಗಾನವೆನ್ನೀ ಭುವಿಯನಾವರಿಪುದಾಗ.

—— ಪು. ತಿ. ನ. 'ಹಣತೆ'.

ಹಿರಿಯರಿರುವರೆಂದು ನಾಚಿ ನುಡಿಯಲಾರದವಳ ಕೊರಗು
ತೆರೆದ ತುಟಿಯ ನಡುಕ ಇನಿಸು ಬೆವೆತು ಕೆಂಪಗಾದ ಕೆನ್ನೆ
ನೀರ ತೆರೆಯ ಹಿಂದೆ ಕಣ್ಣು ಬೆವೆತು ಬೀರುತಿರುವ ಬಯಕೆ ನೋಟ
ಊರಿಗಿದನು ನೋಡಿ ನೋಡಿ ಹೊರಡಲಾರೆ ನಿಲ್ಲಲಾರೆ

—— ತೀ. ನಂ. ಶ್ರೀ. 'ಒಲುಮೆ'

ಮನವ ದೇಹವನಲೆವ ಚಿಮ್ಮುಗೆಗಳೊಂದಾಗಿ
ಘನಸಹಜದಂಗನೆಯ ಕೆರಳಿಸಿದವು
ಸವಿಯ ವೀಣಾಗಾನ, ಕನಿಕರದ ಪ್ರೇಮಕಥೆ
ಕವಿದ ಕಂಪಿನ ಸಿರಿಯ ಹೊಳೆವ ಸಂಜೆ

— ಬಿ. ಎಂ. ಶ್ರೀ. 'ಇಂಗ್ಲೀಷ್ ಗೀತೆಗಳು'.

ಬಿಳುಪು ಕೆಂಪುಗಳ ಮಳು ಬೆಳಸವಳ ಮೈ ಸೊಬಗು ;
ಮೆಲುಪು ತಂಪುಗಳವಳಿ ನಲಿವವಳ ಮೈ ಬೆಡಗು ;
ಚೆಲುವಿಕೆಯ ನರುಗಂಪನಿಡಿಕಿರಿದ ಮೈ ಮುಗುಳು ;
ಒಲವು ನಲಿವಿನ ದಡವನೆರಡನಪ್ಪುವ ಹೊನಲು ;
ಸಲುಗೆ ಸಲ್ಲಾಪಗಳ ಕಿರುದೆರೆಯ ಹಿರಿಗಡಲು ;

— ಗೋಪಾಲಕೃಷ್ಣ ಅಡಿಗ 'ಸಮಗ್ರ ಕವನಗಳು'

ಗಾಳಿಯ ಹಾರಾಟ ಏರಾಟ ಚೀರಾಟ
ಭೋರಾಟ ಕುಣಿದಾಟ ತುಳಿದಾಟವು
ಎಳೆದಾಟ ತೂರಾಟ ಎಲೆಗಳ ಕಳೆವಾಟ
ಸುಟ್ಟುರೆಯ ಗಾಳಿಯ ಹುಡಿಯಾಟವು

— ದ. ರಾ. ಬೇಂದ್ರೆ. 'ಸಖೀಗೀತ'.

# ೪೨. ಮೀಲಿತ.

ಲಕ್ಷಣ:– ಒಂದು ವಸ್ತುವು ತನಗೆ ಸದೃಶ್ಯವಾದ ಪದಾರ್ಥದಲ್ಲಿ ಸೇರಿಹೋಗಿ ಬೇರೆಯಾಗಿ ಕಾಣದಿದ್ದರೆ ಮೀಲಿತ.

( **ಮೀಲಿತಂ ಯದಿ ಸಾದೃಶ್ಯಾತ್ ಭೇದ ಏವ ನ ಲಕ್ಷ್ಯತೇ** —ಕುವಲಯಾನಂದ. )

ಮೀಲಿತವೆಂದರೆ ಮಿಲನ ಹೊಂದುವುದು ಅಥವಾ ಸೇರಿಕೊಳ್ಳುವುದು. ಇದು ಲೋಕನ್ಯಾಯವನ್ನು ಅವಲಂಬಿಸಿದ ಅಲಂಕಾರ. ತೊಗರಿಬೇಳೆಯಲ್ಲಿ ಚೆನ್ನಂಗಿ ಬೇಳೆ ಸೇರಿಹೋಗಿದ್ದರೆ ತಿಳಿಯಲಾರದಲ್ಲವೇ? ಕಲಬೆರಕೆಯ ಮೂಲಸಿದ್ಧಾಂತವೇ ಇದು. ಅದನ್ನೇ ಕವಿಗಳು ಚಾತುರ್ಯಪೂರ್ಣವಾಗಿ ಬಳಸಿಕೊಂಡಾಗ ಮೀಲಿತವು ಸಂಭವಿಸುತ್ತದೆ. ಆಲಂಕಾರಿಕರ ಪ್ರಕಾರ ಇಲ್ಲಿ ಸೇರಿರುವ ಎರಡು ವಸ್ತುಗಳಲ್ಲಿ ಒಂದು ಉತ್ಕೃಷ್ಟ ಗುಣವುಳ್ಳದ್ದೂ ಇನ್ನೊಂದು ನಿಕೃಷ್ಟ ಗುಣವುಳ್ಳದ್ದೂ ಆಗಿರುತ್ತದೆ. ಉತ್ಕೃಷ್ಟ ಗುಣವುಳ್ಳ ವಸ್ತುವು ಇನ್ನೊಂದನ್ನು ಮರೆಸುತ್ತದೆ. ಇವು ಸಹಜವಾದವುಗಳಾದರೂ ಇರಬಹುದು; ಆಗಂತುಕವಾದವುಗಳಾದರೂ ಇರಬಹುದು.

ಉದಾ :–

**ಕಾಲಿಂದಿಯ ಸಿತ ಜಲದೊಳ**
**ಗೋಲಾಡುವ ಕೃಷ್ಣನಂ ಸವರ್ಣತೆಯಿಂ ಗೋ।**
**ಪಾಲ ಕುಮಾರರ್ ನೋಡಿಯು**
**ಮಾಲೋಲಮನಸ್ಕರರಿಯದಾಕುಲ ಮುತ್ತರ್ ॥**

ಇಲ್ಲಿ ಯಮುನಾ ನದಿ ಹಾಗೂ ಕೃಷ್ಣನ ಮೈ ಬಣ್ಣಗಳಲ್ಲಿ ಸಾಮ್ಯವಿರುವುದರಿಂದ ಗೋಪಾಲಕರಿಗೆ ಕೃಷ್ಣನ ಇರವು ಗೊತ್ತಾಗಲಿಲ್ಲವೆನ್ನುತ್ತಾನೆ ಕವಿ.

ಈ ಮೀಲಿತದಂತೆಯೇ ಸಾಮಾನ್ಯವೆಂಬ ಅಲಂಕಾರವನ್ನು ಹೇಳುತ್ತಾರೆ. ಪ್ರಸ್ತುತವು ಅಪ್ರಸ್ತುತದಲ್ಲಿ ಸಮಾನ ಗುಣಗಳ ಕಾರಣದಿಂದ ಐಕ್ಯವನ್ನು ಪಡೆದಿದ್ದರೆ ಅದು ಸಾಮಾನ್ಯವೆನಿಸುತ್ತದೆ. ಮೀಲಿತದಲ್ಲಿ ಒಂದರ ಗುಣವು ಉತ್ಕೃಷ್ಟವಾಗಿದ್ದರೆ ಸಾಮಾನ್ಯದಲ್ಲಿ ಅವು ಸರ್ವಥಾ ಸಮಾನವಾಗಿರುತ್ತವೆಂದು ಹೇಳುತ್ತಾರೆ. ಅಂತೆಯೇ ಎರಡು ವಸ್ತುಗಳು ಪರಸ್ಪರ ಸೇರಿಕೊಂಡಾಗ ಯಾವುದಾದರೂ ನಿಮಿತ್ತದಿಂದ ಭೇದವು ತಿಳಿದು ಬಂದರೆ ಉನ್ಮೀಲಿತವೆಂದು ಹೇಳುತ್ತಾರೆ. ಇವು ಶಾಸ್ತ್ರೀಯ ದೃಷ್ಟಿಯಿಂದ ಕಲ್ಪಿಸಿದ ಭೇದಗಳು.

**ಅನ್ಯ ಉದಾಹರಣೆಗಳು**:

**ವಿಕಸಿತಮಾದ ಕಾಂಚನ ಸರೋರುಹಷಂಡದ ಪರ್ಬುಮಂ ತದಂ**
**ತಿಕದ ಸುವರ್ಣ ವರ್ಣದ ಕಣಿಶಾಳಿಯ ಶಾಳಿಯದೊಂದು ಪರ್ಬುಮಂ।**

ಶುಕತತಿ ನೋಡಿ ನೋಡಿ ನೆರೆ ನಿಟ್ಟಿಸಲಾರದೆ ಮಂಜುಳಾರವಂ
ಪ್ರಕಟಿಸೆ ಪರ್ಬುಗೊಂಡು ಸುಳಿದಾಡುವುದಲ್ಲಿಯ ಕೆಯ್ವೊಲಂಗಳೊಳ್ ॥

— ಜ. ಪಿ. ೨ – ೮.

ಬೆಳ್ಳನೆ ಉಡೆಯವರು ಮೊಲ್ಲೆಯ ಮುಡಿಯುವರು
ಮೈಯೆಲ್ಲ ಚಂದನದವರು
ಮುತ್ತಿನ ಸರದವರು ಸರಿದರು ಜನಗಳು
ಅರಿಯರು ಬೆಳದಿಂಗಳಿನೊಳು

— ಎಸ್. ವಿ. ಪರಮೇಶ್ವರ ಭಟ್ಟ 'ಇಂದ್ರಚಾಪ' (ಪು–೧೨೭)

ಡಿಸೆಂಬರ್ ಚಳಿಯಲ್ಲಿ,
ಅಕಸ್ಮಾತ್ತಾಗಿ,
ಅವಳ ಮೈಗೆ ಮೈ ತಾಕಿದಾಗ,
ಒಳಗೊಳಗೇ ನಡುಕ ; ನಡುಕ; ನವಿರು,
ಚಳಿಯಿಂದಲೋ
ಪಕ್ಕದಲ್ಲೇ ನಿಂತಿದ್ದ
ಅವಳ ಗಂಡನ ಕೆಂಗಣ್ಣಿನ ನೋಟದಿಂದಲೋ ? ಗೊತ್ತಾಗಲಿಲ್ಲ.

## ೪೩. ತದ್ಗುಣ.

ಲಕ್ಷಣ:– ತನ್ನ ಗುಣವನ್ನು ಬಿಟ್ಟುಕೊಟ್ಟು ಮತ್ತೊಂದರ ಗುಣವನ್ನು ಪಡೆದರೆ ತದ್ಗುಣ.

( ತದ್ಗುಣಃ ಸ್ವಗುಣತ್ಯಾಗಾದನ್ಯದೀಯ ಗುಣಗ್ರಹಃ –ಕುವಲಯಾನಂದ )

ಎರಡು ವಸ್ತುಗಳು ಸಮೀಪದಲ್ಲಿರುವಾಗ ನ್ಯೂನ ಗುಣವುಳ್ಳ ವಸ್ತುವು ತನ್ನ ಗುಣವನ್ನು ತ್ಯಜಿಸಿ ಮತ್ತೊಂದರ ಗುಣವನ್ನು ಸ್ವೀಕರಿಸಿದರೆ ಅದು ತದ್ಗುಣ. ಮೀಲಿತದಲ್ಲಿ ಸಮಾನ ವಸ್ತುಗಳಿರುತ್ತವೆ. ಇಲ್ಲಿ ಅಂಥದ್ದೇನೂ ಇಲ್ಲ. ಪ್ರಭಾವಶಾಲಿಯಾದ ವಸ್ತುವಿದ್ದರೆ ಆಯಿತು. ಗುಣವೆನ್ನುವುದು ಔಪಚಾರಿಕ. ವಸ್ತುಭೇದವು ಸ್ಫುಟವಾಗಿದ್ದರೂ ಅನ್ಯವಸ್ತುವಿನ ಗುಣವನ್ನು ಸ್ವೀಕರಿಸಿತೆಂದು ವರ್ಣಿಸುವಲ್ಲಿ ಈ ಅಲಂಕಾರವು ಸಂಭವಿಸುತ್ತದೆ.

ಉದಾ :–

**ತಾರಾಚಲ ಘನಗುಹೆಯೊಳ**
**ಗೈರಾವತಮಿರ್ಪತೆರದೆ ಶಶಿಮಣಿ ಸೌಧಾ ।**
**ಗಾರದೆ ತದ್ರುಚಿ ಧವಳಾ**
**ಕಾರಾನ್ವಿತ ಭದ್ರಗಜಮದೇನೊಪ್ಪಿದುದೋ ॥**

— ರಾ. ವಿ. ೨–೧೩೪.

ಇಲ್ಲಿ ಚಂದ್ರಕಾಂತ ಮಣಿಯ ಸೌಧದಲ್ಲಿ ಅದರ ಕಾಂತಿಯಿಂದ ಬೆಳ್ಳಗಾದ ಆನೆಯಿತ್ತೆಂದು ಕವಿ ವರ್ಣಿಸುತ್ತಾನೆ. ಆನೆಯು ತನ್ನ ಗುಣವನ್ನು ತ್ಯಜಿಸಿ ಚಂದ್ರಕಾಂತ ಮಣಿಯ ಕಾಂತಿಯೆಂಬ ಗುಣವನ್ನು ಪಡೆದಿದೆ.

ತದ್ಗುಣದಂತೆಯೇ ಅನುಗುಣವೆಂಬ ಅಲಂಕಾರವೂ ಇದೆ. ಮೊದಲೇ ಇದ್ದ ಗುಣಕ್ಕೆ ಅನ್ಯ ವಸ್ತುಸಂಬಂಧದಿಂದ ಉತ್ಕರ್ಷವುಂಟಾದಲ್ಲಿ ಅನುಗುಣವಾಗುತ್ತದೆ. ಮಂಗನಿಗೆ ಹೆಂಡ ಕುಡಿಸಿದಂತೆ. ಹಾಗೆಯೇ ಹತ್ತಿರದಲ್ಲಿದ್ದ ವಸ್ತುವಿನ ಗುಣವನ್ನು ಸ್ವೀಕರಿಸದೆ ತನ್ನ ಗುಣವನ್ನೇ ಉಳಿಸಿಕೊಂಡರೆ ಅತದ್ಗುಣವಾಗುತ್ತದೆ. ಅವುಗಳನ್ನೂ ಗಮನಿಸಬಹುದು.

**ಅನ್ಯ ಉದಾಹರಣೆಗಳು:**

**ಕಾಡಿಗೆಯನೆಚ್ಚ ಕನ್ನಡಿ**
**ನೋಡುವ ಮುಗ್ಧಾಕ್ಷಿ ಕಣ್ಣ ಬೆಳತಿಗೆವೆಳಗಂ ।**
**ಕಾಡಿಗೆ ಮರೆವುಗೆ ಕಾಡಿಗೆ**
**ಗೂಡದಿದೇಕೆಂದು ಕೆಳದಿಯಂ ಬೆಸಗೊಂಡಳ್ ॥**

ಮಾವಿನ ಬೇವಿನ ಬೇರುಗಳೊಂದಾಗಿ
ನೆಲದೊಳು ಹೆಣೆದುಕೊಂಡಾಗ
ಮಾವಿನ ಸಿಹಿ ಹೋಗಿ ಬೇವಿನ ಕಹಿಯಾಗಿ
ಮಾರ್ಪಾಟುಗೊಳುವುದು ಬೇಗ



— ಎಸ್.ವಿ. ಪರಮೇಶ್ವರ ಭಟ್. 'ಇಂದ್ರಚಾಪ' (ಪುಟ-೧೦೩)

ನೆನಪಿದೆಯಾ ಪ್ರಿಯಾ , ಅಂದು ಸಂಜೆ
ನಿನ್ನ ಕಣ್ಣಲಿ ಕಂಡೆ ಸಂಜೆಗೆಂಪು
ಈ ಕೆಂಪು ನನ್ನ ಮಯ್ಯಲ್ಲಿ ನಿಶೆ ತುಂಬಿ
ಕೆನ್ನೆ ಕೆಂಪಾಗಿ ಸಂಜೆ ಸರಿಯಿತು ನಾಚಿ ಹಿಂದೆ
ಕೊರಳ ಹಾರವಾಗಿ ನಕ್ಷತ್ರಗಳು
ಏರಿ ಬಂದವು ಮುಂದೆ ಮುಂದೆ.

— ಎಚ್. ಎಸ್. ಮುಕ್ತಾಯಕ್ಕ. 'ನಾನು ಮತ್ತು ಅವನು' (ಪುಟ - ೯)

ಇವರು ಬಿಳಿಟೋಪಿ ಧರಿಸುವುದೇಕೆ ಅಣ್ಣ?
ಕರ್ರಗಲ್ಲವೇ ತಲೆಯ ಕೂದಲಿನ ಬಣ್ಣ?
ಬಿಳಿಯಿಂದ ಕಪ್ಪೆಲ್ಲವೂ ಮುಚ್ಚಿಹೋಗಿ
ತೋಳಗುವುದು ಅಮವಾಸ್ಯೆ ಬೆಳ್ದಿಂಗಳಾಗಿ.

— ದಿನಕರ ದೇಸಾಯಿ 'ದಿನಕರನ ಚೌಪದಿ' (ಪುಟ - ೨೩೨).

## ೪೪. ಸ್ವಭಾವೋಕ್ತಿ.

ಲಕ್ಷಣ :– ವಸ್ತುಗಳ ಜಾತಿ , ಗುಣ, ಕ್ರಿಯಾದಿಗಳನ್ನು ಇದ್ದದ್ದನ್ನು ಇದ್ದ ಹಾಗೆ ವರ್ಣಿಸುವುದು ಸ್ವಭಾವೋಕ್ತಿ.

( ಸ್ವಭಾವೋಕ್ತಿಸ್ವಭಾವಸ್ಯ ಜಾತ್ಯಾದಿಸ್ಥಸ್ಯ ವರ್ಣನಮ್ —ಕುವಲಯಾನಂದ )

ಸ್ವಭಾವೋಕ್ತಿಯೆಂದರೆ ಸ್ವಭಾವದ ಕಥನ . ಇಲ್ಲಿ ಸ್ವಭಾವವೆಂದರೆ ವಸ್ತುಸ್ಥಿತಿ . ವಸ್ತು ಹೇಗಿರುವುದೋ ಹಾಗೆಯೇ ವರ್ಣನೆಯನ್ನು ಮಾಡುವುದು ಸ್ವಭಾವೋಕ್ತಿಯೆನಿಸುತ್ತದೆ . ಈ ಪ್ರಪಂಚದಲ್ಲಿರುವ ಯಾವುದೇ ವಸ್ತುವಿನ ಯಥಾವತ್ತಾದ ವರ್ಣನೆಯು ಸ್ವಭಾವೋಕ್ತಿಯ ಕಕ್ಷೆಯೊಳಗೆ ಬರುತ್ತದೆ . ಅತಿಶಯೋಕ್ತಿಗೆ ವಿರುದ್ಧವಾದುದು ಇದು. ಇಲ್ಲಿ ಕವಿಯು ವಸ್ತುವಿನ ಚಿತ್ರಣವನ್ನು ಯಥಾವತ್ತಾಗಿ ನಿರೂಪಿಸಿ ವಿರಮಿಸುತ್ತಾನೆ.

ಉದಾ :–

**ತಳಿರ ತಲೆಗಟ್ಟು ದಂತದ**
**ಬಳೆ ಕತ್ತುರಿಬೊಟ್ಟು ಮುತ್ತಿನೇಕಾವಳಿ ಬಿಲ್ ।**
**ಪೊಳೆವಂಬು ಬೆನ್ನನಿಡುಬ**
**ತ್ತಳಿಕೆ ವಿರಾಜಿಸೆ ಪುಳಿಂದ ನಂದೊಳವೊಕ್ಕಂ ॥**

ಇದು ಬೇಡನೊಬ್ಬನ ಯಥಾವತ್ತಾದ ವರ್ಣನೆ. ' ತಳಿರಿನ ತಲೆಗಟ್ಟು , ದಂತದ ಬಳೆ, ಕಸ್ತೂರಿಯ ಬೊಟ್ಟು , ಮುತ್ತಿನ ಏಕಾವಳಿ ಸರ, ಬಿಲ್ಲು , ಹೊಳೆವ ಅಂಬು, ಬೆನ್ನಿನಲ್ಲಿರುವ ಉದ್ದನೆಯ ಬತ್ತಳಿಕೆಗಳಿಂದ ವಿರಾಜಿಸುತ್ತಿರುವ ಬೇಡನು ಕಾಡಿನೊಳಗೆ ಹೊಕ್ಕನು ' ಎಂದು ಕವಿಯು ಹೇಳುತ್ತಾನೆ. ಇಲ್ಲಿ ಅತಿಶಯೋಕ್ತಿಯಿಂದ ರಂಜಿಸುವ ಪ್ರಯತ್ನವೇನೂ ಇಲ್ಲ . ಇದನ್ನು ಅಲಂಕಾರವೆನ್ನಬಹುದೇ ? ಈ ಪ್ರಶ್ನೆ ಅನೇಕ ಆಲಂಕಾರಿಕರನ್ನು ಕಾಡಿಸಿದೆ .

ಸ್ವಭಾವೋಕ್ತಿಯನ್ನು ಅಲಂಕಾರವೆಂದು ಭಾಮಹನ ಕಾಲಕ್ಕಾಗಲೇ ಸ್ವೀಕರಿಸಿಯಾಗಿತ್ತು, ಆದರೆ ಭಾಮಹನಿಗೆ ಇದನ್ನು ಅಲಂಕಾರವೆಂದು ಕರೆಯಲು ಮನಸ್ಸಿಲ್ಲ. ಕೆಲವರು ಸ್ವಭಾವೋಕ್ತಿಯನ್ನು ಅಲಂಕಾರವೆಂದು ಹೇಳುತ್ತಾರೆ ಎಂದು ಒಲ್ಲದ ಮನಸ್ಸಿನಿಂದಲೇ ಅದನ್ನು ಪ್ರಸ್ತಾಪಿಸುತ್ತಾನೆ. ಆದರೆ ಅವನ ಸಮಕಾಲೀನನಾದ ದಂಡಿಗೆ ಸ್ವಭಾವೋಕ್ತಿಯ ಮೇಲೆ ತುಂಬ ಆದರ. ಅದನ್ನು ' ಆದ್ಯ ಅಲಂಕಾರ ' ವೆಂದು ಕರೆದು ಮನ್ನಣೆಯ ಮಣೆಯನ್ನಿಟ್ಟಿದ್ದಾನೆ. ಮುಂದೆ ಉದ್ಭಟ, ಭೋಜ, ರುದ್ರಟ, ಮಮ್ಮಟ, ರುಯ್ಯಕ, ವಿಶ್ವನಾಥ ,ವಿದ್ಯಾನಾಥ , – ಮುಂತಾದವರೆಲ್ಲ ಸ್ವಭಾವೋಕ್ತಿಯನ್ನು ಅಲಂಕಾರವೆಂದೇ ಪರಿಗಣಿಸಿ ಅದರ ಸ್ವರೂಪವನ್ನು ವರ್ಣಿಸಿದ್ದಾರೆ .

ಸ್ವಭಾವೋಕ್ತಿಯು ಅಲಂಕಾರವಲ್ಲವೆಂಬ ಭಾಮಹನ ವಾದವನ್ನು ವಿಸ್ತರಿಸಿ ಅದನ್ನು

ಬಲವಾಗಿ ಪ್ರತಿಪಾದಿಸಿದವನು ಕುಂತಕ. ಸ್ವಭಾವೋಕ್ತಿಯನ್ನು ಅಲಂಕಾರವೆಂದು ಹೇಳಿದರೆ ಅಲಂಕಾರ್ಯವಾವುದು? ಸ್ವಭಾವವು ವಸ್ತುವಿಗೆ ಸಹಜವಾದುದು. ಅದಿಲ್ಲದ ವಸ್ತುವೇ ಇಲ್ಲ. ಶರೀರವೇ ಅಲಂಕಾರವಾದರೆ ಅಲಂಕರಿಸುವುದೇನನ್ನು ? ತನ್ನ ಹೆಗಲ ಮೇಲೆ ತಾನೇ ಕೂಡಲು ಸಾಧ್ಯವಿಲ್ಲವಷ್ಟೇ? ಯಾವುದೇ ವಸ್ತುವಿನ ಸ್ವಭಾವಕಥನವನ್ನು ಅಲಂಕಾರ್ಯವೆನ್ನಬೇಕೇ ಹೊರತು ಅಲಂಕಾರವೆಂದಲ್ಲ. ಸ್ವಭಾವಕಥನವನ್ನು ಕಾವ್ಯವೆಂದು ಮನ್ನಿಸುವುದಾದರೆ ಜನಸಾಮಾನ್ಯರ ಕಥನಗಳೂ ಕೂಡ ಕಾವ್ಯವೆನಿಸಿಕೊಳ್ಳಬೇಕಾಗುತ್ತದೆ, ಎಂದು ಮುಂತಾಗಿ ವಾದಿಸುತ್ತಾನೆ. ಕುಂತಕನು ಸ್ವಭಾವೋಕ್ತಿಯನ್ನು ಅಲಂಕಾರವೆಂದು ಸ್ವೀಕರಿಸಲು ಸಿದ್ಧನಿಲ್ಲ. ಆದರೆ ಅದರ ಸೌಂದರ್ಯದ ಬಗೆಗೆ ಅವನು ಕುರುಡಾಗಿರಲಿಲ್ಲ . ಅವನ ವಕ್ರೋಕ್ತಿಸಿದ್ಧಾಂತದ ಪ್ರಕಾರ ಸುಂದರವಾದ ಯಥಾವತ್ತಾದ ವರ್ಣನೆಯು ' ವಸ್ತು ವಕ್ರತೆಯಲ್ಲಿ ' ಸೇರುತ್ತದೆ. ಅಲಂಕಾರ್ಯವೇ ಸೊಗಸಾಗಿರುವುದನ್ನು ಅವನು ' ವಸ್ತುವಕ್ರತಾ ' ಎಂದು ಹೆಸರಿಸುತ್ತಾನೆ. ಹಾಗಾಗಿ ಸ್ವಭಾವೋಕ್ತಿಗೆ ಕಾವ್ಯದಲ್ಲಿ ಅವನು ಸ್ಥಾನವನ್ನೇನೂ ನಿರಾಕರಿಸಲಿಲ್ಲ. ಅಲಂಕಾರತ್ವವನ್ನು ವಿರೋಧಿಸಿದನಷ್ಟೇ!

ಸ್ವಭಾವೋಕ್ತಿಯ ಪರವಾಗಿ ನಿಂತವರಲ್ಲಿ ಮಹಿಮಭಟ್ಟ ಅಗ್ರಗಣ್ಯ. ವಕ್ರೋಕ್ತಿ ಸಿದ್ಧಾಂತವನ್ನು ಒಪ್ಪದಿದ್ದವರಿಗೆ ಸ್ವಭಾವೋಕ್ತಿಯ ಅಲಂಕಾರತ್ವ ಸ್ಥಾಪನೆ ಅಗತ್ಯವಾಗಿತ್ತು. ಆ ಕೆಲಸವನ್ನು ಅವನು ಮಾಡಿದ. ಕೇವಲ ವಸ್ತು ಸ್ವಭಾವ ವರ್ಣನೆಯು ಸ್ವಭಾವೋಕ್ತಿಯಲ್ಲವೆಂದ ಮಹಿಮಭಟ್ಟ ವಸ್ತುಗಳಿಗೆ ಎರಡು ರೂಪವಿರುತ್ತದೆಯೆನ್ನುತ್ತಾನೆ. ( **ಉಚ್ಯತೇ ವಸ್ತುನಸ್ತಾವದ್ ದ್ವೈರೂಪ್ಯಮಿಹವಿದ್ಯತೇ** ) ಒಂದು ಸಾಮಾನ್ಯ ರೂಪವಾದರೆ ಇನ್ನೊಂದು ವಿಶಿಷ್ಟ ರೂಪ. ಸಾಮಾನ್ಯ ರೂಪವನ್ನು ಎಲ್ಲರೂ ಕಾಣಬಲ್ಲರು . ಆದರೆ ವಿಶಿಷ್ಟ ರೂಪವನ್ನು ಪ್ರತಿಭಾಶಾಲಿಯಾದ ಕವಿಯು ಮಾತ್ರ ಗ್ರಹಿಸಬಲ್ಲ. ಕವಿಪ್ರತಿಭೆಯ ಸ್ಪರ್ಶದಿಂದ ಸಾಮಾನ್ಯವಾದ ಅರ್ಥವೂ ಚಮತ್ಕಾರಪೂರ್ಣವಾಗಬಲ್ಲುದು . ಸಾಮಾನ್ಯವಾದ ಅರ್ಥವು ಅಲಂಕಾರ್ಯವೇ ಹೊರತು ಅಲಂಕಾರವಲ್ಲ . ವಿಶಿಷ್ಟ ಸ್ವಭಾವ ವರ್ಣನೆಯು ಸ್ವಭಾವೋಕ್ತಿಯೆಂಬ ಅಲಂಕಾರವಾಗುತ್ತದೆ . ಅಲ್ಲಿ ಕವಿಯು ವಸ್ತುವಿನ ವಿಶಿಷ್ಟ ರೂಪದ ಸೌಂದರ್ಯವನ್ನು ಸೂಕ್ಷ್ಮ ದೃಷ್ಟಿಯಿಂದ ಅವಲೋಕಿಸಿ ತೆರೆದು ತೋರುತ್ತಾನೆ . ಪ್ರತಿಭೆಯೆಂಬುದು ಕವಿಗಿರುವ ಮೂರನೆಯ ಕಣ್ಣು . ಆ ಮೂರನೆಯ ಕಣ್ಣು ಕಂಡ ಚಿತ್ರವನ್ನು ನಮ್ಮೆದುರಿಗಿಡುವಾಗ ಅದರ ಸಾಮಾನ್ಯ ಸ್ವರೂಪದ ಆವರಣವು ಸರಿದುಹೋಗಿ ಅಪೂರ್ವ ಸೌಂದರ್ಯದ ಸಾಕ್ಷಾತ್ಕಾರವಾಗುತ್ತದೆ ಎಂದು ಮುಂತಾಗಿ ವಾದಿಸಿ ಸ್ವಭಾವೋಕ್ತಿಯು ಅಲಂಕಾರವೆಂಬುದನ್ನು ಸಿದ್ಧಪಡಿಸಿದ್ದಾನೆ .

ಮುಂದಿನ ಆಲಂಕಾರಿಕರು ಮಹಿಮಭಟ್ಟನನ್ನು ಬೆಂಬಲಿಸಿದರು . ಸ್ವಭಾವೋಕ್ತಿಯು ಕೇವಲ ವಸ್ತುವರ್ಣನೆಯಲ್ಲ. ಅಲಂಕಾರ ಸರ್ವಸ್ವದ ವ್ಯಾಖ್ಯಾನಕಾರನಾದ ನಮಿಸಾಧುವು ಒಂದು ಶ್ಲೋಕವನ್ನು ಉದಾಹರಿಸುತ್ತಾನೆ . ಅದು ಹೀಗಿದೆ –

**ಗೋರಪತ್ಯಂ ಬಲೀವರ್ದೋ ಘಾಸಾತ್ತಿ ಮುಖೇನ್ಯಸಃ।**
**ಮೂತ್ರಂ ಮುಂಚತಿ ಶಿಶ್ನೇನ ಅಪಾನೇನತು ಗೋಮಯಮ್ ॥**

" ಆಕಳಿನ ಕರು ಹೋರಿ ಅದು ಬಾಯಿಂದ ಹುಲ್ಲನ್ನು ತಿನ್ನುತ್ತದೆ . ಶಿಶ್ನದಿಂದ ಮೂತ್ರವನ್ನು ವಿಸರ್ಜಿಸುತ್ತದೆ . ಹಿಂಭಾಗದಿಂದ ಸಗಣಿಯನ್ನು ಹಾಕುತ್ತದೆ . " ಇಲ್ಲಿ ವಸ್ತು ವರ್ಣನೆಯು ಯಥಾವತ್ತಾಗಿದೆ . ಆದರೆ ಇದು ಸ್ವಭಾವೋಕ್ತಿಯಲ್ಲ. ಇಲ್ಲಿ ಕವಿಪ್ರತಿಭೆಯ ಸ್ಪರ್ಶವಿಲ್ಲ. ವಸ್ತುವಿನ ಸಾಮಾನ್ಯರೂಪದ ವರ್ಣನೆ ಮಾತ್ರವಿದೆ . ಹಾಗಾಗಿ ಇಂಥವುಗಳನ್ನೆಲ್ಲಾ ಸ್ವಭಾವೋಕ್ತಿಯೆನ್ನಬಾರದೆಂದು ನಮಿಸಾಧು ಎಚ್ಚರಿಸಿದ್ದಾನೆ.

ಸ್ವಭಾವೋಕ್ತಿಯೆಂದರೆ ಶಬ್ದಚಿತ್ರ . ವಸ್ತುಗಳನ್ನು ಸೂಕ್ಷ್ಮದೃಷ್ಟಿಯಿಂದ ಅವಲೋಕಿಸಿದ ಅಥವಾ ತನ್ನ ಪ್ರತಿಭೆಯಲ್ಲಿ ಕಂಡ ದೃಶ್ಯವನ್ನು ಕವಿ ನಿರೂಪಿಸುತ್ತಾನೆ. ಕವಿಯು ನಾವು ನೀವು ಎಲ್ಲರೂ ಕಂಡ ವಸ್ತುವನ್ನೇ ಬಣ್ಣಿಸುತ್ತಿದ್ದರೂ ಅದು ಅವನದೇ ನಿರ್ಮಾಣವೋ ಎನ್ನುವಂತಿರುತ್ತದೆ. ಅಲ್ಲಿ ಅತಿಶಯೋಕ್ತಿಯ ಅಥವಾ ಕೃತ್ರಿಮತೆಯ ಸೋಂಕೂ ಇರಕೂಡದು ; ಇರುವುದಿಲ್ಲ . ನಾವು ನೋಡಿದ ವಸ್ತುವೇ ಆಗಿದ್ದರೂ ಅದು ಅಪೂರ್ವವೆನಿಸುವಂತೆ ಮಾಡುವುದಕ್ಕೆ ಕವಿಪ್ರತಿಭೆಯ ಮಾಯಾದಂಡ ದುಡಿಯುತ್ತದೆ. ಅದು ಸ್ವಭಾವೋಕ್ತಿಯ ಹಿರಿಮೆ.

**ಅನ್ಯ ಉದಾಹರಣೆಗಳು ಸ:**

ಪಿಡಿದ ಸಂಬಳಿಗೋಲು ಕಾರೊಡಲು ಕೆಂಗಣ್ಣು
ಕುಡಿದು ಕೊಬ್ಬಿದ ಬಸುರ ದಡದಡಿಸೆ ತರಹರಿಸು
ವಡಿಯ ಕೆದರಿದ ತಲೆಯ ನಡಸಿ ಸುತ್ತಿದ ಮುಪ್ಪುರಿಯ ಭಾರಿ ಕಡ್ಡಣಿಗೆಯ ।
ಬಿಡದೆ ಡರ್ರನೆ ತೇಗಿ ನೆರವಿಯಂ ಬಯ್ವ ಬಿರು
ನುಡಿಯ ಕಲಿವೀರ ಬಾಹುಕ ಬರುತ್ತಂ ಮಾರು
ವೊಡೆ ಕೊಂಡು ಹೊಂಗೊಡುವೆ ನಾನೆಂದು ತನ್ನ ಹಡಪಿಗನಿಂದ ಕೇಳಿಸಿದನು ॥

— ಹರಿಶ್ಚಂದ್ರ. ೧೧–೧೭

ನೆಳಲು ಗಂಡವ್ವಳಿಸುವುದು ಸುಂ
ಡಿಲನು ತೂಗಾಡುವುದು ಹೋರಿದು
ಬಳಲುವುದು ಮೊಗನೆಗಹಿ ಭೀಮನ ದನಿಯನಾಲಿಪುದು ।
ಅಳಿಯ ಮುತ್ತಿಗೆಗಳನು ಬೀಸದೆ
ನೆಲಕೆ ಕಿವಿಯನು ಜೋಲು ಬಿಡುವುದು
ಬಲು ಕಣೆಯ ಹಿಡಿಹಿಂಗೆ ಲಾಗಿಸುತಿರ್ದುದಾ ದಂತಿ ॥

— ಕುಮಾರವ್ಯಾಸ. ದ್ರೋಣ. ೩ – ೩೭.

ಕಬ್ಬಿಣ ಕೈ ಕಡಗ, ಕುಣಿಕೋಲು ಕೂದಲು
ಕಂಬಳಿ ಹೊದ್ದಾಂವ ಬಂದಾನ
ಗುಣು ಗುಣುಗುಟ್ಟುತ ಕಡಗವ ಕುಟ್ಟುತ
ಕರಡಿಯನಾಡಿಸುತ ನಿಂದಾನ

— ದ . ರಾ . ಬೇಂದ್ರೆ . ' ಗರಿ '

ಕಾದಿರುವಳು ಶಬರಿ
ರಾಮ ಬರುವನೆಂದು
ತನ್ನ ಪೂಜೆಗೊಳುವನೆಂದು .
ವನವನವ ಸುತ್ತಿ ಸುಳಿದು
ತರುತರುವನಲೆದು ತಿರಿದು
ಬಿರಿವೂಗಳನಾಯ್ದು ತಂದು
ತನಿವಣ್ಗಳಾಯ್ದು ತಂದು

— ಪಿ. ಸೀ. ' ಸ್ನೇಹವಿಶ್ವಾಸ ' (ಪುಟ –೧೧೮)

ಮುಗಿಲ ತೆಳುಗಪ್ಪು ಮೈ , ಮೈ ಕಟ್ಟಿನೊಪ್ಪು
ಅಗಲ ಮುಖ, ಮುಂಗುರುಳ ಮಿರುಮಿರುಗು ಕಪ್ಪು
ಒಡವೆಯೊಂದಿಲ್ಲ; ಉಡಿಗೆಯ ಡಂಭವಿಲ್ಲ;
ನಿಡುಜಡೆಯ ಮೇಲ್ಮುಡಿದ ಹೂವೆ ತೊಡವಲ್ಲ
ಕಣ್ಣ ಹೊಳಹೊಳಪು ಹುಸಿಮುಸಿ ನಗೆಯ ಸುಳಿವು
ನುಣ್ಣ ನಿಡುತೋಳ್ ಬೀಸು, ನೀಳೊಡಲ ನಿಲುವು

— ತಿ . ವಿ . ಜ .' ಕೇತಕೀವನ '

ಮೊದಲ ಸಲ ತಿರುಗಾಡಲು ಹೊರಟಾಗ
ನನ್ನಾಕೆ ತೋಳಿಲ್ಲದ ರವಿಕೆಯುಟ್ಟು
ಭಾರೀ ನೆರಿ ಸೀರೆಯನ್ನು ಸೊಂಟದ ಕೆಳಗೆ ನಾಜೂಕಾಗಿ ಕಟ್ಟಿ
ಕೊರಳಿಗೆ ಚಿನ್ನದ ಸರ
ಕಾಲಿಗೆ ಹೈ ಹೀಲ್ಡ್ ಕೆರ
ಕಿವಿಗೆ ಬೆರಳಿಗೆ ಉಂಗುರ ತೊಟ್ಟು
ಲಿಪ್‌ಸ್ಟಿಕ್ ಪೌಡರು ರೂಜ ಬಳಿದು , ದೃಷ್ಟಿ ಬೊಟ್ಟಿಟ್ಟು
ಹೆರಳ ಗೋಪುರದಲ್ಲಿ ಕೂದಲು ಬಿಗಿದು
ಎಡಬೈತಲೆ ತೆಗೆದು ,
ಇವೆಲ್ಲವನ್ನೂ ಮೀರಿಸುವ ಮುಗುಳ್ನಗೆ ತೀಡಿ ,
ಹೊಸಿಲ ಇನ್ನೇನು ದಾಟಬೇಕು .

— ಕೆ. ಎಸ್. ನಿಸಾರಅಹಮ್ಮದ್ .' ಸಂಜೆ ಐದರ ಮಳೆ '

## ೪೫. ವ್ಯಾಜಸ್ತುತಿ.

ಲಕ್ಷಣ:– ಸ್ತುತಿ ಮತ್ತು ನಿಂದೆಗಳಿಂದ ನಿಂದೆ ಮತ್ತು ಸ್ತುತಿಗಳು ಗಮ್ಯವಾಗಿದ್ದರೆ ವ್ಯಾಜಸ್ತುತಿ.

(.ಸ್ತುತಿ ನಿಂದಾಭ್ಯಾಂ ನಿಂದಾಸ್ತುತ್ಯೋರ್ಗಮ್ಯತ್ವೇ ವ್ಯಾಜಸ್ತುತಿಃ —ರುಯ್ಯಕ)

ವ್ಯಾಜಸ್ತುತಿಯೆಂಬ ಸಮಸ್ತಪದವನ್ನು ಎರಡು ರೀತಿಯಲ್ಲಿ ವಿಗ್ರಹಿಸಲಾಗುತ್ತದೆ.

(೧) ವ್ಯಾಜರೂಪಾಸ್ತುತಿಃ – ಸ್ತುತಿಯಾಗಿ ತೋರುವ ನಿಂದೆ.

(೨) ವ್ಯಾಜೇನ(ನಿಂದಾಮುಖೇನ) ಸ್ತುತಿ : –ನಿಂದೆಯ ಮೂಲಕವಾಗಿ ಸ್ತುತಿ. ಸಾಮಾನ್ಯವಾಗಿ ಸ್ತುತಿಯೆಂಬ ಪದಕ್ಕೆ ಪ್ರಶಂಸೆ ಅಥವಾ ಹೊಗಳಿಕೆ ಎಂಬ ಅರ್ಥವಿದೆಯಾದರೂ ಇಲ್ಲಿ ಅದನ್ನು ಕಥನವೆಂಬ ಅರ್ಥದಲ್ಲಿ ಬಳಸಲಾಗಿದೆ. ಸ್ತುತಿ ಅಥವಾ ನಿಂದೆಗಳು ಇಲ್ಲಿ ಪ್ರಧಾನ. ಸ್ತುತಿಯು ವಾಚ್ಯವಾಗಿದ್ದರೆ ನಿಂದೆಯು ಗಮ್ಯವಾಗಿರುತ್ತದೆ. ನಿಂದೆಯು ವಾಚ್ಯವಾಗಿದ್ದರೆ ಸ್ತುತಿಯು ಗಮ್ಯವಾಗಿರುತ್ತದೆ. ಮುಸುಕಿನಲ್ಲಿ ಗುದ್ದು ಕೊಡುವ ರೀತಿ ಇದು.

ವ್ಯಾಜಸ್ತುತಿಯನ್ನು ಅಪ್ರಸ್ತುತ ಪ್ರಶಂಸೆಯಿಂದ ಬೇರ್ಪಡಿಸುವುದಕ್ಕಾಗಿ ನಿಂದೆ ಮತ್ತು ಸ್ತುತಿಗಳಿದ್ದಾಗ ಮಾತ್ರ ವ್ಯಾಜಸ್ತುತಿಯನ್ನು ಹೇಳಬೇಕಾಗುತ್ತದೆಯೆಂದು ಹೇಳುತ್ತಾರೆ. ಇಲ್ಲಿ ವ್ಯಂಗ್ಯಾರ್ಥವಿದೆಯಾದರೂ ವಾಚ್ಯಾರ್ಥದ ಚಮತ್ಕಾರಕ್ಕೆ ಅದು ಪೋಷಕವಾಗಿರುವುದರಿಂದ ಇದು ಧ್ವನಿಕಾವ್ಯವಾಗುವುದಿಲ್ಲ.

ಉದಾ :–

ಎರೆದವರ್ಗಮನುಗ್ರಹಿಸುವ
ಪರಮ ಕವೀಶ್ವರರ್ಗಮೀವ ದಾನಿಗಳೇಂ ಬಂ।
ದೆರೆಯದ ನೆಲಕಂ ಪೀಡಿಸು
ವರಸಿಂಗಂ ಕುಡುವ ಕೃಪಣನಗ್ಗಳ ಮತ್ತೇ ॥

—— ನೇಮಿ. ೪ –೧೧೪.

ಇಲ್ಲಿ ಬೇಡಿದವರಿಗೆ ಕೊಡುವ, ಕವಿಗಳಿಗೆ ದಾನವೀವ ದಾನಿಗಳಿಗಿಂತಲೂ ಬೇಡದ ಮಣ್ಣಿಗೂ, ಪೀಡಿಸುವ ಅರಸನಿಗೂ ಕೊಡುವ ಕೃಪಣನೇ ಶ್ರೇಷ್ಠನಲ್ಲವೇ ? ಎಂದು ಕವಿಯು ಕೃಪಣನನ್ನು ಸ್ತುತಿಸುತ್ತಾನೆ. ಕೃಪಣನ ಧನವು ಮಣ್ಣಿಗೂ ಅರಸನಿಗೂ ಸೇರುವುದೇ ಹೊರತು ಪ್ರಯೋಜನಕ್ಕೆಬಾರದೆಂಬ ನಿಂದೆ ಗಮ್ಯವಾಗಿದೆ.

ಬಿರಿದು ವಿಷಮಾಸ್ತ್ರಹತಿಯಿಂ
ಪೊರಳ್ವ ಮೈಮರೆದ ರಾತಿನೃಪರಂ ನೆಲದೊಳ್ ।

ನೆರಪಿಯ ನಾಣ್ಚದೆ ನೆಲವೆ
ಣ್ಣರಸಂ ತಾನಾದನಭಿನವಂ ಪ್ರಭುಚರಿತಂ ||

— ಲೀಲಾ. ೧-೧೦೪.

ಇಲ್ಲಿ ಅರಸನು ನಾಚಿಕೆಯಿಲ್ಲದೇ ನೆಲವೆಣ್ಣಿನ ಪತಿಯಾದನೆಂದು ನಿಂದೆಯಿದೆ. ಸ್ವೈರಿನ್ಯಪರೊಂದಿಗೆ ರಮಿಸುತ್ತಿದ್ದವಳನ್ನು ಪಡೆಯುವುದು ನಿಂದ್ಯ. ಆದರೆ ಸ್ತುತಿಯು ಗಮ್ಯ. ರಾಜನ ಪರಾಕ್ರಮದ ವರ್ಣನೆಯು ಇಲ್ಲಿದೆ.

ಅನ್ಯ ಉದಾಹರಣೆಗಳು:

ಅಂಗುಳೊಳಡಸಿದ ವಿಷಮುಂ
ಭಂಗುರತರ ವಿಷಮು ದೃಷ್ಟಿಯುಂ ವ್ಯಾಳಸಮಾ।
ಸಂಗಮುಪ್ಪುಮರ್ದಿರೆ ಮದನಶ
ರಂಗೆಣೆಯೆನಿಪುದರಿನೆಮಗೆ ಬಳರಭಿವಂದ್ಯರ್ ||

— ಕಾವ್ಯಾ. ೭೬೩.

ಛೀ ನಾಚಿಕೆಗೇಡಿ!
ಎಲೆ ಸಂದು
ಸೂರು
ಬಾಗಿಲಕಂಡಿ
ಎಲ್ಲೆಂದರಲ್ಲಿ ಹಣಿಕೆ ಹಾಕುವುದೇನು?

— ಶಾ. ಬಾಲುರಾವ್. 'ಸೂರ್ಯ ಇವನೊಬ್ಬನೇ' (೨೧)

ನಾಯಿಗೂ, ಕಾಗೆಗೂ ಹದ್ದಿಗೂ ಈವರೆಗು
ಕೊಲುವ ನರ ಕೊಂದುದನು ತಿನ್ನಲೊಲ್ಲನಿದೇಕೆ?
ಎಂಬ ಸಂಶಯ ಹರಿಯಲಿಲ್ಲ 'ನರ ನಿಃಸ್ವಾರ್ಥಿ';
ಕೊಲ್ಲುವನು ನಮಗಾಗಿ! ಎಂದು ತಂತಮ್ಮೊಳಗೆ
ನಿರ್ಧರಿಸಿ ಗರಿಹೊಡೆದು ಬಾಲವಲ್ಲಾಡಿಸುತ
ಕೊರಲೆತ್ತಿ ಹಾಡಿದವು ನರವಿಜಯ ಗೀತವನು

— ಗೋಪಾಲಕೃಷ್ಣ ಅಡಿಗ 'ಸಮಗ್ರ ಕವನಗಳು' (ಪುಟ – ೧೩೬)

ನಿನ್ನ ಅಡಿಗೆಯ ಪರಾಕ್ರಮ ಬಹಳ ಹಿರಿದು
ನಾಲಿಗೆಯ ಸೊಕ್ಕು ಹಾಕಿದೆ ನೀನು ಮುರಿದು.

— ದಿನಕರ ದೇಸಾಯಿ.

## ೪೬. ಸಂಸೃಷ್ಟಿ – ಸಂಕರ.

ಈಗಾಗಲೇ ಗಮನಿಸಿದಂತೆ ಕಾವ್ಯವೊಂದು ಸಂಕೀರ್ಣ ಪ್ರಕ್ರಿಯೆ. ಮಗುವು ಹುಟ್ಟಿದ ಮೇಲೆ ಆಭರಣಗಳನ್ನು ತೊಡಿಸಿದಂತೆ ಜನ್ಮತಾಳಿದ ಕಾವ್ಯಕ್ಕೆ ಅಲಂಕಾರಗಳನ್ನು ಜೋಡಿಸುವುದಿಲ್ಲ. ಕವಿಗಳ ರಚನೆಗಳಲ್ಲಿ ಕಂಡುಬರುವ ಅಲಂಕಾರಗಳನ್ನು ಗುರುತಿಸುವಾಗ ಸಮಸ್ಯೆಯಾಗುತ್ತದೆ. ಅಲಂಕಾರಗಳ ಲಕ್ಷಣವನ್ನು ಸಮನ್ವಯ ಮಾಡುವಾಗ ಕಷ್ಟವಾಗುತ್ತದೆ. ಇದನ್ನು ಕೂಲಂಕಷವಾಗಿ ವಿಚಾರಿಸಿದ ಆಲಂಕಾರಿಕರು ನಮ್ಮೆದುರು ಎರಡು ಕಲ್ಪನೆಗಳನ್ನಿಟ್ಟಿದ್ದಾರೆ – ಅವು ಸಂಸೃಷ್ಟಿ ಮತ್ತು ಸಂಕರ.

ಒಂದು ಪದ್ಯದಲ್ಲಿ ಅನೇಕ ಅಲಂಕಾರಗಳು ಸುಲಭವಾಗಿ ಬೇರ್ಪಡಿಸುವಂತಿದ್ದರೆ ಅದಕ್ಕೆ ಸಂಸೃಷ್ಟಿಯೆಂದು ಹೆಸರು. ಇದನ್ನು ವಿವರಿಸಲು **ತಿಲ – ತಂಡುಲ**(ಎಳ್ಳು – ಅಕ್ಕಿ) ನ್ಯಾಯವನ್ನು ಹೇಳಲಾಗಿದೆ. ( **ತಿಲ – ತಂಡುಲ ನ್ಯಾಯೇನ ಮಿಶ್ರತ್ವೇ ಸಂಸೃಷ್ಟಿಃ** – ರುಯ್ಯಕ)

ಉದಾ :– ಗೋಪಾಲಕೃಷ್ಣ ಅಡಿಗರ ಈ ಪದ್ಯವನ್ನು ನೋಡಿ :–

**ತಡಿಯಲ್ಲಿ ಸಾಲುಸಾಲಾಗಿ ನಿಂತಿವೆ ತೆಂಗು**
**ಬುವಿಯ ಹಸುರನು ಬಾನಿಗೊಸಗೆ ಹಿಡಿದು**
**ತಡಿ ಕಡಲುಗಳ ಪ್ರೇಮ ಜೀವನದ ಸಂಕೇತ**
**ಬುವಿ ಬಾನುಗಳ ಹೃದಯಗೀತವೆನಲು.**

ಇಲ್ಲಿ ಅನುಪ್ರಾಸವೆಂಬ ಶಬ್ದಾಲಂಕಾರವೂ ಉತ್ಪ್ರೇಕ್ಷೆಯೂ ಬೆರೆತಿವೆ. ಇದು ಸಂಸೃಷ್ಟಿ. ಒಂದು ಅಲಂಕಾರವು ಇನ್ನೊಂದರೊಡನೆ ಬೇರ್ಪಡಿಸಲಾಗದಂತೆ ಬೆರೆತಿದ್ದರೆ ಅದನ್ನು ಸಂಕರವೆಂದು ಕರೆಯಲಾಗುತ್ತದೆ. ಸಂಸೃಷ್ಟಿಯಲ್ಲಿ ಸಂಯೋಗ ನ್ಯಾಯವಾದರೆ, ಸಂಕರದಲ್ಲಿ ಸಮವಾಯ ನ್ಯಾಯ. ಇದನ್ನೇ ಕ್ಷೀರ – ನೀರನ್ಯಾಯ – ಹಾಲು – ನೀರುಗಳು ಬೆರತಂತೆ ಎಂದು ವಿವರಿಸಲಾಗಿದೆ. ( ಕ್ಷೀರ ನೀರನ್ಯಾಯೇನ ತು ಸಂಕರಃ – ರುಯ್ಯಕ ) ಈ ರೀತಿಯಲ್ಲಿ ಬೆರೆತುಕೊಂಡಿರುವುದು ಅಂಗಾಂಗಿಭಾವ, ಏಕವಾಚಕಾನುಪ್ರವೇಶ, ಮತ್ತು ಸಂದೇಹ ಎಂಬ ಮೂರು ಪ್ರಕಾರಗಳಲ್ಲಿ ಸಂಭವಿಸುತ್ತದೆ. ಅಂಗಾಂಗಿ ಭಾವವೆಂದರೆ ಅಲಂಕಾರಗಳು ಒಂದಕ್ಕೆ ಮತ್ತೊಂದು ಉಪಕಾರಕವಾಗುವುದು.

ಉದಾ :–

**ಉಭಯ ಸಂಕಟದ ಪಂಕದಿ ಹೂತ ಹೆಜ್ಜೆಯನೆ**
**ಏಳಲಾರದ ಗಾಳಿ ಊಳುತ್ತಿದೆ;**
**ಮೊದಲ ಸಾಲಿನ ಎರಡು ನುಡಿ ಮಿಡಿದು ಅಡಗುವೊಲು**
**ಹಕ್ಕಿಗೊರಳದೊ ಜಿನುಗಿ ಆರುತ್ತಿದೆ.**

——ಗೋಪಾಲಕೃಷ್ಣ ಅಡಿಗ ' ಸಮಗ್ರಕಾವ್ಯ '. (ಪುಟ – ೧೭೧)

ಇಲ್ಲಿ ಮೊದಲಿನ ಎರಡು ಸಾಲುಗಳಲ್ಲಿ ರೂಪಕ ಹಾಗೂ ಉತ್ಪ್ರೇಕ್ಷೆಗಳ ಸಂಕರವಿದೆ. ಒಂದೇ ವಾಚಕವನ್ನಾಶ್ರಯಿಸಿ ಎರಡು ಅಲಂಕಾರಗಳಿದ್ದರೆ ಏಕವಾಚಕಾನುಪ್ರವೇಶ. ಉದಾ:– ಕಿರಣ – ಕೇಸರ. ಇಲ್ಲಿ ಅನುಪ್ರಾಸ – ರೂಪಕಗಳ ಸಂಕರವಿದೆ. ಅನೇಕ ಅಲಂಕಾರಗಳು ಸೇರಿದಾಗ ಯಾವುದೆಂದು ತೀರ್ಮಾನಿಸಲು ಸಾಧ್ಯವಾಗದ ಸ್ಥಿತಿಗೆ ಸಂದೇಹ ಸಂಕರವೆನ್ನುತ್ತಾರೆ.

ಸಾಮಾನ್ಯವಾಗಿ ಹೆಚ್ಚಿನ ಪದ್ಯಗಳು ಸಂಸೃಷ್ಟಿಯೋ ಸಂಕರವೋ ಆಗಿರುವುದನ್ನು ಕಾಣಬಹುದು. ಆದರೂ ಅಲಂಕಾರಗಳಿಗೆ ಉದಾಹರಣೆಯನ್ನು ಕೊಡುವಾಗ ಈ ಅಂಶವನ್ನು ಅಲಕ್ಷಿಸುವುದು ಆಲಂಕಾರಿಕರ ಕ್ರಮ. ಅಲಂಕಾರಗಳನ್ನು ಚಿತ್ರಕಾವ್ಯದ ವರ್ಗಕ್ಕೆ ಸೇರಿಸಿದರೂ ಅವು ರಸಾದಿಗಳಿಗೆ ಪರಿಪೋಷಕವಾಗಿರುವ ಸಂದರ್ಭಗಳುಂಟು. ಅಲಂಕಾರತತ್ತ್ವವನ್ನು ವಿಶದಪಡಿಸುವ ದೃಷ್ಟಿಯಿಂದ ಅವುಗಳನ್ನು ಪರಿಗಣಿಸದೆಯೇ ನಿರ್ದೇಶಿಸುವ ಅಂಶವು ಇದೆಯೋ ಇಲ್ಲವೋ ಎಂಬುದನ್ನು ಮಾತ್ರ ನೋಡಬೇಕಾಗುತ್ತದೆ. ಇದು ಇತರ ಕವಿಗಳಿಂದ ಉದಾಹರಣೆಗಳನ್ನು ಆಯ್ದು ಕೊಡುವಾಗ ಮಾತ್ರವಲ್ಲ, ಲಕ್ಷಣಕ್ಕೆ ಉದಾಹರಣೆಗಾಗಿ ಸ್ವತಃ ಪದ್ಯ ರಚನೆಯನ್ನು ಮಾಡಿದಾಗಲೂ ಅನ್ವಯಿಸುತ್ತದೆ. ಕೇವಲ ಒಂದೇ ಅಲಂಕಾರವುಳ್ಳ ಪದ್ಯವನ್ನು ರಚಿಸಲು ಹೊರಟರೆ ಅದು ನೀರಸವಾಗುತ್ತದೆಯೆಂಬ ಅಂಶವನ್ನೂ ಆಲಂಕಾರಿಕರು ಗಮನಿಸಿದ್ದಾರೆ.

ಹಾಗಿದ್ದರೂ ಸಂಸೃಷ್ಟಿ ಮತ್ತು ಸಂಕರಗಳನ್ನು ಅಲಂಕಾರಗಳ ಮಿಶ್ರಣವೆಂದು ಕರೆಯುವುದಿಲ್ಲ. ಮಿಶ್ರಾಲಂಕಾರಗಳೆಂದೇ ಗುರುತಿಸುತ್ತಾರೆ. ಅಂದರೆ ವಿವಿಧ ಅಲಂಕಾರಗಳು ಅಲ್ಲಿ ಸೇರಿದ್ದರೂ ಅವು ಸೌಂದರ್ಯ ಪ್ರತೀತಿಯಲ್ಲಿ ಒಟ್ಟಾಗಿ ದುಡಿಯುತ್ತವೆಯೆಂಬುದು ಮಹತ್ವದ ಅಂಶ. ವಿಶ್ಲೇಷಣೆಯ ಅನುಕೂಲಕ್ಕಾಗಿ ಅವುಗಳನ್ನು ಬೇರ್ಪಡಿಸಲಾಗುತ್ತದೆಯೇ ಹೊರತು ಸೌಂದರ್ಯಾನುಭವವು ಅಖಂಡವೂ ಅವಿಭಕ್ತವೂ ಆಗಿರುವುದೆಂಬುದನ್ನು ಗಮನಿಸುವುದು ಅಗತ್ಯ.



# ಪರಿಶಿಷ್ಟ

## ಅಲಂಕಾರ ತತ್ವಗಳು .

( ವಿ. ಸೂ:– ಈ ಗ್ರಂಥದಲ್ಲಿ ನಿರೂಪಿಸಿದ ಅಲಂಕಾರಗಳ ಹಿನ್ನೆಲೆಯಲ್ಲಿರುವ ತತ್ವವನ್ನು ಮಾತ್ರ ಇಲ್ಲಿ ನಿರೂಪಿಸಲಾಗಿದೆ. ಇವು ಶಾಸ್ತ್ರೀಯವಾದ ಲಕ್ಷಣಗಳಲ್ಲ.)

| ಅಲಂಕಾರ | ಉದಾಹರಣೆ |
|---|---|
| ೧. ಸುಂದರವಾದ ಸಾದೃಶ್ಯವು ಉಪಮೆ . | ರೇಶಿಮೆಯಂತೆ ನುಣುಪಾದ ಮೈ. |
| ೨. ದ್ವಿತೀಯ ಸದೃಶ ವ್ಯವಚ್ಛೇದವು ಅನನ್ವಯ | ಗಗನವು ಗಗನದಂತೆ . |
| ೩. ತೃತೀಯ ಸದೃಶ್ಯ ವ್ಯವಚ್ಛೇದವು ಉಪಮೇಯೋಪಮಾ | ಮುಖವು ಕಮಲದಂತೆ; ಕಮಲವು ಮುಖದಂತೆ. |
| ೪. ಉಪಮಾನನಿಂದೆ– ಉಪಮೇಯೀಕರಣವು ಪ್ರತೀಪ. | ೧. ನೀನಿರುವಾಗ ಕಲ್ಪವೃಕ್ಷವೇಕೆ?<br>೨. ಹಾಲಾಹಲವು ಅವನ ಮಾತಿನಂತೆ |
| ೫. ಉಪಮೇಯಾಧಿಕ್ಯ ಸ್ಥಾಪನೆ ವ್ಯತಿರೇಕ . | ಉಟ್ಟ ರೇಶಿಮೆಗಿಂತ ನಿನ್ನ ಮೈ ನುಣುಪು. |
| ೬. ಬಿಂಬ –ಪ್ರತಿಬಿಂಬಭಾವವು ದೃಷ್ಟಾಂತ . | ಸೂರ್ಯೋದಯವಾದಾಗ ಕಮಲ ಅರಳುತ್ತದೆ ; ನಿನ್ನನ್ನು ಕಂಡಾಗ ಹರ್ಷ ಹೆಚ್ಚುತ್ತದೆ. |
| ೭. ಧರ್ಮೈಕ್ಯ ಅನೇಕ ಕ್ರಿಯಾವರ್ಣನೆಗಳು ದೀಪಕ. | ೧. ಲೋಕ –ಮನಸ್ಸುಗಳನ್ನು ಕತ್ತಲೆ ಆವರಿಸಿತು .<br>೨. ಕೂಗಿ ಕುಣಿದು ಹಾರಿ ನೆಗೆದು ಬಿದ್ದನು. |
| ೮. ಅಭೇದಾರೋಪವು ರೂಪಕ. | ನಿಸರ್ಗರಂಗದಲ್ಲಿ ಲತಾನಟಿಯ ನರ್ತನ. |
| ೯. ಸಂಭಾವನೆಯು ಉತ್ಪ್ರೇಕ್ಷೆ . | ಮುಂಜಾವಿನ ಮಂಜಿನ ಹನಿಗಳು ಕಣ್ಣೀರ ಹನಿಗಳೋ ಏನೋ ಎಂಬಂತೆ ಕಂಡವು . |
| ೧೦ . ಅಧ್ಯವಸಾನವು ಅತಿಶಯೋಕ್ತಿ. | ಕಮಲದಲ್ಲೆರಡು ಕಮಲಗಳು . |
| ೧೧ . ಅನೇಕಾರ್ಥ ಸಂಶ್ರಯವು ಶ್ಲೇಷ . | ಸಾವಿರದಾಚೆಗಿನದು ಲಕ್ಷ . |
| ೧೨ . ಸಮರ್ಥ್ಯ ಸಮರ್ಥಕಭಾವವು ಅರ್ಥಾಂತರನ್ಯಾಸ | ಹೊರಬಲ್ಲವರಿಗೆ ಹೊರೆ ಹೆಚ್ಚು; ಸೊಕ್ಕಿದ ಗೂಳಿಗೆ ಸುಖ ನಿದ್ದೆ. |

೧೩. ಸಂಶಯವು ಸಂದೇಹ. — ಹುಡುಗಿಯೋ ? ಮಿಂಚಿನ ಬಳ್ಳಿಯೋ?

೧೪. ಸದೃಶ್ಯವಸ್ತು ಸ್ಮರಣವು ಸ್ಮರಣ. — ಹಾವಿನ ಹೆಡೆಯನ್ನು ಕಂಡಾಗ ಜಡೆಯ ನೆನಪು.

೧೫. ತಪ್ಪಾಗಿ ತಿಳಿಯುವುದು ಭ್ರಾಂತಿ. — ಬೆಳ್ದಿಂಗಳನ್ನು ಹಾಲೆಂದು ಬೆಕ್ಕು ಕುಡಿಯಲೆಳಸಿದೆ.

೧೬. ಪ್ರಕೃತ ನಿಷೇಧ ಅನ್ಯ ಸ್ಥಾಪನೆಯು ಅಪಹ್ನುತಿ — ಇದು ಮುಖವಲ್ಲ, ಚಂದ್ರ.

೧೭. ವಸ್ತುವೊಂದನ್ನು ಅನೇಕ ವಿಧವಾಗಿ ಕಾಣುವುದು ಉಲ್ಲೇಖ. — ಚಲುವೆಯರಿಗೆ ಚಲ್ವ, ಮಲ್ಲರಿಗೆ ಮಲ್ಲ

೧೮. ಸಹಭಾವವು ಸಹೋಕ್ತಿ. — ಮಂದಿಯೊಡನೆ ಹಂದಿಗಳೂ ಬಂದವು.

೧೯. ವಿನಾಭಾವವು ವಿನೋಕ್ತಿ. — ಮಕ್ಕಳಿಲ್ಲದ ಮನೆ ಚಂದವಲ್ಲ.

೨೦. ವ್ಯವಹಾರ ಸಮಾರೋಪವು ಸಮಾಸೋಕ್ತಿ. — ಅನುರಾಗವತೀ ಸಂಧ್ಯೆ, ದಿವಸವಾಕೆಯ ಮುಂದೆ.

೨೧. ಸಾಭಿಪ್ರಾಯ ವಿಶೇಷಣವು ಪರಿಕಾರ. — ಅತೀ ಸುಕುಮಾರನಿಗೇಕೆ ತಪಸ್ಸು ?

೨೨. ಅಪ್ರಸ್ತುತ ಕಥನವು ಅಪ್ರಸ್ತುತ ಪ್ರಶಂಸೆ — ಕಾಗೆಗೂ, ಕೋಗಿಲೆಗೂ ಬಣ್ಣವೊಂದೇ.

೨೩. ಪ್ರಕಾರಾಂತವಚನ ಪರ್ಯಾಯೋಕ್ತಿ. — ಸ್ವರಳು ಮಾನಿನಿಗೆ ವೈಧವ್ಯ ದೀಕ್ಷೆಯ ಕೊಡಬಹುದೇ?

೨೪. ನಿಷೇಧಾಭಾಸವು ಆಕ್ಷೇಪ. — ಹೇಳುತ್ತೇನೆ ಅಥವಾ ಹೇಳುವುದೇಕೆ? ಹೋಗು.

೨೫. ಅಭವನ್ ವಸ್ತುಸಂಬಂಧವು ನಿದರ್ಶನಾ * — ಕಿವುಡನಲ್ಲಿ ಗುಟ್ಟಾಗಿ ಹೇಳಿದವನು ಈ ಕೆಲಸ ಮಾಡಿಯಾನು.

೨೬. ವಿರೋಧದ ತೋರಿಕೆಯು ವಿರೋಧಾಭಾಸ. — ಚಂದ್ರನು ಸೂರ್ಯನಾದನು; ರಾತ್ರಿಯು ಹಗಲಾಯಿತು.

೨೭. ಅನನುರೂಪ ಸಂಸರ್ಗವು ವಿಷಮ — ಒಣಗಿದ ಮರಕ್ಕೆ ಮಲ್ಲಿಗೆ ಬಳ್ಳಿ

೨೮. ಅನುರೂಪ ಸಂಸರ್ಗವು ಸಮ — ಮಾವಿನ ಮರಕ್ಕೆ ಮಲ್ಲಿಗೆ ಬಳ್ಳಿ.

೨೯. ಕಾರಣವಿದ್ದರೂ ಕಾರ್ಯವಿಲ್ಲ–ವಾದರೆ ವಿಶೇಷೋಕ್ತಿ. — ಸತ್ತರೂ ಬದುಕಿದ್ದಾನೆ.

೩೦. ಕಾರಣವಿಲ್ಲದೆ ಕಾರ್ಯವು ವಿಭಾವನೆ — ಹಬ್ಬ ತಪ್ಪಿದರೂ ಹೋಳಿಗೆ ತಪ್ಪಲಿಲ್ಲ.

೩೧. ಕಾರ್ಯ ಕಾರಣಗಳ ಭಿನ್ನ ದೇಶವು ಅಸಂಗತಿ. — ಅವನ ಕೆನ್ನೆಗ ಏಟು; ಇವಳ ಕಣ್ಣಲ್ಲಿ ನೀರು.

| | |
|---|---|
| ೩೨. ಆಧಾರವಿಲ್ಲದ ಆಧೇಯವು ವಿಶೇಷ. | ಕವಿಗಳು ಸತ್ತರೂ ಅವರ ಮಾತುಗಳುಂಟು. |
| ೩೩. ಸರಪಳಿಯಂತಿರುವುದು ಏಕಾವಳಿ. | ತೋಟದಲ್ಲಿ ಮಾವು; ಮಾವಿನಲ್ಲಿ ಕೋಗಿಲೆ. |
| ೩೪. ಉತ್ತರೋತ್ತರ ಉತ್ಕರ್ಷವು ಸಾರ. | ಮನೆಗೆ ಮಡದಿ ಚಂದ; ಮಡದಿಗೆ ಹರೆಯ ಚಂದ. |
| ೩೫. ಕಲ್ಪಿತ ಕಾರಣವು ಕಾವ್ಯಲಿಂಗ. | ಬಾಣೆಯವಲ್ಲಭ ಬಾಣನು ಜಗದ್ವಂದ್ಯ. |
| ೩೬. ಸಾಧ್ಯ–ಸಾಧನ ನಿರ್ದೇಶವು ಅನುಮಾನ. | ಗಿಣಿಯ ಮೂಗು ಕೆಂಪು; ವಿರಹಾಗ್ನಿಯಲ್ಲಿ ಬೆಂದಿದ್ದರಿಂದ. |
| ೩೭. ಸಂಖ್ಯಾಕ್ರಮವು ಯಥಾಸಂಖ್ಯಾ. | ಕೋಗಿಲೆ, ಗಿಳಿ, ಅಳಿಲುಗಳು ಮಾವಿನತಳಿರು ಹಣ್ಣು ಹೂಗಳಲ್ಲಿ. |
| ೩೮. ಆಧಾರ ಆಧೇಯ ವ್ಯತ್ಯಾಸವು ಪರ್ಯಾಯ. | ಅವನ ಕಣ್ಣು ಮುಖದಲ್ಲಿ ಸುಳಿದು ಕುತ್ತಿಗೆಯನ್ನು ಬಳಸಿತು. |
| ೩೯. ವಿನಿಮಯವು ಪರಿವೃತ್ತಿ. | ಮುತ್ತು ಕೊಟ್ಟು ಪೆಟ್ಟು ಕೊಂಡದ್ದು ದುಬಾರಿ. |
| ೪೦. ನಿಯಮನವು ಪರಿಸಂಖ್ಯೆ. | ಬಡತನವು ಸೊಂಟದಲ್ಲಿಯೆ ಹೊರತು ಊರಿನಲ್ಲಿಲ್ಲ. |
| ೪೧. ಗುಣ ಕ್ರಿಯೆಗಳ ಯೌಗ ಪದ್ಯ ಹಾಗು ಕಾರಣ ಬಹುತ್ತ್ವಗಳ ಸಮುಚ್ಚಯ. | ೧) ಭಯಾಶ್ಚರ್ಯ ಹಾಸಗಳು ಒಮ್ಮೆಗೇ ಮೂಡಿದವು. |
| | ೨) ಒಂದೇ ಹಣ್ಣಿಗೆ ಎರಡೂ ಕಲ್ಲುಗಳು ಬಿದ್ದವು. |
| ೪೨. ಸದೃಶ ವಸ್ತುವಿನಲ್ಲಿ ಮರೆಯಾಗುವುದು ಮೀಲಿತ. | ಉದ್ದಿನ ಮೂಟೆಯಲ್ಲಿ ಮಸಿಯ ಗುಳಿಗೆ ಮರೆಯಾಯಿತು. |
| ೪೩. ಮತ್ತೊಂದರ ಗುಣ ಸ್ವೀಕಾರ ತದ್ಗುಣ. | ಕೇಶಕಾಂತಿಯಿಂದ ಮಲ್ಲಿಗೆ ಕಪ್ಪಾಯಿತು. |
| ೪೪. ವಸ್ತುವರ್ಣನೆ ಸ್ವಭಾವೋಕ್ತಿ | ಗುಳಿಬಿದ್ದ ಕಣ್ಣು; ಡೊಳ್ಳ ಹೊಟ್ಟೆ; ಕರಿಯ ಕಂಬಳಿ ಹೊದ್ದವ. |
| ೪೫. ನಿಂದಾಸ್ತುತಿ, ವ್ಯಾಜಸ್ತುತಿ. | ನವನೀತ ಚೋರನಿಗೆ ನಮಸ್ಕಾರ. |
| ೪೬. ಸಂಸೃಷ್ಟಿ –ಸಂಕರ : | ತಿಲ ತಂಡುಲದಂತೆ ಸಂಸೃಷ್ಟಿ<br>ಹಾಲು ನೀರಿನಂತೆ ಸಂಕರ. |



# ನಮ್ಮ ಕೆಲವು ಸಂಗ್ರಾಹ್ಯ ಪ್ರಕಟಣೆಗಳು

ಚಾಣಕ್ಯ ದರ್ಶನ
ಕನ್ನಡ ಭಾಷಾಸ್ವರೂಪ
ಶ್ರೀ ಚಿದಂಬರ ಚರಿತ್ರೆ
ಸುಖಸಾಧನ
ಕನ್ನಡ ವ್ಯಾಸಭಾರತ
ಕ್ಷಣ ಕ್ಷಣಕೂ ಹೊಸ ಬದುಕಿಗೆ
ಆಧುನಿಕ ವರ್ಣನಾತ್ಮಕ ಭಾಷಾ ವಿಜ್ಞಾನ
ಶಿಕ್ಷಣ ಮತ್ತು ಜೀವನದ ಅರ್ಥ
ಅರಿವು [illegible]
ಶೈಕ್ಷಣಿಕ ತಂತ್ರಜ್ಞಾನ- ಸಂಖ್ಯಾಶಾಸ್ತ್ರ
ಪಾಶ್ಚಾತ್ಯ ಕಾವ್ಯಮೀಮಾಂಸೆ
ಕನ್ನಡ ಗ್ರಂಥ ಸಂಪಾದನಶಾಸ್ತ್ರ
ಬಾಣಕಾದಂಬರಿ
ಜಾಗತಿಕ ಸತ್ಯಗಳು
ವಿದ್ಯಾರ್ಥಿಗಳಿಗೆ ಸಿದ್ಧ ಭಾಷಣಗಳು
ವಿದ್ಯಾರ್ಥಿ ಸನ್ಮಾರ್ಗದರ್ಶಿನಿ
ಕನ್ನಡ ಪಡೆನುಡಿಗಳ ಬೃಹತ್‌ಕೋಶ
ಮಹಾಭಾರತದಲ್ಲಿ ಧರ್ಮ
ತೆನ್ನಾಲಿ ರಾಮಕೃಷ್ಣನ ಕಥೆಗಳು
ಮಕ್ಕಳ ನಿತ್ಯಪಾಠ
ಬೇತಾಳ ಹೇಳಿದ ಕಥೆಗಳು
ಸಿರಿಗನ್ನಡ ಪಂಚತಂತ್ರ
ಗೀತಾಂಜಲಿ
ಕ್ರಿಯಾತ್ಮಕ ಯೋಗಾಸನಗಳು
ಶಿಶುನಾಳರ ಅನುಭಾವ ಗೀತಮಂಜರಿ
ಹೊಯ್ಸಳರ ಇತಿಹಾಸ

ಚಾಲುಕ್ಯರ ಇತಿಹಾಸ
ರಾಷ್ಟ್ರಕೂಟರ ಇತಿಹಾಸ
ಕದಂಬ-ಗಂಗರ ಇತಿಹಾಸ
ಚೆಲುವ ಕನ್ನಡನಾಡು
ಬೋಧರಹಸ್ಯ
ಕನ್ನಡ ಭಾಷಣ ಕಲೆ
ಮಕ್ಕಳ ರಾಮಾಯಣ
ಮಕ್ಕಳ ಮಹಾಭಾರತ
ಮಕ್ಕಳ ಭಾಗವತ
ಮೀರಾಬಾಯಿ ಕೀರ್ತನೆಗಳು
ಬೀರಬಲ್ಲನ ಕಥೆಗಳು
ಅಲೋಪಥಿ ಚಿಕಿತ್ಸೆ
ಫೋಟೋಗ್ರಾಫಿ
ಕರಾಟೆ
ಜುಡೋ
ಶಿವಪುರಾಣ
ಪರಾಶರ ಸ್ಮೃತಿ
ಪ್ರತಿಫಲನ
ಆಧುನಿಕ ಹೊಲಿಗೆ ಶಾಸ್ತ್ರ
[illegible]ಕರಸಾಯನ
[illegible]
[illegible]ಪ್ರಾಥಮಿಕ ಶಿಕ್ಷಣ
[illegible]ಟ-ಪಂದ್ಯಗಳು
[illegible]ಕೋದ್ಯಮ
[illegible]ೋಗವಾಸಿಷ್ಠ
ಯಾಜ್ಞವಲ್ಕ್ಯಸ್ಮೃತಿ
ಬೆಳ್ಳಿತಿಂಮ ೧೦೮ ಹೇಳಿದ

Rs.75-00

ISBN - 81-7627-009-1